# ಬರಹ ಎಂದರೆ.....

ಡಾ. ಕೇಶವ ಶರ್ಮ ಕೆ.

ಯುಕ್ತ ಪ್ರಕಾಶನ
ನಂ. 2109, ಮದ್ವಚಾರ್ ರಸ್ತೆ,
ಕೆ. ಆರ್. ಮೊಹಲ್ಲಾ
ಮೈಸೂರು – 570004

**BARAHA ENDARE.....**

Written by
**Dr. Keshavasharma K.**
Proffessor
Kannada Dept.
Kuvempu University, Jnanasahydri
Shankaragatta, Shimoga-577451
Mob: 9448730611
email: dr.keshavasharma.k@gmail.com

Published by
**Yuktha Prakashana**
No. 2109, Madvachar Road,
K. R. Mohalla, Mysuru-570004

**ISBN : 978-81-951931-6-5**

First Impression : 2020

Copies : 1000
Page : viii + 192 + 4 = 204
Price : Rs. 210/-
Paper used : Maplitho
D.T.P. : Anukshana Creations
Cover Page Design : Kiran
Printed at : Printculture, Mysuru

# ಲೇಖಕರ ಮಾತು

ಬರೆಯುವುದು ಯಾಕೆ? ಯಾರಿಗೆ ಬರೆಯುತ್ತಿದ್ದೇವೆ? ಹೇಗೆ ಬರೆಯುತ್ತಿದ್ದೇವೆ? ನಾವು ಬರೆದುದನ್ನು ಯಾರು ಓದುತ್ತಾರೆ? ಎನ್ನುವ ಅಂಶಗಳು ಇಂದಿನ ತಾತ್ವಿಕವಾದ ಪ್ರಶ್ನೆಗಳಾಗಿವೆ. ನಾನು ಬರೆಯುವುದು ಒಂದು ಉದ್ದೇಶವನ್ನು ಇಟ್ಟುಕೊಂಡು, ಒಂದು ಆಶಯುವನ್ನು ಇಟ್ಟುಕೊಂಡು ಬರೆಯುತ್ತಿದ್ದೇನೆ. ಆದರೆ ನನ್ನ ಬರಹವು ಯಾರಿಗೆ ತಲುಪುತ್ತದೆ ಎನ್ನುವುದು ಗೊತ್ತಿಲ್ಲ. ಕಾರಣ ನಾನು ಒಂದು ನಿಲುವು ಇಟ್ಟುಕೊಂಡು ಬರೆಯುತ್ತೇನೆ. ಅದು ನಾನು ಕಂಡುಕೊಂಡ ದಾರಿಯಾಗಿದೆ. ಎಷ್ಟೋ ಜನರು ನೀವು ಬರೆಯುವುದನ್ನು ಯಾರು ಓದುತ್ತಾರೆ ಎಂದು ಕೇಳುತ್ತಾರೆ. ಅವರ ಪ್ರಶ್ನೆ ಸರಿಯಾದ್ದು. ಒಂದು ವೇಳೆ ಯಾರೂ ಓದುವುದಿಲ್ಲ ಎಂದಾದರೆ ಬರೆಯುವುದನ್ನು ನಿಲ್ಲಿಸಲು ನನಗೆ ಸಾಧ್ಯವಿಲ್ಲ. ನನಗೆ ಬರೆಯುವುದು ಅಂದರೆ ಅದು ಜನರೊಂದಿಗೆ ನಾವು ನಡೆಸುವ ಒಂದು ಸಂವಾದ, ಒಂದು ಹಾದಿಯಾದರೆ. ಮತ್ತೊಂದು ತುಂಬಾ ವರ್ಷದಿಂದ ಬರೆಯುತ್ತಾ ಬಂದಿದ್ದೇನೆ. ಈ ದಾರಿಯಲ್ಲಿ ನನಗೆ ವಿವಿಧ ಅನುಭವಗಳು ಆಗಿವೆ. ಅದು ನಿಜ ಆದರೆ ಕಾಲವನ್ನು ನಾನು ವ್ಯರ್ಥವಾಗಿ ಕಳೆದಿಲ್ಲ. ನಿರಾಶೆಯನ್ನು ದಾಟಲು ನಮಗೆ ಇರುವ ಪರಿಕರಗಳಲ್ಲಿ ಇದೂ ಒಂದು.

ಪ್ರೊ. ಬಿ.ಪಿ. ವೀರಭದ್ರಪ್ಪ, ಕೆ.ವಿ.ಯನ್, ಫಣಿರಾಜ್, ಮೇಟಿ ಮಲ್ಲಿಕಾರ್ಜುನ, ರಂಗನಾಥ್, ವಿಠಲ, ಅವಿನಾಶ್, ಕಲ್ಗುಡಿ, ಬರಗೂರು, ಆರ್. ಜಿ.ಹಳ್ಳಿ, ಎಚ್.ಎಲ್ ಪುಷ್ಪ, ಮಾಲಗತ್ತಿ, ಡಾ. ಭಂಡಾರಿ ಹೀಗೆ ಅನೇಕ ಸ್ನೇಹಿತರಿಗೆ, ಪ್ರಕಟ ಮಾಡುತ್ತಿರುವ ಓಂಕಾರಪ್ಪರಿಗೆ, ಮುದ್ರಿಸಿದ ಕಮಲ್ ಇಂಪ್ರೆಷನ್ಸ್ ಅವರಿಗೂ ಮುಖಪುಟ ವಿನ್ಯಾಸ ಮಾಡಿದ ಕಿರಣ್ ಎಸ್.ವಿ., ಟೈಪ್ ಮಾಡಿದ ಮೇರಿಗೆ, ಕರಡು ತಿದ್ದಿದ ಸುನಿಲ್, ಅಭಿಲಾಷ, ಪಾಂಡು, ಮಂಜುನಾಥರಿಗೆ, ಸಬಿತ,ನಹುಷ, ನಿಯತಿಯರಿಗೆ ಮತ್ತು ಓದುತ್ತಿರುವ ನಿಮಗೆ ವಂದನೆಗಳು.

**ಕೇಶವ ಶರ್ಮ .ಕೆ**

# ಪರಿವಿಡಿ

■

# ಬರಹ

ಬರಹ ಮತ್ತು ಅದರ ಸಾಧ್ಯತೆಯು ಬೇರೆಯಾಗಿದೆ. ಅದನ್ನು ವಿವಿಧ ರೀತಿಯಲ್ಲಿ ನಿರೂಪಿಸುತ್ತೇವೆ. ಬರಹ ಎನ್ನುವುದು ಮಾತು ಅಲ್ಲ ಎನ್ನುವುದು ಎಲ್ಲರಿಗೂ ಗೊತ್ತು. ಲೇಖಕರು ನಮಗೆ ಸಿಕ್ಕಿದರೆ ನಾವು ಕೇಳುವ ಅತ್ಯಂತ ಮುಖ್ಯವಾದ ಒಂದು ಪ್ರಶ್ನೆ – ನೀವು ಈಗ ಏನು ಬರೆಯುತ್ತಿದ್ದೀರಿ? ಒಂದು ಖಾಲಿಯಾದ ಹಾಳೆಯ ಮೇಲೆ ಯಾವುಯದನ್ನು ಬರೆಯುತ್ತಿದ್ದೇವೆಯೋ ಅದನ್ನು ನಾವು ಬರಹ ಎಂದು ಹೇಳುತ್ತೇವೆ. ಬರಹ ಎನ್ನುವುದು ಒಂದು ಗುರುತು. ಬರಹ ಎಂದರೆ ಅದು ಕೇವಲ ಒಂದು ಸಾಮಾನ್ಯವಾದ ನಮ್ಮ ಸಂವೇದನೆಯನ್ನು ಹೇಳುವುದಿಲ್ಲ. ಅದರಲ್ಲಿ ಬೇರೆ ಆಯಾಮವೂ ಇದೆ. ಬರಹವನ್ನು ನಾವು ಅನೇಕ ಬಾರಿ ಒಂದು ಸ್ವಾಯತ್ತವಾದ ಪ್ರಕ್ರಿಯೆ ಎಂದು ಭಾವಿಸುತ್ತೇವೆ. ಆದರೆ ಅದು ಅಷ್ಟು ಸ್ವಾಯತ್ತವಲ್ಲ. ನಮಗೆ ನಮ್ಮ ಬಾಲ್ಯದಲ್ಲಿ ಮೊದಲು ಬರೆಯುವುದಕ್ಕೆ ಹೇಳಿಕೊಡುತ್ತಾರೆ. ಬರೆಯುವುದು ಅಂದರೆ ಅದನ್ನು ಒಂದು ಕೌಶಲ ಎಂದು ರೂಪಿಸಲು ಬೇಕಾದ ಶಿಸ್ತನ್ನು ರೂಪಿಸುತ್ತಾರೆ. ಅದರಲ್ಲಿ ಬರೆಯುವುದು ಅಂದರೆ ಅ, ಆ ಮುಂತಾದವುಗಳನ್ನು ಮತ್ತೆ ಮತ್ತೆ ಬರೆಯುವುದು. ಹೀಗೆ ಬರೆಯುತ್ತಾ ಅದನ್ನು ನೆನಪಿನಲ್ಲಿ ಇಟ್ಟುಕೊಳ್ಳುವುದು. ಅದು ನಮಗೆ ಹೆಚ್ಚು ಅಗತ್ಯವಾಗಿರುತ್ತದೆ. ಒಂದು ವೇಳೆ ನಮಗೆ ಬರೆಯಲು ಸಾಧ್ಯವಾಗುವುದಿಲ್ಲ ಎಂದರೆ ಆಗ ಅದರ ಚಹರೆಗಳು ಗೊತ್ತಾಗುವುದಿಲ್ಲ. ಬರಹಕ್ಕೆ ಒಂದು ರೇಖೆಯು ಇರುತ್ತದೆ. ಆ ರೇಖೆಯೇ ಅತ್ಯಂತ ಮುಖ್ಯ. ಬರಹವನ್ನು ನಾವು ಕಲಿಯುವುದು ಅಂದರೆ ನಿರ್ದಿಷ್ಟವಾದ ಜ್ಞಾನ ಮತ್ತು ಅದರ ಮಾದರಿಯ ಒಳಗೆ ನಾವು ಪ್ರವೇಶಮಾಡುವುದು ಕೂಡಾ ಸತ್ಯ. ನಾವು ಯಾವುದನ್ನು ಬರೆಯಬೇಕು ಎನ್ನುವುದು ನಮಗೆ ಬಿಟ್ಟದ್ದು. ಆದರೆ ಅದು ಪ್ರಜ್ಞಾಪೂರ್ವಕವಾದ ಪ್ರಕ್ರಿಯೆ. ಬರಹಕ್ಕೆ ಒಂದು ತಲ್ಲೀನತೆ ಎನ್ನುವುದು ಇರಬೇಕು. ನಾವು ತಲ್ಲೀನವಾಗದೆ ಬರೆಯಲು ಆಗುವುದಿಲ್ಲ. ಆದರೆ ಇಲ್ಲಿ ಬರಹವನ್ನು ನಾವು ಬೇರೆ ಬೇರೆ ಥರ ರೂಢಿಸಿಕೊಳ್ಳುತ್ತೇವೆ. ಬರಹವು ಅತ್ಯಂತ

ಮುಖ್ಯವಾದ ಪ್ರಕ್ರಿಯೆ. ಅದರಲ್ಲಿ ನಾವು ನಮ್ಮ ಕಲ್ಪನೆಯನ್ನು ಹೇಳಬಹುದು. ಅದರಲ್ಲಿ ನಾವು ಪತ್ರವನ್ನು ಬರೆಯಬಹುದು. ನಮ್ಮ ಮನಸ್ಸು ಮತ್ತು ಅದರ ಸ್ಥಿತಿಗೆ ಹಾಗೂ ಬರಹಕ್ಕೆ ಒಂದು ಸಂಬಂಧವೂ ಇದೆ. ಅತ್ಯಂತ ಸ್ಪಷ್ಟವಾದ ಮನೋಸ್ಥಿತಿಯು ನಮಗೆ ಅತ್ಯಂತ ಖಚಿತವಾದ ಬರಹವನ್ನು ರೂಪಿಸಲು ಕಾರಣವೂ ಆಗುತ್ತದೆ. ಅದು ಗುಣಾತ್ಮಕವಾದ ಒಂದು ಪ್ರಕ್ರಿಯೆ. ಬರಹವು ವ್ಯಾಕರಣಕ್ಕೆ ಬದ್ಧವಾಗಿರುತ್ತದೆ. ಆದರೆ ಅದು ಹಾಗೆ ಇರುವುದಕ್ಕೂ ಅದರ ರಚನೆಗೂ , ಒಂದು ಇತಿಹಾಸಕ್ಕೂ ಒಂದು ಸಂಬಂಧವು ಇದೆ. ಬರಹವು ಅಕ್ಷರಗಳ ಸಂಯೋಜನೆಯು ಆಗಿದೆ. ಹಾಗೆ ಮಾತಾಡುವುದಿದ್ದರೆ ನಾವು ಈವತ್ತು ಬರಹ ಮತ್ತು ಅದರ ಶಕ್ತಿಯನ್ನು ನಿರಾಕರಣೆ ಮಾಡಲು ಬರುವುದಿಲ್ಲ. ಸಮಾಜ ಮತ್ತು ಚರಿತ್ರೆಯು ಬದಲಾಗುವಾಗ ಅದಕ್ಕೆ ತಕ್ಕಂತೆ ನಮ್ಮ ಬರಹ ಮತ್ತು ಅದರ ಸ್ವರೂಪವೂ ಬದಲಾಗುತ್ತದೆ.  ಬರಹವು ನಮ್ಮ ಕಣ್ಣಿಗೆ ಕಾಣುತ್ತದೆ. ಆದ್ದರಿಂದ ಅದರ ಪಲ್ಲಟವೂ ನಮಗೆ ತಿಳಿಯುತ್ತದೆ. ಕತೆಯನ್ನು ಹೇಳುವುದು ಒಂದು ಕ್ರಮ, ಆದರೆ ನಾಟಕವನ್ನು ಬರೆಯುವುದು ಮತ್ತೊಂದು ಕ್ರಮ. ಇದಕ್ಕೆ ಮೂಲಭೂತವಾದ ವ್ಯತ್ಯಾಸವೂ ಇದೆ. ಈವತ್ತು ನಮ್ಮ ಅನೇಕ ಚರ್ಚೆಗಳು ಇದನ್ನು ಆಧರಿಸಿಕೊಂಡು ಇದೆ. ಆದ್ದರಿಂದ ಈವತ್ತು ಸಾಹಿತ್ಯ ಮತ್ತು ಅದರ ರೂಪಗಳನ್ನು ಹೇಳುವಾಗ  ಬರಹ ಮತ್ತು ಅದರ ರೂಪವನ್ನು ಒಂದು ಮಾನದಂಡವಾಗಿ ಇಟ್ಟುಕೊಂಡಿರುತ್ತೇವೆ. ಚರಿತ್ರೆಯನ್ನು ಅಧ್ಯಯನ ಮಾಡುವಾಗಲೂ ನಾವು ಬರಹ ಮತ್ತು ಅದರ ದಾಖಲೆಯನ್ನು ಹೆಚ್ಚು ಗಮನಿಸುತ್ತೇವೆ. ಚರಿತ್ರೆಯಲ್ಲಿ ಬರಹವೇ ಒಂದು ಸಾಕ್ಷಿಯಾಗಿದೆ. ಮನುಷ್ಯ ಮತ್ತು ಅವನ ಸ್ವಭಾವ, ಅವನು ಚರಿತ್ರೆಯಲ್ಲಿ ಭಾಗವಹಿಸುವ ಕ್ರಮ ಸಂಸ್ಕೃತಿಯ ಪ್ರಶ್ನೆಗಳು ಈವತ್ತು ಅತ್ಯಂತ ಮಹತ್ವದ ಸಂಕಥನಗಳೂ ಆಗಿವೆ. ಇವುಗಳು ನಮ್ಮ ಪ್ರಜ್ಞೆಯ ಮೇಲೆ ಪ್ರಭಾವವನ್ನು ಬೀರಿವೆ. ವಾಸ್ತವವಾಗಿ ಈವತ್ತು ಸಂಸ್ಕೃತಿಯ ಪ್ರಶ್ನೆಯು ಅತ್ಯಂತ ಹೆಚ್ಚು ಬಳಕೆಯು ಆಗುತ್ತದೆ. ಅದು ಮನುಷ್ಯರಿಗೆ ಸಂಬಂಧಪಟ್ಟದ್ದೂ ಆಗಿದೆ. ಯಾವುದು ಆಗಿದೆ ಮತ್ತು ಯಾವುದು ಆಗುತ್ತದೆ ಎನ್ನುವುದರ ಘರ್ಷಣೆಯಲ್ಲಿ ಸಂಸ್ಕೃತಿಯು ಹುಟ್ಟುತ್ತದೆ. ಅದರ ಚರ್ಚೆಯು ಅದರ ಮೇಲೆ ನಡೆಯುತ್ತದೆ. ನಾವು ಅನೇಕ ವಿಚಾರಗಳಲ್ಲಿ ಆಗುತ್ತೇವೆ. ನಿಸರ್ಗವು ಮಾತ್ರವೇ ನಮ್ಮನ್ನು ಸೃಷ್ಟಿ ಮಾಡಿಲ್ಲ., ನಮಗೆ ವಿವಿಧ ವೈಚಾರಿಕತೆಯು ಇದೆ ಎನ್ನುವುದೂ ಸ್ಪಷ್ಟ.  ನಮ್ಮ ಆಲೋಚನೆ ಮತ್ತು ನಮ್ಮ ಗ್ರಹಿಕೆಗಳು ನಮಗೆ ಅತ್ಯಂತ ಮುಖ್ಯ. ಇದನ್ನು ನಾವು ನಿಸರ್ಗ ದತ್ತವಾದ್ದು ಎಂದು ಹೇಳುವಂತೆ ಇಲ್ಲ. ಸಂಸ್ಕೃತಿಯು ಬೆಳೆಯುತ್ತದೆ. ಅದರ ಜೊತೆಗೆ ಅದು ಕೆಲವೊಮ್ಮೆ ಅತ್ಯಂತ ಕ್ರಾಂತಿಕಾರಕವಾದ

ಬದಲಾವಣೆಯನ್ನು ಅದು ತರುತ್ತದೆ. ಆದ್ದರಿಂದ ಸಂಸ್ಕೃತಿಯ ಮೌಲ್ಯಗಳು ಬದಲಾಗುತ್ತವೆ. ಪುನರುಜ್ಜೀವನದ ಅನಂತರ ಜೀವನ ಮತ್ತು ಅದರ ಮೌಲ್ಯಗಳ ಪ್ರಶ್ನೆಗಳು ಬೇರೆಯಾದವು. ಸ್ವಾತಂತ್ರ್ಯ ಮತ್ತು ಅದರ ಸಾಧ್ಯತೆಗಳ ಕುರಿತು ವಿವಿಧ ಸಾಧ್ಯತೆಗಳ ಕುರಿತು ಜಿಜ್ಞಾಸೆಗಳು ಬಂದವು. ನೀಶೆಯು ಇದರ ಕುರಿತು ಹೇಳುತ್ತಾನೆ. ಸ್ವಾತಂತ್ರ್ಯ ಮತ್ತು ಅದರ ಅಗತ್ಯಗಳು ಒಂದು ಕಡೆಗೆ ಇದ್ದರೆ ಮತ್ತೊಂದು ಕಡೆಗೆ ಲೇಖಕ ಮತ್ತು ಅವನ ಅಭಿವ್ಯಕ್ತಿ ಎನ್ನುವುದಕ್ಕೆ ವಿಶಿಷ್ಟತೆಯು ಬಂದಿತು. ಆಗಲೇ ಸೃಜನಶೀಲ ಎನ್ನುವುದು ಅತ್ಯಂತ ಮುಖ್ಯವಾಗತೊಡಗಿತು. ಆದ್ದರಿಂದ ಆಗಿನ ಕಲ್ಪನೆಗಳು ಬೇರೆಯಾದವು. ಕಂಬಾರರಲ್ಲಿ ಮಾತು ಬರಹ ಅಂತರ ತುಂಬಾ ಕಡಿಮೆ.

ಅವರಲ್ಲಿ ಸಂಸ್ಕೃತಿಯು ಇನ್ನೊಂದು ಅರ್ಥದಲ್ಲಿ ಬೇರೆ ರೂಪವನ್ನು ಪಡೆಯಿತು. ಅದನ್ನು ಕಟ್ಟಲಾಗಿರುವ ಹೊಸ ಪ್ರಜ್ಞೆ ಎಂದೂ ಹೇಳಬಹುದು. ಅದು ಸಹಜವಲ್ಲ ಎನ್ನುವುದನ್ನು ಇದು ಹೇಳುತ್ತದೆ. ಮನುಷ್ಯನು ಸಂಸ್ಕೃತಿಯನ್ನು ಕಟ್ಟುತ್ತಾನೆ. ಮನುಷ್ಯನು ತನ್ನ ಆಸಕ್ತಿ ಮತ್ತು ಬಯಕೆಗೆ ಅನುಸಾರವಾಗಿ ಸಂಸ್ಕೃತಿಯನ್ನು ರೂಪಿಸುತ್ತಾನೆ. ಸಹಜವಾದದ್ದು ಯಾವಾಗ ಕೃತಕವಾದ ಆವರಣದೊಳಗೆ ಬಂದಿತೋ ಆಗ ಅದರ ಅರ್ಥವು ಬೇರೆಯಾಯಿತು. ಅದು ಭಿನ್ನತೆಯ ಸೂಚನೆಯೂ ಆಗಿದೆ. ನಾವು ನಮ್ಮನ್ನು ರೂಪಿಸಿಕೊಳ್ಳುವುದು ಅಂದರೆ ನಾವು ನಮ್ಮ ಅಸ್ತಿತ್ವವನ್ನು ವಿವಿಧ ರೀತಿಯಲ್ಲಿ ಸಾಬೀತು ಮಾಡುವುದೂ ಹೌದು. ನಾವು ಕಾರ್ಮಿಕರು ಆಗಬಹುದು, ಇಲ್ಲವೇ ನಾವು ಅರ್ಚಕರೂ ಆಗಬಹುದು. ಇದು ನಮ್ಮ ಸಾಧ್ಯತೆ. ಈ ಸಾಧ್ಯತೆಯಲ್ಲಿ ನಮ್ಮ ಬರಹಗಳೂ ಇರುತ್ತವೆ. ಮನಸ್ಸು ಮಾಡಿದರೆ ನಾವು ಲೇಖಕರೂ ಆಗಲು ಸಾಧ್ಯ. ಅದರಲ್ಲಿಯೂ ಇವತ್ತು ಆಧುನಿಕ ನಾಗರಿಕತೆಯು ಸಂಸ್ಕೃತಿಯನ್ನು ಬೇರೆ ರೀತಿಯಲ್ಲಿ ವ್ಯಾಖ್ಯಾನ ಮಾಡುತ್ತದೆ. ಅದು ರಾಜಕೀಯ ಪ್ರಭುತ್ವ ಮತ್ತು ಅದರ ಸೂತ್ರಕ್ಕೆ ಅನುಸಾರವಾಗಿ ರೂಪುಗೊಂಡಿದೆ. ಪ್ರಭುತ್ವವು ನಾಗರಿಕ ಪ್ರಜೆಗಳನ್ನು ಬಯಸುತ್ತದೆ. ಅದಕ್ಕೆ ಅತ್ಯಂತ ನಿರ್ದಿಷ್ಟವಾದ ನೀತಿಯು ಇರುತ್ತದೆ. ರಾಜಕೀಯವಾಗಿ ಒಂದು ಪ್ರಭುತ್ವವನ್ನು ಅಂಗೀಕರಿಸುವುದು ಆಧುನಿಕ ನಾಗರಿಕತೆಯಲ್ಲಿ ಅತ್ಯಂತ ಅನಿವಾರ್ಯವಾಗಿದೆ. ಆದರೆ ಸುಸಂಸ್ಕೃತ ವ್ಯಕ್ತಿ ಎನ್ನುವುದಕ್ಕೆ ಬೇರೆ ವ್ಯಾಖ್ಯೆಯೂ ಇದೆ. ಆಧುನಿಕ ಸುಸಂಸ್ಕೃತ ನಾಗರಿಕತೆಯು ಹೇಗೆ ಇರುತ್ತದೆ ಎಂದು ಕಾಲ್‌ರಿಜ್ ಹೇಳುತ್ತಾನೆ. ಅವನು ಸುಸಂಸ್ಕೃತವಾದ ನಾಗರಿಕತೆ ಎಂದರೆ ಅದು ಮಾನವೀಯತೆಯನ್ನು ಆಧರಿಕೊಂಡಿದೆ ಎಂದು ಭಾವಿಸುತ್ತಾನೆ.ಎಲ್ಲಕ್ಕಿಂತ ಹೆಚ್ಚಾಗಿ

ನಾವು ಮನುಷ್ಯರಾಗಬೇಕು ಎನ್ನುವುದು ಅವನ ನಿಲುವು. ಆದರೆ ಇಲ್ಲಿ ಸಂಸ್ಕೃತಿ ಎನ್ನುವುದು ಮನುಷ್ಯತ್ವವನ್ನು ಹೇಳುತ್ತದೆ. ಕಂಬಾರರ ಜೈಸಿದ ನಾಯ್ಕ ಈ ಹಿನ್ನೆಲೆಯಲ್ಲಿಯೂ ವಿವೇಚಿಸಬಹುದು.

ಸಂಸ್ಕೃತಿ ಮತ್ತು ರಾಜಕಾರಣವನ್ನು ಬಿಟ್ಟು ಮಾತಾಡಿದರೂ ಒಂದು ಪ್ರಶ್ನೆಯು ನಮ್ಮ ಮುಂದೆ ಇರುತ್ತದೆ: ಮನುಷ್ಯ ಮೊದಲು. ಅನಂತರ ನಾಗರಿಕತೆ. ವ್ಯಕ್ತಿಯನ್ನು ಇದು ನಿರ್ದೇಶಿಸುತ್ತದೆ. ಆದರೂ ಮನುಷ್ಯತ್ವ ಎನ್ನುವುದರ ವ್ಯಾಖ್ಯೆಯು ನಿರ್ದಿಷ್ಟವಾಗಿ ಒಂದು ನೆಲೆಯನ್ನು ಮಾತ್ರವೇ ಹೇಳುತ್ತದೆ. ಒಂದು ಹಂತದಲ್ಲಿ ಅದು ಏಕಮುಖ್ಯವಾದ ನಿರ್ಧಾರವಾಗಿರುತ್ತದೆ. ಸಂಸ್ಕೃತಿ, ರಾಜಕಾರಣ ಮತ್ತು ಆರ್ಥಿಕತೆ ಹಾಗೂ ಚರಿತ್ರೆಯು ಮನುಷ್ಯತ್ವ ಎನ್ನುವುದನ್ನು ಹೇಳುತ್ತದೆ.

ಅದರ ಜೊತೆಗೆ ವ್ಯಕ್ತಿಯಾಗಿ ನಮ್ಮ ಗುಣ ಮತ್ತು ಸ್ವಭಾವಗಳು ಬರಹದ ಮೇಲೆ ಪ್ರಭಾವವನ್ನು ಬೀರುತ್ತದೆ. ಬರೆಯುವುದು ಅಂದರೆ ಅದು ನಮ್ಮನ್ನು ನಾವು ಒಂದು ಚಟುವಟಿಕೆಯಲ್ಲಿ ತೊಡಗಿಸಿಕೊಳ್ಳುವುದೂ ಹೌದು. ಯಾವಾಗ ನಮ್ಮ ಬಾಹ್ಯವು ಬದಲಾಗುತ್ತದೆಯೋ ಆಗ ನಮ್ಮ ಬರಹ ಮತ್ತು ಅದರ ರೂಪಗಳೂ ಬದಲಾಗುತ್ತವೆ. ಬರೆಯುವುದು ಬೇರೆ, ಹೇಳುವುದು ಬೇರೆ ಮತ್ತು ಓದುವುದು ಬೇರೆ ಎನ್ನುವುದು ನಮಗೆ ಗೊತ್ತು. ಈ ಮೂರರ ಕೌಶಲದಲ್ಲಿ ವ್ಯತ್ಯಾಸವೂ ಇದೆ. ಅಷ್ಟೇ ಅಲ್ಲ, ಈ ಮೂರರಲ್ಲಿ ಸಮಾಜ ಮತ್ತು ಚರಿತ್ರೆಯ ಸಂಬಂಧಗಳೂ ಬೇರೆ ಇರುತ್ತವೆ. ಆಧುನಿಕ ಜಗತ್ತು ಬರಹದ ಮತ್ತೊಂದು ಸಾಧ್ಯತೆಯನ್ನು ನಮಗೆ ಹೇಳುತ್ತದೆ: ಅದು ಬರಹ ಮತ್ತು ಸಾಹಿತ್ಯದ ಸಂಬಂಧ. ಸಾಹಿತ್ಯವು ನಮಗೆ ಹೊಸದಾದ ನಿರ್ವಚನವನ್ನು ಕೊಟ್ಟದ್ದು ನಿಜ. ಲೇಖನಿಯಿಂದ ಯಾರಿಗೆ ಬರೆಯಲು ಸಾಧ್ಯವಾಗುತ್ತದೆಯೋ ಅವರೆಲ್ಲಾ ಲೇಖಕರು ಎನ್ನುವ ಧ್ವನಿಯು ಬಂದಿದೆ. ಆದರೆ ಆಧುನಿಕ ಬರಹಕ್ಕೆ ಕೂಡಾ ಸಮಾಜ, ಆರ್ಥಿಕತೆ, ರಾಜಕಾರಣ ಮತ್ತು ಚರಿತ್ರೆಗಳು ಪರಿಣಾಮವನ್ನು ಬೀರಿವೆ. ಬರಹ ಎನ್ನುವುದು ಸಮಾಜದಲ್ಲಿ ಅತ್ಯಂತ ಮುಖ್ಯವಾದ ಒಂದು ಕ್ರಿಯೆ. ಅದು ಸಾರ್ವಜನಿಕವೂ ಹೌದು. ಮೌಖಿಕವಾದ ಸಾಹಿತ್ಯ ಮತ್ತು ಬರಹದ ಸಾಹಿತ್ಯ ಎನ್ನುವುದು ಬೇರೆ ಬೇರೆ ಪ್ರಕ್ರಿಯೆಗಳು. ಬರಹವನ್ನು ನಾವು ಜ್ಞಾನದ ಒಂದು ರೂಪ ಎಂದು ಹೇಳುವುದಿದ್ದರೆ ಅದರ ಅರ್ಥವು ಬೇರೆಯಾಗುತ್ತದೆ. ಒಬ್ಬ ಕಾರಕೂನ ಮತ್ತು ಒಬ್ಬ ಲೇಖಕ ಬರೆಯುವ ಕ್ರಮಗಳು ಬೇರೆ ಇರುತ್ತವೆ. ಬರಹ ಮತ್ತು ಮುದ್ರಣ ಸಂಸ್ಕೃತಿಯು ಬಂದಾಗ ಅನೇಕ ಲೇಖಕರಿಗೆ ಹೊಸದಾದ ಸಾಧ್ಯತೆಯು ಬಂದಿರುವುದು ನಿಜ. ಮೌಖಿಕ ಸಂಸ್ಕೃತಿಯಿಂದ ಬರಹದ ಸಂಸ್ಕೃತಿಗೆ ಬರುವುದು ಎಂದರೆ ಅದು

ಅತ್ಯಂತ ದೊಡ್ಡದಾದ ಪಲ್ಲಟವೂ ಆಗಿರುತ್ತದೆ. ಬರಹ ಮತ್ತು ಅದರ ಮತ್ತೊಂದು ಸಾಧ್ಯತೆಯನ್ನು ನಾವು ನಾಟಕದಲ್ಲಿ ಕಾಣುತ್ತೇವೆ. ನಾಟಕದಲ್ಲಿ ಬರಹವು ದೊಡ್ಡದಾದ ಧ್ವನಿಯನ್ನು ಅಪೇಕ್ಷೆ ಪಡುತ್ತದೆ. ನಾಟಕ ಮತ್ತು ಅದರ ಓದು ಎನ್ನುವುದು ಈವತ್ತು ನಮಗೆ ಅದರ ಪ್ರದರ್ಶನದ ಆಯಾಮವನ್ನು ಹೇಳುತ್ತದೆ. ನಾಟಕವು ಈ ಕಾರಣದಿಂದ ಅದು ಬೇರೆ ಸಂಗತಿಯನ್ನು ಹೇಳುತ್ತದೆ. ಅದರಲ್ಲಿ ಸಮಾಜ ಮತ್ತು ಅದರ ಜೊತೆಗೆ ಇರುವ ಸಂಬಂಧವು ಬೇರೆ ಇರುತ್ತದೆ. ಬರಹ, ಮುದ್ರಣ, ಓದುಗರು ಮತ್ತು ಸಮಾಜದ ಜೊತೆಗೆ ಇರುವ ಸಂಬಂಧವು ಈ ದೃಷ್ಟಿಯಿಂದ ನಮಗೆ ವಿವಿಧ ಆಯಾಮವನ್ನು ಹೇಳುತ್ತವೆ. ಅದು ಅತ್ಯಂತ ಮುಖ್ಯ. ಮೌಖಿಕ ಮತ್ತು ಅದರ ಸಂಕಥನಗಳು ಒಂದು ಥರ ಇದ್ದರೆ ಬರಹ ಮತ್ತು ಅದರ ಸಂಕಥನಗಳು ಮತ್ತೊಂದು ನಮೂನೆಯಲ್ಲಿ ಇರುತ್ತದೆ. ಅಷ್ಟೇ ಅಲ್ಲ ಮುದ್ರಣ ಮಾಧ್ಯಮವು ನಮಗೆ ಪಠ್ಯವನ್ನು ಅತ್ಯಂತ ಮೌನದಲ್ಲಿ ಓದುವುದನ್ನು ಕಲಿಸಿತು. ಅದರ ಜೊತೆಗೆ ಬರಹ ಎನ್ನುವುದು ಮುದ್ರಣದ ಮಾಧ್ಯಮದಲ್ಲಿ ಬಂದಾಗ ಓದುಗರು ಮತ್ತು ಬರಹದ ಸಂಬಂಧವು ನಿಗದಿತವಾದ ಒಂದು ರೂಪವಾಗಿ ಇರಲಿಲ್ಲ. ಅದು ಸಮಾಜದ ಮೇಲೆ ಪರಿಣಾಮವನ್ನು ಬೀರಿತು. ಇದರ ಜೊತೆಗೆ ನಾವು ಈವತ್ತು ನಾಟಕ ಮತ್ತು ಅದರ ಪರಿಣಾಮವನ್ನು ಹೇಳಬೇಕು.

ಈವತ್ತು ನಾಟಕ ಮತ್ತು ಸಮಾಜದ ಪ್ರಶ್ನೆಯು ಹೆಚ್ಚು ಜಟಿಲವಾಗಿದೆ. ಸಾಂಸ್ಕೃತಿಕವಾಗಿ ಅದು ಹೊಸದಾದ ತಿರುವನ್ನು ಪಡೆದುಕೊಂಡಿದೆ. ಹಾಗೆಯೇ ನಾಟಕವು ಸಿನಿಮಾದ ಕಡೆಗೆ ಹೋಗಿದೆ. ನಾಟಕದ ಅನೇಕ ಕಲಾವಿದರು ದೂರದರ್ಶನದ ಕಡೆಗೆ ಮುಖ ಮಾಡಿದ್ದಾರೆ. ಇದರಿಂದ ನಾಟಕ ಮತ್ತು ಅದರ ಸಾಧ್ಯತೆಗಳು ಈವತ್ತು ಬೇರೆಯಾಗಿದೆ. ಕಲಾವಿದರು ಮತ್ತು ಅವರ ಪ್ರದರ್ಶನದ ಸಾಮಾರ್ಥ್ಯವೂ ಭಿನ್ನವಾಗಿದೆ. ಇದರಿಂದ ನಾಟಕವು ಮತ್ತೊಂದು ಅರ್ಥದಲ್ಲಿ ಸ್ಥಾನಾಂತರವನ್ನು ಪಡೆದಿದೆ. ಒಂದು ಅತ್ಯಂತ ಅನಿವಾರ್ಯವಾದ ಪ್ರಸಂಗವು ನಮ್ಮ ಮುಂದೆ ಬಂದಿದೆ. ನಾವು ನಾಟಕವನ್ನು ಎಲ್ಲಿ ಪ್ರದರ್ಶನ ಮಾಡಬೇಕು ಎನ್ನುವುದೂ ಇದರ ಒಂದು ಪ್ರಶ್ನೆ. ಒಂದು ಕಾಲಕ್ಕೆ ನಮಗೆ ಬೀದಿ ರಂಗಭೂಮಿ ಮತ್ತು ರಾಷ್ಟ್ರೀಯ ರಂಗಭೂಮಿಯ ಪ್ರಶ್ನೆಯು ಇತ್ತು. ಈಗ ಆ ಪ್ರಶ್ನೆಯು ನಮ್ಮ ಮುಂದೆ ಇಲ್ಲ. ನಾವು ಈವತ್ತು ನವೀನ ಪ್ರಶ್ನೆಯನ್ನು ನೋಡಬೇಕಾಗುತ್ತದೆ. ನಾಟಕ ಮತ್ತು ಅದರ ಸ್ವಯಂಶಕ್ತಿಯನ್ನು ನಾವು ಬೇರೆ ಥರ ನೋಡಬೇಕಾಗುತ್ತದೆ. ನಾಟಕದ ಎದುರು ಬೇರೆ ಬೇರೆ ಮಾಧ್ಯಮಗಳು ಇವೆ. ಅದರಲ್ಲಿ ನಾವು ಈಗ ಕಾಳಿದಾಸನ ನಾಟಕವನ್ನು ಎಲ್ಲಿ ಪ್ರದರ್ಶನ ಮಾಡಬೇಕು? ಕಂಬಾರರ ನಾಟಕವನ್ನು ನೋಡುವುದು ಹೇಗೆ ಮತ್ತು ಎಲ್ಲಿ ಎನ್ನುವುದು ಮುಖ್ಯವಾದ ಸಮಸ್ಯೆ. ನಮ್ಮ

ಸಮಸ್ಯೆಯು ಅತ್ಯಂತ ಮುಖ್ಯವಾದ್ದು. ಈಗ ಕಲಾವಿದರ ಎದುರು ಯಂತ್ರಗಳು ಇವೆ. ಹಿಂದೆ ಇದ್ದ ಪರಿಸ್ಥಿತಿಗಿಂತ ಬೇರೆ ಪರಿಸ್ಥಿತಿಯು ಬಂದಿದೆ. ರಂಗ, ಬೆಳಕು, ಸಂಯೋಜನೆ. ಮೇಕಪ್ ಮುಂತಾದವುಗಳು ಈವತ್ತು ಪಲ್ಲಟವಾಗಿದೆ. ನಮಗೆ ಈವತ್ತು ನಾಟಕಕ್ಕೆ ಹೊಸದಾದ ಪಠ್ಯಗಳು ಇವೆ. ಅದರ ಜೊತೆಗೆ ನಮಗೆ ಈವತ್ತು ಹೊಸದಾದ ಜಾಗಗಳು ಇವೆ. ಆದ್ದರಿಂದ ಈವತ್ತು ಅತ್ಯಂತ ವಿಸ್ತಾರವಾದ ಜಾಗವಿದೆ. ಹಿಂದೆ ಇದ್ದ ಪರಿಸ್ಥಿತಿಯು ಇಲ್ಲ. ಎಲ್ಲಿಯೂ ನಾವು ನಾಟಕವನ್ನು ಮಾಡುವ ಸಾಧ್ಯತೆಯು ಹೆಚ್ಚು ಇದೆ. ಸಿರಿಸಂಪಿಗೆ ನಾಟಕಕ್ಕೆ ಬರೀ ಒಂದು ಕಪ್ಪು ಪರದೆ ಇದ್ದರೆ ಸಾಕು.

ನಾಟಕ ಎನ್ನುವುದು ನಮ್ಮ ನೋಟಕ್ಕೆ ಸಂಬಂಧಪಟ್ಟ ವಿಚಾರವೂ ಹೌದು. ಅದರ ಜೊತೆಗೆ ನಾವು ಈವತ್ತು ನಾಟಕವನ್ನು ನೋಡಲು ಜನರೂ ಬರುತ್ತಾರೆ. ಅದು ಚೆನ್ನಾಗಿದೆ ಎಂದು ತಿಳಿದರೆ ಅದಕ್ಕೆ ಪ್ರತಿಕ್ರಿಯೆಯನ್ನು ಕೊಡುತ್ತಾರೆ ಬದಲಾಗಿದೆ. ನಾವು ನೋಡುವ ನಾಟಕ ಮತ್ತು ಅದರ ಸ್ವರೂಪವು ನಮಗೆ ಅತ್ಯಂತ ಮುಖ್ಯ. ಈವತ್ತು ಹಿಂದಿನ ದಿನಗಳನ್ನು ಹೆಚ್ಚು ನೆನಪುಮಾಡಿಕೊಳ್ಳಬೇಕಾಗಿಲ್ಲ. ಆದರೆ ಒಂದು ಅಂಶವನ್ನು ಮಾತ್ರವೇ ಇಲ್ಲಿ ಉಲ್ಲೇಖಿಸುವುದು ಅತ್ಯಂತ ಅಗತ್ಯ. ಗ್ರೀಕರು ನಾಟಕವನ್ನು ಪ್ರಾರಂಭ ಮಾಡಿದ್ದು ದೇವತೆಯನ್ನು ಪೂಜೆ ಮಾಡಲು. ಅದು ಆಚರಣೆಯ ಒಂದು ಭಾಗವೂ ಹೌದು. ಅದಕ್ಕೆ ನಿರ್ದಿಷ್ಟವಾದ ಸಮಯವೂ ಇತ್ತು. ಅದನ್ನು ಅಥೆನ್ಸ್ ನಗರದಲ್ಲಿ ಆಡುತ್ತಿದ್ದರು. ಆದರೆ ಈಗ ನಾವು ಹಾಗೆ ಮಾಡಲಾರೆವು. 'ನಾಯಿಕತೆ' ಆಡಲು ನಮಗೆ ದೇವತಾರ್ಚನೆಯು ಬೇಕಾಗಿಲ್ಲ. ಈವತ್ತು ನಮ್ಮ ಸನ್ನಿವೇಶಗಳು ಬದಲಾಗಿದೆ. ಅದರ ಜೊತೆಗೆ ಈವತ್ತು ಸಿನಿಮಾ, ದೂರದರ್ಶನ ಮುಂತಾದವುಗಳು ನಮ್ಮ ಮುಂದೆ ಇರುವುದರಿಂದ ನಮಗೆ ನಮ್ಮದೇ ಆದ ಆಯ್ಕೆ ಇರುತ್ತದೆ.ಆದ್ದರಿಂದ ಪ್ರೇಕ್ಷಕರು ತಮಗೆ ಬೇಕಾದ್ದನ್ನು ಆಯ್ಕೆ ಮಾಡಲು ಸಾಧ್ಯ. ಸನ್ನಿವೇಶಗಳಲ್ಲಿ ಒಂದು ಗುಣಾತ್ಮಕವಾದ ಬದಲಾವಣೆಯು ಇದೆ. ಸಾಂಸ್ಕೃತಿಕವಾದ ಚಟುವಟಿಕೆಗಳು ವಿಸ್ತಾರವಾಗುವುದು ನಮಗೆ ಕಾಣುತ್ತದೆ. ಹಾಗೆ ನೋಡಿದರೆ ಎಲ್ಲರೂ ಇವತ್ತು ನಾಟಕವನ್ನು ನೋಡುತ್ತಾರೆ ಅಥವಾ ಅವರು ನಾಟಕವನ್ನು ನೋಡಲೇಬೇಕು ಎಂದು ಹೇಳುವಂತೆ ಇಲ್ಲ. ನಾಟಕವನ್ನು ನೋಡುವವರು ಮತ್ತು ದೂರದರ್ಶನವನ್ನು ನೋಡುವವರು ಹಾಗೂ ಸಿನಿಮಾ ನೋಡುವವರು ಒಂದೇ ಥರ ಇಲ್ಲ. ಅಭಿರುಚಿಗಳಲ್ಲಿ ವ್ಯತ್ಯಾಸವು ಇದೆ. ನಾಟಕಗಳು ಮತ್ತು ಅದರ ಪ್ರದರ್ಶನಕ್ಕೆ ಒಂದು ಕಾಲ ಮತ್ತು ಸನ್ನಿವೇಶ ಎನ್ನುವುದು ಇದೆ. ನಮಗೆ ಟಿ.ವಿ. ನೋಡುವುದು ಅತ್ಯಂತ ಸುಲಭವಾದ ಕೆಲಸ. ಅದನ್ನು ನಾವು ಮನೆಯಲ್ಲಿ ನೋಡಲು ಸಾಧ್ಯ.

ಆದರೆ ನಾಟಕವನ್ನು ನಮ್ಮ ಮನೆಯಲ್ಲಿ ಬಂದು ಪ್ರದರ್ಶನ ಮಾಡುವುದು ಅಸಾಧ್ಯ. ನಾಟಕವು ನಮ್ಮ ಮುಂದೆ ಪ್ರದರ್ಶನವಾಗುತ್ತದೆ ಎಂದರೆ ಅದು ನಮಗೆ ಅತ್ಯಂತ ಜೀವಂತವಾದ ಅನುಭವವನ್ನು ಕೊಡುತ್ತದೆ. ಸಾಮಾನ್ಯರು ಹೆಚ್ಚು ನಾಟಕವನ್ನು ನೋಡಲು ಸಾಧ್ಯವಾಗುವುದಿಲ್ಲ. ನಾಟಕದ ಅವಧಿಯು ಹೆಚ್ಚು ಎಂದರೆ ಮೂರು ಗಂಟೆ ಇರಬಹುದು. ಆದರೆ ನಾಟಕಗಳು ವಿವಿಧ ರೀತಿಯಲ್ಲಿ ಇರುತ್ತವೆ. ನಾಟಕಗಳನ್ನು ನಾವು ಈವತ್ತು ಬರೀ ಜಾತ್ರೆಯಲ್ಲಿ ಮಾತ್ರವೇ ನೋಡುವುದಿಲ್ಲ. ಅದಕ್ಕೆ ಒಂದು ಉತ್ಸವವು ಇರಬೇಕಾಗಿಲ್ಲ. ನಾಟಕವು ಈ ದೃಷ್ಟಿಯಿಂದ ನಮ್ಮ ಅನುಭವದ ಭಾಗವಾಗಿದೆ. ಕಂಬಾರರ ನಾಟಕವನ್ನು ಎಷ್ಟು ಜನರು ನಿರ್ದೇಶನ ಮಾಡಿದ್ದಾರೆ ಮತ್ತು ಅದನ್ನು ಎಷ್ಟು ಜನರು ನೋಡಿದ್ದಾರೆ ಎಂದು ಹೇಳಲು ಸಾಧ್ಯವಿಲ್ಲ.

ನಮಗೆ ಈವತ್ತು ನಮ್ಮ ಹಿಂದೆ ಇದ್ದವರು ಕೆಲವು ಪರಂಪರೆಯನ್ನು ಹಾಕಿಕೊಟ್ಟಿದ್ದಾರೆ. ಅದರಲ್ಲಿ ನಮ್ಮ ಹವ್ಯಾಸಗಳೂ ಇವೆ ಎನ್ನುವುದು ಸತ್ಯ. ಅದರ ಸ್ವರೂಪವನ್ನು ನೋಡಿದರೆ ನಾವು ಯಾವುದನ್ನು ನಮ್ಮ ಕ್ರಿಯೆಗಳು ಎಂದು ಹೇಳುತ್ತೇವೆಯೋ ಅದರ ಅಂಶಗಳೂ ಸೇರಿಕೊಂಡಿವೆ. ಅದು ಬೇರೆ ಪ್ರಶ್ನೆ. ಆದರೆ ಇಲ್ಲಿ ಇನ್ನೊಂದು ಅಂಶವು ಇದೆ. ನಮ್ಮ ಈವತ್ತಿನ ಪರಿಸ್ಥಿತಿಯು ಹೇಗೆ ಇದೆ ಎಂದರೆ ಅದರಲ್ಲಿ ನಮಗೆ ಅನೇಕ ಒತ್ತಡಗಳೂ ಇವೆ. ನಾವು ತಾಳಲಾಗದಷ್ಟು ತೊಂದರೆಗಳೂ ಇವೆ. ನಮ್ಮ ಸ್ವಭಾವ ಮತ್ತು ನಮ್ಮ ದೈನಂದಿನ ಚಟುವಟಿಕೆಯ ಮೇಲೆ ಇದು ಪ್ರಭಾವ ಬೀರಿದೆ. ನಮಗೆ ಈವತ್ತು ನಮ್ಮ ಗುಣ ಮತ್ತು ಸ್ವಭಾವವನ್ನು ಮಾತ್ರವೇ ಅಲ್ಲ, ಅದರ ಜೊತೆಗೆ ಕೆಲವು ಕೌಶಲವನ್ನು ಕೂಡಾ ನಿಯಂತ್ರಣಕ್ಕೆ ಗುರಿಯಾಗಿದೆ. ನಮ್ಮ ಸಂಸ್ಕೃತಿಯಲ್ಲಿ ರೂಪಿತವಾದ ಅನೇಕ ಅಂಶಗಳು ಹಿಂದಿನಿಂದ ಬಂದಿವೆ. ಈ ಅರ್ಥದಲ್ಲಿ ನಾಟಕದಲ್ಲಿ ಅತ್ಯಂತ ಪ್ರಾಕ್ತನವಾದ ಅನೇಕ ಅಂಶಗಳು ಇವೆ. ಅದು ಪ್ರಾತಿನಿಧಿಕವಾಗಿದೆ. ಅದರಲ್ಲಿ ಮನುಷ್ಯ ಮತ್ತು ಅವನ ಚಟುವಟಿಕೆಗಳು ಕಾಣುತ್ತವೆ. ಅದು ನಮ್ಮ ಜೀವನದ ಭಾಗಗಳ ಆಂಶಿಕವಾದ ಅಗತ್ಯವೂ ಹೌದು.

ಜೀವನ ಮತ್ತು ಅದರ ಅನೇಕ ಅಂಶಗಳನ್ನು ಕಂಬಾರರ ನಾಟಕಗಳು ನಮಗೆ ಹೇಳುತ್ತವೆ. ಆದರೆ ಕತೆಗಳನ್ನು ನಾವು ಎಷ್ಟು ಹೊತ್ತಿಗೆ ಬೇಕಾದರೂ ಓದಬಹುದು. ಅದನ್ನು ಬೆಳಿಗ್ಗೆ ಓದಲು ಸಾಧ್ಯ. ಅದನ್ನು ನಾವು ಸಂಜೆಯೂ ಓದಬಹುದು. ಆದರೆ ನಾಟಕಗಳು ಮತ್ತು ಅದರ ಪ್ರದರ್ಶನಗಳನ್ನು ನಾವು ಎಷ್ಟು ಹೊತ್ತಿಗೆ ಬೇಕಾದರೂ ನೋಡುವುದು ಅಸಾಧ್ಯ. ಅದರಲ್ಲಿ ಅತ್ಯಂತ ಸಹಜವಾದ ನಾಟಕವನ್ನು ನಾವು ನಿತ್ಯದ ಅನುಭವದಂತೆ ಗ್ರಹಿಸಲು ಸಾಧ್ಯ.

ನಾವು ಹೇಗೆ ಯೋಚನೆ ಮಾಡುತ್ತೇವೆ, ನಾವು ಹೇಗೆ ಇದ್ದೇವೆ ಎನ್ನುವುದನ್ನು ನಮ್ಮ ನಾಟಕಗಳು ಹೇಳುತ್ತವೆ. ಒಂದು ಮಾತನ್ನು ನೆನಪು ಇಟ್ಟುಕೊಳ್ಳಬೇಕು: ನಾವು ಈ ಸಮಾಜದಲ್ಲಿ ಹೇಗೆ ಇದ್ದೇವೆ ಎನ್ನುವುದನ್ನು ಅದು ಹೇಳಬಲ್ಲದು. ಆದ್ದರಿಂದ ಅದು ನಮಗೆ ಅತ್ಯಂತ ಮುಖ್ಯವಾದ ಒಂದು ಪ್ರಾತಿನಿಧಿಕತೆಯನ್ನು ಹೇಳುತ್ತದೆ. ವೇದಿಕೆಯ ಮೇಲೆ ನಾವು ಮಾಡುವ ನಮ್ಮ ಚಲನೆಗಳು ಕೂಡಾ ಈ ಬಗೆಯ ಪ್ರಾತಿನಿಧಿಕವಾದ ಒಂದು ಪ್ರಕ್ರಿಯೆಯು ಆಗಿದೆ. ಆದ್ದರಿಂದ ಸಾಹಿತ್ಯದ ಪಠ್ಯವಾಗಿ ನಾಟಕಕ್ಕೆ ನಮ್ಮ ಸಮಾಜದಲ್ಲಿ ಅದರದೇ ಆದ ಒಂದು ಅನನ್ಯತೆಯು ಇದೆ. ಯಾವುದನ್ನು ನಾವು ಸಂಸ್ಕೃತಿಯೆಂದು ಹೇಳುತ್ತೇವೆಯೋ ಅದಕ್ಕೆ ಒಂದು ವಿಶ್ವಾತ್ಮಕವಾದ ನೆಲೆಯು ಇರುತ್ತದೆ, ಅದಕ್ಕೂ ನಮ್ಮ ಸಂವೇದನೆಗೂ ಒಂದು ಸಂಬಂಧವು ಇದೆ. ಬೂರ್ಜ್ವಾ ನಾಗರಿಕತೆಯು ಮಾತ್ರ ಮನುಷ್ಯತ್ವ ಮತ್ತು ನಾಗರಿಕತೆಯನ್ನು ಬೇರೆ ಥರ ನೋಡುತ್ತದೆ. ಒಂದು ಸಮಸ್ಯೆಯನ್ನು ನಾವು ಇಲ್ಲಿ ಪ್ರಸ್ತಾವಿಸಬೇಕು: ಆಧುನಿಕ ನಾಗರಿಕತೆಗೆ ಮತ್ತು ಪ್ರಭುತ್ವಕ್ಕೆ ಕೆಲವು ವಿಷಯಗಳಲ್ಲಿ ಸಂಘರ್ಷವು ಆಗುವುದೂ ಇದೆ.

■

# ಸಾಹಿತ್ಯದ ಆತ್ಮ ಮತ್ತು ದೇಹ

ಸಾಹಿತ್ಯ ಮತ್ತು ಅದರ ತಾತ್ವಿಕತೆಯ ಪ್ರಶ್ನೆಯು ಅತ್ಯಂತ ಸಂಕೀರ್ಣವಾಗಿದೆ ಎಂದು ಲುಕಾಕ್ಸ್ ಹೇಳುತ್ತಾನೆ. ಆದರೆ ಈವತ್ತು ಅನೇಕರು ತಾತ್ವಿಕತೆಗೆ ಇರುವ ಅನೇಕ ಆಯಾಮವನ್ನು ನಾವು ಗಮನಿಸುವುದು ಅತ್ಯಂತ ಅಗತ್ಯವಿಲ್ಲ ಎಂದು ಹೇಳುತ್ತಾರೆ. ಈವತ್ತು ತಾತ್ವಿಕತೆಯನ್ನು ಯಾರಾದರೂ ಮಾತಾಡಿದರೆ ಅದನ್ನೇ ಅತ್ಯಂತ ಅನುಮಾನದಿಂದ ನೋಡುವವರು ಅನೇಕರು ಇದ್ದಾರೆ. ಹಾಗೆ ನೋಡಿದರೆ ನಮ್ಮ ನಡುವೆ ಒಂದು ಅಂತರವು ಇದೆ. ಆ ಅಂತರವು ವ್ಯಕ್ತಿ ಮತ್ತು ವ್ಯಕ್ತಿಗಳ ನಡುವೆ ಇರುತ್ತವೆ. ಹಾಗೆಯೇ ವ್ಯಕ್ತಿ ಮತ್ತು ಸಮಾಜದ ನಡುವೆಯೂ ಒಂದು ಅಂತರವು ಇರುತ್ತದೆ. ಇಲ್ಲಿ ಇನ್ನೊಂದು ಅಂಶವನ್ನು ಹೇಳುವುದು ಸೂಕ್ತ. ನಮ್ಮ ಆರ್ಥಿಕತೆ ಮತ್ತು ನಮ್ಮ ಸಾಮಾಜಿಕ ಜೀವನ ಇವುಗಳ ನಡುವೆ ಒಂದು ಅಂತರವು ಇದೆ. ವಸ್ತು ಮತ್ತು ವಿಷಯ ಎನ್ನುವುದು ಈವತ್ತು ನಮಗೆ ಒಂದು ಅಂತರದ ಹಾಗೆ ಕಾಣುತ್ತದೆ. ಆದರೆ ತಾತ್ವಿಕತೆಯು ಇವುಗಳ ನಡುವೆ ಒಂದು ಸಂಬಂಧವನ್ನು ಸೂಚಿಸುತ್ತದೆ. ಅದರ ಜೊತೆಗೆ ನಮಗೆ ಯಾವುದು ಕಾರಣವಾಗಿದೆ ಹಾಗೂ ಕಾರಣಕ್ಕೂ ನಮ್ಮ ಪ್ರಜ್ಞೆಗೂ ಇರುವ ಸಂಬಂಧವು ಯಾವುದು ಎಂದು ಅರ್ಥಮಾಡಿಕೊಳ್ಳಲು ನಮಗೆ ತಾತ್ವಿಕತೆಯು ಸಹಾಯವನ್ನು ಮಾಡುತ್ತದೆ. ಆದ್ದರಿಂದ ತಾತ್ವಿಕತೆಗೆ ಒಂದು ನಿರ್ದಿಷ್ಟವಾದ ಕೆಲಸವೂ ಇದೆ. ಸಾಹಿತ್ಯವು ಜೀವನವನ್ನು ಹೇಳುತ್ತದೆ. ಅದರ ಜೊತೆಗೆ ಅದು ನಮಗೆ ನಮ್ಮ ಸನ್ನಿವೇಶವನ್ನು ಸೂಚಿಸುತ್ತದೆ. ಆದ್ದರಿಂದ ತಾತ್ವಿಕ ಎನ್ನುವುದು ನಮಗೆ ಅತ್ಯಂತ ಮುಖ್ಯವಾದ ಒಂದು ಪರಿಕಲ್ಪನೆಯೂ ಆಗಿದೆ. ನಾವು ತಾತ್ವಿಕತೆಯನ್ನು ನಮ್ಮ ಮನೋಸ್ಥಿತಿ ಅಥವಾ ಸಮಾಜದ ಹಿನ್ನೆಲೆಯಲ್ಲಿಯೂ ಅರ್ಥಮಾಡಿಕೊಳ್ಳಲು ಸಾಧ್ಯವಾಗುತ್ತದೆ. ತಾತ್ತಿಕತೆಗೆ ಮತ್ತೊಂದು ಆಯಾಮವೂ ಇದೆ. ಅದರಲ್ಲಿ ನಾವು ತಾತ್ವಿಕತೆಯನ್ನು ಒಂದು ನಿರ್ದಿಷ್ಟವಾದ ತತ್ವಜ್ಞಾನದ ಹಿನ್ನೆಲೆಯಲ್ಲಿಯೂ ವಿವರಿಸಲು ಸಾಧ್ಯವಾಗುತ್ತದೆ.

ಅದರಲ್ಲಿಯೂ ಈವತ್ತು ತಾತ್ವಿಕತೆಗೆ ಮತ್ತೊಂದು ಮಹತ್ವದ ಪರಿಣಾಮವು ಉಂಟಾಗಿದೆ. ಅದನ್ನು ನಾವು ಹೀಗೆಯೂ ಹೇಳಬಹುದು: ಆಧುನಿಕ ಬಂಡವಾಳವಾದವು ನಮಗೆ ಒಂದು ದೊಡ್ಡದಾದ ಪರಿಣಾಮವನ್ನು ಉಂಟು ಮಾಡಿದೆ. ಆಧುನಿಕ ಸಾಹಿತ್ಯದ ಮೀಮಾಂಸೆಯು ನಮಗೆ ಸಾಹಿತ್ಯ ಮತ್ತು ತಿಳುವಳಿಕೆಯನ್ನು ಬದಲು ಮಾಡಿದೆ. ಈಗ ನಮಗೆ ಯಾವ ರೀತಿಯ ಸಮಸ್ಯೆಯು ಬಂದಿದೆ ಎಂದರೆ ಸಾಹಿತ್ಯವನ್ನು ನಾವು ಹೇಗೆ ಅನ್ವಯವನ್ನು ಮಾಡಬೇಕು? ಅದನ್ನು ಅನ್ವಯ ಮಾಡುವಾಗ ನಾವು ಬಳಸಬಹುದಾದ ಪರಿಕರವು ಯಾವುದು ಎನ್ನುವುದು ಒಂದು ಸಮಸ್ಯೆಯು ಆಗಿದೆ. ಈವತ್ತು ನಮಗೆ ಸಾಹಿತ್ಯವನ್ನು ಅರ್ಥಮಾಡಿಕೊಳ್ಳಲು ಮತ್ತು ಅದರ ಸ್ವರೂಪವನ್ನು ನಿರ್ಧಾರ ಮಾಡಲು ನಮಗೆ ರಚನಾವಾದ, ವಿದ್ಯಮಾನಶಾಸ್ತ್ರ, ಅಸ್ತಿತ್ವವಾದ ಮುಂತಾದವುಗಳು ನಮಗೆ ವಿಶಿಷ್ಟವಾದ ಒಂದು ಒಳನೋಟಗಳನ್ನು ಕೊಡುತ್ತಿರುವುದು ಸತ್ಯ. ಆದರೆ ಇವುಗಳನ್ನು ನಾವು ಈವತ್ತು ಅತ್ಯಂತ ಸೂಕ್ಷ್ಮವಾಗಿ ಪರಿಶೀಲನೆ ಮಾಡುವುದು ಅತ್ಯಂತ ಅಗತ್ಯ. ಇದರಲ್ಲಿ ಕೆಲವು ಸಿದ್ಧಾಂತಗಳು ಕಾವ್ಯದ ಆಶಯವನ್ನು ವಿವರಿಸುತ್ತವೆ. ಆದರೆ ಮತ್ತೆ ಕೆಲವು ಯಾವುದನ್ನು ಸ್ಪಷ್ಟವಾಗಿ ಹೇಳುವುದಿಲ್ಲ. ಸೂಸಾನ್ ಸೊಪಾಂಗ್ ಒಂದು ವಿಚಾರವನ್ನು ಮಂಡಿಸಿದ್ದನ್ನು ಇಲ್ಲಿ ನೆನಪು ಮಾಡುವುದು ಅತ್ಯಂತ ಉಚಿತ್ತಾದವು ಅನ್ವಯದ ವಿರುದ್ಧ ಎನ್ನುವುದನ್ನು ಹೇಳುತ್ತದೆ. ನವ್ಯವು ಇದನ್ನು ಹೆಚ್ಚು ಹೇಳಿದ್ದು ನಿಜ. ಅನ್ವಯ ಎನ್ನುವುದು ನವ್ಯಕ್ಕೆ ಬಂದಾಗ ಅದು ಒಂದು ಅತ್ಯಂತ ಕಡಿತವಾದ ಒಂದು ದೃಷ್ಟಿಕೋನವನ್ನು ಹೊಂದಿದ್ದು ಸತ್ಯ. ಅದು ಬೇರೆ ಪ್ರಶ್ನೆಯಾಗುತ್ತದೆ. ಸಾಹಿತ್ಯ ಮತ್ತು ಅದರ ನಿರೂಪಣೆಗೆ ಹೆಚ್ಚು ಪ್ರಾಶಸ್ತ್ಯವನ್ನು ಕೊಟ್ಟ ನವ್ಯರು ಅದರ ಶೈಲಿ ಮತ್ತು ಅದರ ತಂತ್ರಗಳಿಗೆ ಮಹತ್ವವನ್ನು ಕೊಟ್ಟದ್ದು ನಿಜ. ಆದರೆ ಇಲ್ಲಿ ಇನ್ನೊಂದು ಸಂಗತಿಯೂ ಇದೆ. ನವ್ಯರು ತಮಗಿಂತ ಹಿಂದೆ ಬರೆದವರ್ನು ಸಂಪ್ರದಾಯವಾದಿಗಳು ಎಂದು ಹೇಳಿದರು. ಆದರೆ ಅವರು ಕೆಲವು ವಿಷಯಗಳಿಗೆ ಕಣ್ಣು ಮುಚ್ಚಿದ್ದು ನಿಜ. ನವ್ಯ ಲೇಖಕರ ಬರಹಗಳು ಮತ್ತೊಂದು ರೀತಿಯಲ್ಲಿ ಮನುಷ್ಯ ಮತ್ತು ಅವನ ಅತ್ಯಂತ ಕಂಗಾಲಾದ ಸ್ಥಿತಿಯನ್ನು ಹೇಳುತ್ತದೆ. ಮನುಷ್ಯ ಭಯವನ್ನು, ಹಿಂಜರಿಕೆಯನ್ನು ಮತ್ತು ವಿಷಾಧವನ್ನು ಹೇಗೆ ಹೊಂದಿರುತ್ತಾನೆ ಎನ್ನುವುದನ್ನು ಇದು ಸೂಚಿಸುತ್ತದೆ. ಒಂದು ಘಟನೆ ಮತ್ತು ಒಂದು ಅನುಭವವು ಹೇಗೆ ಮುಖ್ಯವಾಗುತ್ತದೆ ಎಂದು ನವ್ಯರು ವಿವರಿಸುತ್ತಾರೆ. ಅದರಲ್ಲಿ ಭಿನ್ನತೆಗಳು ಇವೆ ಎನ್ನುವುದೂ ಸತ್ಯ. ಅದರ ಜೊತೆಗೆ ನವ್ಯದಲ್ಲಿ ಒಂದು ಶೈಲಿಯು ಬದಲಾಗಿದೆ. ಅದು ಪರಂಪರೆಯಿಂದ ಹೆಚ್ಚು ಪಡೆದಿಲ್ಲ. ಅದರಲ್ಲಿ ಮಹಾಕಾವ್ಯ ಮತ್ತು ಅದರ ಸೊಗಡು ಕಾಣುವುದಿಲ್ಲ. ಮನೋಸ್ಥಿತಿಯು

ಬದಲಾಗಿದೆ. ಅದರ ಕ್ರಮವು ಬೇರೆಯಾಗಿದೆ. ಅಡಿಗರ ಕವಿತೆಯು ಇದಕ್ಕೆ ಒಂದು ನಿದರ್ಶನವೂ ಆಗಿದೆ. ಅವರು ಪಂಪನಿಂದ ಹೆಚ್ಚು ಪಡೆದಿಲ್ಲ. ಅವರು ಪಡೆದಿದ್ದು ಎಲಿಯಟ್ಟನಿಂದ. ಅವರ ಭೂಮಿಗೀತವು ಒಂದು ನಿದರ್ಶನ. ಅದರಲ್ಲಿ ವ್ಯಕ್ತಿಯೂ ಅತಂತ್ರವಾಗಿದ್ದಾನೆ. ಅವನ ತಲ್ಲಣವನ್ನು ನಾವು ಬೇರೆ ಥರ ನೋಡಬಹುದು. ಅವನು ಯಾವುದೇ ಒಂದು ನಿರ್ದಿಷ್ಟವಾದ ಆದರ್ಶವನ್ನು ಹೊಂದಿಲ್ಲ. ಅವನಿಗೆ ತನ್ನದೇ ಆದ ಒಂದು ಭೂತಕಾಲವು ಇದೆ. ಅವನು ಅದರಿಂದ ತಪ್ಪಿಸಿಕೊಳ್ಳಲಾರ. ಆದ್ದರಿಂದ ಅವನ ತಲ್ಲಣವು ಆಧುನಿಕ ಯುಗದ ಸಂಗತಿಗಳನ್ನು ಹೇಳುತ್ತದೆ. ನಂಬಿಕೆಗಳು ಇಲ್ಲಿ ಬೇರೆಯಾಗಿದೆ. ಅವನು ತನ್ನನ್ನು ನಿರೂಪಿಸುವಾಗ ಅದರಲ್ಲಿ ಅವನಿಗೆ ತನ್ನದೇ ಆದ ಅರ್ಥವೂ ಇದೆ ಎಂದು ಹೇಳುತ್ತಾನೆ. ಅಡಿಗರ ಈ ಕವಿತೆಯಲ್ಲಿ ಅನೇಕ ರೀತಿಯ ದೃಷ್ಟಿಕೋನವು ಇದೆ. ಆದರೆ ಇದು ರಚನೆಯ ಸಾವಯವ ಸಂಬಂಧವನ್ನು ಹೊಂದಿಲ್ಲ ಎನ್ನುವುದು ಒಂದು ಪ್ರತಿಕ್ರಿಯೆಯು ಮಾತ್ರ...

ಈಗ ಮತ್ತೊಂದು ವಿಷಯಕ್ಕೆ ಬರಬಹುದು. ಒಂದು ಹಂತದಲ್ಲಿ ವಿಮರ್ಶೆ ಎನ್ನುವುದು ನೈತಿಕವಾದ ನೆಲೆಯನ್ನು ಪಡೆಯಿತು. ಆದ್ದರಿಂದ ವಿಮರ್ಶೆಯು ಹೇಗೆ ನೈತಿಕವಾದ ರೂಪವನ್ನು ಪಡೆಯಿತು ಎನ್ನುವುದನ್ನು ನಾವು ವಿವಿಧ ವಿಮರ್ಶೆಯ ಪದ್ಧತಿಯಲ್ಲಿ ಎನ್ನುವುದು ಗೊತ್ತಾಗುತ್ತದೆ. ಹಾಗೆ ನೋಡಿದರೆ ನವ್ಯ ವಿಮರ್ಶೆ ಮತ್ತು ಅದರ ಪರಿಕರವು ಕೇವಲ ಸಾಂಸ್ಥಿಕವಾದ ರೂಪವನ್ನು ಪಡೆಯಿತು ಎಂದು ನಮಗೆ ಅರ್ಥವಾಗುತ್ತದೆ. ವಿಮರ್ಶೆ ಎಂದರೆ ಅದು ನೈತಿಕವೇ ಅಥವಾ ಅದು ಕೇವಲ ಅದರಾಚೆಗೆ ಅದು ಅಸ್ತಿತ್ವವನ್ನು ಪಡೆಯುತ್ತದೆಯೇ ಎನ್ನುವುದು ಈವತ್ತು ಅತ್ಯಂತ ಮಹತ್ವದ ಪ್ರಶ್ನೆ. ಇದರಿಂದ ಒಂದು ಹಂತದಲ್ಲಿ ಸಂಕೇತ ಎನ್ನುವುದು ಧರ್ಮ ಮತ್ತು ಅದರ ಅಸ್ತಿತ್ವವನ್ನು ಬೇರೆ ಥರ ನಿರೂಪಣೆ ಮಾಡುವಂತೆ ಆಯಿತು. ಅದರ ಜೊತೆಗೆ ಸಂಕೇತ ಮತ್ತು ಅದರ ಸ್ವರೂಪವು ಒಂದು ಹಂತದಲ್ಲಿ ಕವಿಗಳಿಗೆ ಕೆಲವು ವಿಚಾರಗಳಿಂದ ತಪ್ಪಿಸಿಕೊಳ್ಳುವ ಒಂದು ದಾರಿಯೂ ಆಯಿತು. ಯಾವಾಗ ಸಂಕೇತವು ನಮ್ಮ ಮನೋಸ್ಥಿತಿಯನ್ನು ಬೇರೆ ಥರ ನಿರೂಪಣೆ ಮಾಡಲು ಯತ್ನವನ್ನು ಮಾಡಿತೋ ಆಗ ಅದರ ಅರ್ಥವೂ ಬೇರೆಯಾಯಿತು. ಸಂಕೇತದ ಹಿಂದೆ ಒಂದು ಅಮೂರ್ತವಾದ ಚಿಂತನೆಯು ಇದೆ. ಅದನ್ನು ಓದುಗರು ಅರ್ಥ ಮಾಡಿಕೊಳ್ಳುವುದು ಅತ್ಯಂತ ಕಷ್ಟ. ಒಂದು ಹಂತದಲ್ಲಿ ನಾವು ಅನೇಕ ವಿಷಯಗಳನ್ನು ಚರ್ಚೆ ಮಾಡುವ ಪ್ರಸಂಗಗಳು ಈವತ್ತು ಬಂದಿವೆ. ನಮ್ಮ ಮುಂದೆ ಈವತ್ತು ಇರುವ ಚರ್ಚೆಗಳು ಅತ್ಯಂತ ಸಾಮಾನ್ಯವಾದ್ದು ಅಲ್ಲ. 60ರ ದಶಕದ ಅನಂತರ ಅನೇಕ ಪ್ರಶ್ನೆಗಳು ಬಂದುದು

ನಿಜ. ಅದರಲ್ಲಿ ಅನೇಕ ಕಾನೂನುಗಳು ಮತ್ತು ಟ್ರೇಡ್ ಯೂನಿಯನ್, ಸಾರ್ವಜನಿಕವಾದ ಹಕ್ಕುಗಳು, ಶಿಕ್ಷಣದ ಪ್ರಶ್ನೆಗಳು, ಸಂಸ್ಕೃತಿಯ ಪ್ರಶ್ನೆಗಳು ಮುಂದೆ ಬಂದವು. ಅಷ್ಟು ಮಾತ್ರವೇ ಅಲ್ಲ ಅನೇಕ ಶಾಲಾ ಕಾಲೇಜುಗಳಲ್ಲಿ ಸಂಸ್ಕೃತಿಯನ್ನು ಮತ್ತು ಪಠ್ಯವನ್ನು ಕೇಂದ್ರ ಮಾಡಲಾಯಿತು. ಯಾವುದನ್ನು ನಾವು ಸಂಸ್ಕೃತಿಯನ್ನು ಎಂದು ಹೇಳುತ್ತೇವೆಯೋ ಅದನ್ನು ತರಗತಿಗಳಲ್ಲಿ ಮಾತ್ರವೇ ಅಲ್ಲ, ಅನೇಕರು ಸಾಹಿತ್ಯವನ್ನು ವಿವರಿಸುವಾಗಲೂ ಸಂಸ್ಕೃತಿಯನ್ನು ಚರ್ಚೆ ಮಾಡಿದರು. ಸಾಹಿತ್ಯ ಮತ್ತು ಅದರ ಅಧ್ಯಯನದಲ್ಲಿ ಅತ್ಯಂತ ಮುಖ್ಯವಾದ ಪ್ರಶ್ನೆಯೂ ಆಯಿತು.ಅದು ಬೇರೆ ಪ್ರಶ್ನೆ. ಆದರೆ ಸಾಹಿತ್ಯದಲ್ಲಿ ಇನ್ನೊಂದು ಅತ್ಯಂತ ಮುಖ್ಯವಾದ ಪ್ರಶ್ನೆಯು ಬಂದಿದೆ. ಸಾಹಿತ್ಯದಲ್ಲಿ ನಾವು ಯಾವುದನ್ನು ಹೆಚ್ಚು ಅಧ್ಯಯನ ಮಾಡಬೇಕು ಎನ್ನುವುದು ನಮಗೆ ಒಂದು ಮುಖ್ಯವಾದ ಪ್ರಶ್ನೆಯು ಆಗಿತ್ತು. ಅನೇಕ ನವ್ಯ ವಿಮರ್ಶಕರು ಸಾಹಿತ್ಯವೆಂದರೆ ಅದರ ನಿರೂಪಣೆ ಎಂದು ಭಾವಿಸಿದ್ದರು. ಅದರ ಜೊತೆಗೆ ಸಾಹಿತ್ಯದಲ್ಲಿ ಒಂದು ಏಕತೆಯ ಪ್ರಶ್ನೆಯು ಬಂದಿದೆ. ಸಾಹಿತ್ಯ ರೂಪ ಮತ್ತು ಅದರ ಏಕತೆಯು ಹೇಗೆ ಮುಖ್ಯವಾಗಿದೆ. ಪ್ರತಿಯೊಂದು ಸಾಹಿತ್ಯದ ರೂಪವೂ ತನ್ನದೇ ಆದ ಒಂದು ವ್ಯಾಖ್ಯೆಯನ್ನು ಮಾಡುತ್ತದೆ. ರಚನಾವಾದವು ಒಂದು ದೃಷ್ಟಿಯಿಂದ ಏಕತೆಯನ್ನು ಹೇಳಿತು. ಇದಲ್ಲದೆ ನಮ್ಮ ಮುಂದೆ ಅತ್ಯಂತ ಮುಖ್ಯವಾದ ಒಂದು ಪ್ರಶ್ನೆಯು ಇದೆ. ಆದರೆ ಈ ಏಕತೆಯು ಯಾವುದನ್ನು ಹೇಳುತ್ತದೆ ಎಂದೂ ಯೋಚನೆಯನ್ನು ಮಾಡಬೇಕಾಗುತ್ತದೆ. ಸಾಹಿತ್ಯ ಮತ್ತು ಅದರ ರೂಪವು ಒಂದು ಸ್ವತಂತ್ರವಾದ ಭಾಗವಾಗಿದೆಯೇ? ರೂಪವನ್ನು ನಾವು ಹೇಗೆ ನೋಡುತ್ತೇವೆ ಎನ್ನುವುದು ನಮಗೆ ಒಂದು ತಾತ್ವಿಕವಾದ ಪ್ರಶ್ನೆ. ಹಾಗೆ ನೋಡಿದರೆ ಒಂದು ಸಾಹಿತ್ಯ ರೂಪಕ್ಕೆ ಮತ್ತು ಒಂದು ನಿರ್ದಿಷ್ಟವಾದ ಜೀವನದ ಕ್ರಮಕ್ಕೂ ಅತ್ಯಂತ ನಿಕಟವಾದ ಸಂಬಂಧವು ಇದೆ. ಸಾಹಿತ್ಯ ಮತ್ತು ರೂಪವನ್ನು ಹೇಗೆ ವಿಭಜನೆ ಮಾಡಬೇಕು ಎನ್ನುವುದು ಒಂದು ಪ್ರಶ್ನೆಯಾದರೆ ಬರಹ ಮತ್ತು ಅದರ ಸಾರ್ವಜನಿಕವಾದ ಚಟುವಟಿಕೆಯು ಹೇಗೆ ಕೆಲಸವನ್ನು ಮಾಡುತ್ತದೆ ಎನ್ನುವುದು ಮತ್ತೊಂದು ಪ್ರಶ್ನೆಯೂ ಆಗಿದೆ. ಈ ಮಾತುಗಳನ್ನು ಹೆಚ್ಚು ಸರಳ ಮಾಡಬೇಕಾದ ಅಗತ್ಯವಿಲ್ಲ. ಅನೇಕರು ಸಾಹಿತ್ಯ ಮತ್ತು ಅದರ ಆಶಯವನ್ನು ಮತ್ತು ರೂಪವನ್ನು ಒಂದು ನೆಲೆಯಲ್ಲಿ ಮಾತ್ರವೇ ಚರ್ಚೆ ಮಾಡಿದ ಅನೇಕ ವಿಮರ್ಶಕರು ಇದ್ದಾರೆ. ಆದರೆ ನಮಗೆ ಬಂದ ಅತ್ಯಂತ ಮಹತ್ವದ ಪ್ರಶ್ನೆಯನ್ನು ನವ್ಯರು ಬೇರೆ ಥರ ನೋಡಿದರು. ಈ ದೃಷ್ಟಿಯಿಂದ ನಮಗೆ ಅತ್ಯಂತ ಹೆಚ್ಚು ಸಮಸ್ಯೆಯು ಆಗಿರುವುದು ನವ್ಯ ಕವಿತೆಗಳಿಂದ. ಕಾವ್ಯವನ್ನು ಓದುವುದು ಮತ್ತು ಅದನ್ನು ಅರ್ಥ ಮಾಡಿಕೊಳ್ಳುವುದು ನಮಗೆ ಸ್ವಲ್ಪ ಕಷ್ಟ. ಆಧುನಿಕ ಕಲೆಯು ಈವತ್ತು ನಮಗೆ

ಸಂಕೇತವನ್ನು , ಆಶಯವನ್ನು ಒಂದು ದೃಷ್ಟಿಕೋನದಲ್ಲಿ ನೋಡುವ ಯತ್ನವನ್ನು ಮಾಡಿರುವುದು ಕೂಡಾ ಅಷ್ಟೇ ನಿಜ. ನವ್ಯ ಅಥವಾ ಆಧುನಿಕ ಕಲೆಯು ಅನೇಕವನ್ನು ಸಂಕೀರ್ಣ ಮಾಡಿಕೊಂಡು ನಿರೂಪಣೆ ಮಾಡಿರುವುದು ನಿಜ. ಅಡರ್ನೊ ಚಿಂತನೆಯು ಈ ದೃಷ್ಟಿಯಿಂದ ಅತ್ಯಂತ ಮಹತ್ವದ್ದು ಅವನು ಹೇಳುವುದು ಈವತ್ತು ನಮಗೆ ಕೆಲಸ ಮತ್ತು ಅದರ ವರ್ಗೀಕರಣವು ಹೇಗೆ ನಮ್ಮ ಚಿಂತನೆಯ ಕ್ರಮದ ಮೇಲೆ ಪ್ರಭಾವವನ್ನು ಬೀರಿದೆ ಎಂದು ಮಾತ್ರ. ಕೆಲಸವು ಈವತ್ತು ವರ್ಗೀಕರಣವಾಗಿರುವುದರಿಂದ ನಾವು ಮಾಡುವ ಕೆಲಸ ಮತ್ತು ಹೆಸರು ಬೆಸೆದು ಕೊಂಡಿವೆ. ಒಂದು ಸಮಾಜದಲ್ಲಿ ಬುದ್ಧಿಜೀವಿಗಳು ತಮ್ಮದೇ ಆದ ಒಂದು ಕೆಲಸವನ್ನು ಮಾಡುತ್ತಾರೆ. ಸಾಮಾನ್ಯರು ಒಂದು ಥರ ಕೆಲಸವನ್ನು ಮಾಡುತ್ತಿದ್ದರೆ ಲೇಖಕರು ಮತ್ತೊಂದು ಥರ ಕೆಲಸವನ್ನು ಮಾಡುತ್ತಾರೆ. ಅದರಲ್ಲಿ ಶ್ರೇಷ್ಟ ಮತ್ತು ಕನಿಷ್ಟ ಎನ್ನುವುದು ಇಲ್ಲ. ಕೆಲಸವನ್ನು ಮಾಡುವಾಗ ಅದರಲ್ಲಿ ಒಬ್ಬೊಬ್ಬರು ಒಂದೊದು ಪಾತ್ರವನ್ನು ವಹಿಸುತ್ತಾರೆ. ಸಂಸ್ಕೃತಿಯಲ್ಲಿ ಇವುಗಳು ತಮ್ಮದೇ ಆದ ಪಾತ್ರವನ್ನು ವಹಿಸುವುದು ನಿಜ. ಆಧುನಿಕ ಸಂಸ್ಕೃತಿಯಲ್ಲಿ ಉಂಟಾಗುವ ವರ್ಗೀಕರಣವನ್ನು ನಾವು ನಿಷೇಧಾತ್ಮಕವಾದ ಅರ್ಥದಲ್ಲಿ ನೋಡುವುದು ಅಗತ್ಯವಿಲ್ಲ ಎನ್ನುವುದು ಅಡರ್ನೊನ ನಿಲುವು. ಒಂದು ಸಮಾಜದಲ್ಲಿ ಪ್ರತಿಯೊಬ್ಬ ವ್ಯಕ್ತಿಯೂ ತನ್ನದೇ ಆದ ಜವಾಬ್ದಾರಿಯನ್ನು ನಿರ್ವಹಣೆ ಮಾಡುತ್ತಾನೆ. ಅವನಿಗೆ ಅವನದೇ ಆದ ಅಸ್ತಿತ್ವವು ಇದೆ. ಇದನ್ನು ಸಮಾಜದಲ್ಲಿ ನಾವು ಕಾಣುವುದು ಮಾತ್ರವೇ ಅಲ್ಲ, ಅದರ ಮೂಲಕ ನಾವು ನಮಗೆ ತಜ್ಞತೆಯನ್ನು ರೂಪಿಸಿದೆ. ಅದರಲ್ಲಿ ವಿವಿಧ ತಜ್ಞತೆಯು ಇದೆ. ನಮಗೆ ಈವತ್ತು ಯಾವುದು ಹೆಚ್ಚು ಅಗತ್ಯವಿದೆಯೋ ಅದರ ಜ್ಞಾನಗಳನ್ನು ಮತ್ತು ಅದರ ಅಧ್ಯಯನದ ರೂಪಗಳನ್ನು ನಾವು ಅಂಗೀಕರಿಸುತ್ತೇವೆ. ಮನುಷ್ಯನು ಹೇಗೆ ತನ್ನ ಅಸ್ತಿತ್ವವನ್ನು ಬದಲಿಸಿದ್ದಾನೆ ಎನ್ನುವುದು ಇಲ್ಲಿ ಗಮನಾರ್ಹ. ನಾವು ಈವತ್ತು ಕೆಲಸವನ್ನು ಮಾಡುವ ಕ್ರಮಗಳು ಬದಲಾಗಿವೆ. ಅದರ ವಿನ್ಯಾಸಗಳು ಬೇರೆಯಾಗಿವೆ. ಆದ್ದರಿಂದ ಸಂಸ್ಕೃತಿ ಮತ್ತು ಅದರ ಚಹರೆಗಳು ಹೇಗೆ ಬದಲಾಗುತ್ತವೆ ಮತ್ತು ಅದಕ್ಕೆ ಬೇಕಾದ ಕೌಶಲಗಳು ಇರುತ್ತವೆ ಎಂದು ಹೇಳುವುದು ಅಡರ್ನೊನ ಗುರಿಯೂ ಹೌದು. ಅವನು ಇದನ್ನು ಹೇಳಲು ನಮಗೆ ಅನೇಕ ಸಾಕ್ಷ್ಯಗಳನ್ನು ಒದಗಿಸುತ್ತಾನೆ. ಇದರಲ್ಲಿ ಚಲನಚಿತ್ರ ಮತ್ತು ಅದರ ಗೀತೆಗಳೂ ಒಂದು ಉದಾಹರಣೆಯು ಆಗಿದೆ. ನಮಗೆ ಈವತ್ತು ಆಧುನಿಕ ಸಂಸ್ಕೃತಿಯು ಯಾವ ಬಗೆಯ ಒತ್ತಡಗಳನ್ನು ಹಾಕುತ್ತವೆ, ಅದರ ಮೂಲಕ ನಾವು ಹೇಗೆ ಹೊಸದಾದ ಕಸುವನ್ನು ಪಡೆಯುತ್ತೇವೆ ಎನ್ನುವುದು ಇಲ್ಲಿ ಅತ್ಯಂತ ಮುಖ್ಯ. ಹಾಗೆಯೇ ಕೈಗಾರಿಕೆ ಮತ್ತು ಸಂಸ್ಕೃತಿಗೆ ಇರುವ ದ್ವಂದ್ವಾತ್ಮಕವಾದ

ಸಂಬಂಧವಿದೆ. ಅವುಗಳಿಗೆ ಒಂದು ತಾರ್ಕಿಕವಾದ ಜೋಡಣೆಯು ಇದೆ. ಚಲನ ಚಿತ್ರದಲ್ಲಿ ಈವತ್ತು ಸಂಗೀತವನ್ನು ಸಂಯೋಜನೆ ಮಾಡುವವರು ಇದ್ದಾರೆ. ಕ್ಯಾಮಾರಮನ್‌ಗಳು ಇದ್ದಾರೆ. ಕಥಾ ಸಂಭಾಷಣೆ ಮಾಡುವವರು ಇದ್ದಾರೆ. ನಿರ್ದೇಶಕರೂ ಇದ್ದಾರೆ. ಆದರೆ ಇಲ್ಲಿ ಮತ್ತೊಂದು ಅಂಶವಿದೆ. ಅದರಲ್ಲಿ ಯಾವುದನ್ನು ನಾವು ಜನಪ್ರಿಯ ಎಂದು ಹೇಳುತ್ತೇವೆಯೋ ಅದು ಕೂಡಾ ಒಂದು ಸಮಾಜದಲ್ಲಿ ತನಗೆ ಅಗತ್ಯವಾದ ರಚನೆಯನ್ನು ಇಟ್ಟುಕೊಂಡಿರುತ್ತದೆ. ಆಯಾ  ಕಾಲಕ್ಕೆ ರಚನೆಗಳು ಬದಲಾಗುತ್ತವೆ. ಅದಕ್ಕೆ ಬೇಕಾದ ನಿಯಮವನ್ನು ರೂಪಿಸುತ್ತವೆ.  ಕೈಗಾರಿಕೆ ಮತ್ತು ಅದರ ಸಂಸ್ಕೃತಿಯಲ್ಲಿ ಉತ್ಪಾದನೆಯು ಆಗುವ ರಚನೆಗಳು ಕೂಡಾ ಇದಕ್ಕೆ ಅನುಸಾರವಾಗಿ ಇರುತ್ತವೆ. ರಾಚನಿಕ ಬದಲಾವಣೆ ಮತ್ತು ಅದರ ಸ್ವರೂಪವನ್ನು ಒಂದು ಸಮಾಜದಲ್ಲಿ ನೋಡುವಾಗ ಆ ಕೃತಿಯನ್ನು ಅದರ ತಾತ್ವಿಕೆಗೆ ಅನುಸಾರವಾಗಿಯೂ ನೋಡಬೇಕಾಗುತ್ತದೆ. ಸಂಸ್ಕೃತಿ ಮತ್ತು ಅದರ ವಾಸ್ತವ ಹಾಗೂ ರಚನೆಗಳೂ ಒಂದು ಸಂಬಂಧವನ್ನು ಇಟ್ಟುಕೊಂಡಿರುತ್ತವೆ. ಎಂದು ತಿಳಿದಿರಬೇಕು ಸಿನಿಮಾ ಮತ್ತು ಅದರ ಸಂಗೀತಕ್ಕೂ ನಮ್ಮ ದೃಷ್ಟಿಕೋನಕ್ಕೂ ಅತ್ಯಂತ ನಿಕಟವಾದ ಸಂಬಂಧವು ಇದೆ. ತಂತ್ರಜ್ಞಾನ ಮತ್ತು ನಮ್ಮ ತಾತ್ವಿಕತೆಗೆ ಒಂದು ಸಂಬಂಧವು ಇದೆ. ತಂತ್ರಜ್ಞಾನ ಮತ್ತು ಅದರ ಪರಿಣಾಮವನ್ನು ನಾವು ಊಹಿಸಿಕೊಳ್ಳುವುದು ಅತ್ಯಂತ ಕಷ್ಟ. ತಂತ್ರಜ್ಞಾನವು ಕೂಡಾ ಪರಿಣಾಮವನ್ನು ಬೀರುತ್ತದೆ ಎನ್ನುವುದು ನಿಜ. ಹತ್ತೊಂಬತ್ತನೆಯ ಶತಮಾನದ ತರುವಾಯ ನಮಗೆ ಕಾದಂಬರಿಗಳು ಹೇಗೆ ಮುಖ್ಯವಾದವು ಎಂದು ನೋಡಲು ನಮಗೆ ಆಧುನಿಕ ಕೈಗಾರಿಕೆ ಮತ್ತು ಅದರ ಜಗತ್ತಿನ ಅರಿವು ಇರಬೇಕಾಗುತ್ತದೆ. ಮತ್ತೊಂದು ಅರ್ಥದಲ್ಲಿ ಕಾದಂಬರಿಗಳು ನಮಗೆ ಪಲ್ಲಟವಾಗುತ್ತಿರುವ ಸಮಾಜದ ಅರಿವನ್ನು ಹೇಳಿತು. ಹೀಗಾಗಿ ಸಾಹಿತ್ಯವೂ ನಮಗೆ ಒಂದು ಪರಿಕರವು ಆಗಿದೆ. ಕಾದಂಬರಿಗಳು ಆಧುನಿಕ ಯುಗದ ಅತ್ಯಂತ ಮಹತ್ವದ ಅಭಿವ್ಯಕ್ತಿ ಎನ್ನುವುದರಲ್ಲಿ ಎರಡು ಮಾತಿಲ್ಲ. ಅದರ ಹಿಂದೆ ವ್ಯಕ್ತಿ ಮತ್ತು ಅವನ ಅಲೋಚನೆಯ ಕ್ರಮವು ಇದೆ. ಸಮಾಜವನ್ನು ಅವನು ನೋಡುವ ಕ್ರಮವು ಇದೆ. ಅತ್ಯಂತ ವಿಶಾಲವಾದ ಅರ್ಥದಲ್ಲಿ ಹೇಳುವುದಿದ್ದರೆ ಅದು ಹಿಂದೆ ಬದಲಾಗುತ್ತಿರುವ ಸಮಾಜ ಮಾತ್ರವೇ ಇಲ್ಲ, ಅದರ ಜೊತೆಗೆ ಸಾಮಾಜಿಕ ಆರ್ಥಿಕವಾದ ಸಂಗತಿಯು ಇದೆ. ಅದು ಮಾರ್ಕ್ಸವಾದದ ದೃಷ್ಟಿಕೋನದಲ್ಲಿ ಹೇಳಬೇಕೆಂದರೆ ಅದರ ಸಾಮಾಜಿಕ ಸತ್ಯಗಳಿಗೆ ಬೇರೆ ಬೇರೆ ಆಯಾಮವು ಇದೆ. ಆದರೆ ಯಾವುದನ್ನು ನಾವು ಈವತ್ತು ಬರೀ ಆರ್ಥಿಕತೆ ಎಂದು ಹೇಳುತ್ತೇವೆಯೋ ಅದು ಅಷ್ಟು ಮಾತ್ರವೇ ಆಗಿರುವುದಿಲ್ಲ. ಅದರಲ್ಲಿ ವ್ಯತ್ಯಾಸವಿದೆ. ಆರ್ಥಿಕ ಎನ್ನುವುದು  ರಾಜಕಾರಣ ಮತ್ತು ಸಂಸ್ಕೃತಿ

ಎರಡಕ್ಕೂ ಅನ್ವಯವಾಗುತ್ತದೆ. ಹಾಗೆಂದು ಅದು ನಮ್ಮ ನಿಜದಲ್ಲಿ ಒಂದು ಎನ್ನುವುದನ್ನು ಮರೆಯಬಾರದು. ನಮ್ಮ ವ್ಯಕ್ತಿತ್ವವು ಇದಕ್ಕೆ ಅನುಗುಣವಾಗಿ ಬದಲಾಗುತ್ತದೆ. ಸಮಕಾಲೀನ ಸಂಸ್ಕೃತಿ ಮತ್ತು ಅದರ ಸ್ವರೂಪವು ಬದಲಾಗಿದೆ. ಅದಕ್ಕೆ ಅನುಗುಣವಾಗಿ ನಾವು ಈವತ್ತು ಬರೆಯುತ್ತಿದ್ದೇವೆ. ಕನ್ನಡದ ಐವತ್ತರ ದಶಕದ ಬರಹ ಮತ್ತು ಅರವತ್ತರ ದಶಕದ ಬರಹ ಹಾಗೂ ಈವತ್ತಿನ ಬರಹಗಳಿಗೆ ಬೇರೆ ಬೇರೆ ದಿಕ್ಕುಗಳು ಇವೆ.

ಕಾರಂತರು ಹೇಳುವುದು ಕೇವಲ ಕಾದಂಬರಿಯನ್ನು ಅಲ್ಲ. ಅವರು ಬದಲಾಗುತ್ತಿರುವ ಮೌಲ್ಯವನ್ನು ಹೇಳಿದರು. ಅವರು ಕಾದಂಬರಿಗಳಲ್ಲಿ ಯಾವುದನ್ನು ಹೇಳಿದರೋ ಅದರಲ್ಲಿ ನಮ್ಮ ನಿತ್ಯದ ಸಮಸ್ಯೆಗಳಿದ್ದವು. ಸಾಮಾನ್ಯರಾದ ಜನರ ಬವಣೆಗಳೂ ಇದ್ದವು. ಈ ಅರ್ಥದಲ್ಲಿ ಕಾರಂತರು ನಮಗೆ ಜನರ ಸಮಸ್ಯೆಗಳು ಯಾವುದು ಇದೆ ಎಂದು ಹೇಳಿದರು. ಮನುಷ್ಯ ಸಂಬಂಧಗಳ ಘರ್ಷಣೆಯನ್ನು ಹೇಳಿದರು. ಅವರ ನಂಬಿದವರ ನಾಕ ನರಕ ಕಾದಂಬರಿಯನ್ನು ನೆನಪು ಮಾಡಿಕೊಳ್ಳಬಹುದು. ಅವರ ಕಾದಂಬರಿಗಳಲ್ಲಿ ನಮಗೆ ಮತ್ತೆ ಕೆಲವು ಸಂಗತಿಗಳು ನಮ್ಮ ಗಮನಕ್ಕೆ ಬರುತ್ತದೆ. ಕುವೆಂಪು ಕಾದಂಬರಿಗಳು ನಮಗೆ ಮತ್ತೆ ಕೆಲವು ವಿಚಾರಗಳನ್ನು ಹೇಳುತ್ತವೆ. ಅವರ ಕಾದಂಬರಿಗಳು ನಮಗೆ ಒಂದು ತಾತ್ವಿಕವಾದ ದರ್ಶನವನ್ನು ಕೊಡುತ್ತವೆ. ಕಾದಂಬರಿಗಳು ಮತ್ತು ಅವುಗಳ ಅತ್ಯಂತ ವಿಶಿಷ್ಟವಾದ ಅರ್ಥವೆಂದರೆ ಅದರಲ್ಲಿ ಬರುವ ಅಂತರಂಗ ಮತ್ತು ಬಹಿರಂಗ. ಕಾರಂತರು ನಮಗೆ ಬೇಕಾಗಿರುವುದು ಈ ಕಾರಣಕ್ಕೂ ಹೌದು. ಆದರೆ ಸಾಹಿತ್ಯ ರೂಪ ಎನ್ನುವುದು ನಮಗೆ ಒಂದು ಅಗತ್ಯ. ಆದರೆ ಅದುವೇ ಸರ್ವಸ್ವ ಅಲ್ಲ. ಒಂದು ಸಮಾಜದ ಭಾಗವಾಗಿ ರೂಪವು ಹೇಗೆ ಇದೆ ಎನ್ನುವುದು ಮಾತ್ರವೇ ಇಲ್ಲಿ ಮುಖ್ಯ. ಒಬ್ಬ ವ್ಯಕ್ತಿಯು ಒಂದು ಕಾದಂಬರಿಯನ್ನು ಬರೆದಿದ್ದಾನೆ ಎಂದರೆ ಅವನು ಸಮಾಜದಿಂದ ಹೊರತಾದ ಮಟ್ಟದಲ್ಲಿ ಇದ್ದಾನೆ ಎಂದು ಅರ್ಥವಲ್ಲ. ಸಾಹಿತ್ಯ ವಿಮರ್ಶೆಯು ನಮಗೆ ಒಂದು ಹಂತದಲ್ಲಿ ಸಮಾಜದ ವಿಮರ್ಶೆಯು ಆಗಬೇಕು ಎಂದಾದರೆ ಸಾಹಿತ್ಯ ಮತ್ತು ಕಲೆಯನ್ನು ಒಂದು ಸಮಾಜದ ಭಾಗವಾಗಿ ಹೇಗೆ ಇದೆ ಎಂದು ನೋಡಬೇಕು. ಲಂಕೇಶರ ಮುಸ್ಸಂಜೆಯ ಕಥಾಪ್ರಸಂಗವನ್ನು ಇಲ್ಲಿ ನೆನಪು ಮಾಡಿಕೊಳ್ಳುವುದು ಅತ್ಯಂತ ಅಗತ್ಯ. ಅದು ಪ್ರಾತಿನಿಧಿಕವಾದ ಕೆಲವು ಸಂಗತಿಗಳನ್ನು ಹೇಳುತ್ತವೆ. ಅವುಗಳನ್ನು ಲಕ್ಷಣ ಎಂದೂ ಹೇಳಬಹುದು. ಲಂಕೇಶ್ ಹೊನ್ನಾಳಿಯ ಸೀಮೆ ಮತ್ತು ಅದರ ಬದಲಾವಣೆಯನ್ನು ಹೇಳುತ್ತಾರೆ. ಅದರಲ್ಲಿ ಏನು ಏಳು ಬೀಳುಗಳು ಆಗುತ್ತವೆ ಎನ್ನುವುದೂ ಸಿಗುತ್ತದೆ. ಅದು ಪ್ರಾತಿನಿಧಿಕವಾದ ಒಂದು ರೂಪ. ಹಾಗೆ ನೋಡಿದರೆ ನಮಗೆ ಸಮಾಜದ ನಿಜವಾದ

ಪಲ್ಲಟಗಳು ಹಾಗೂ ಅದರ ಅಭಿವ್ಯಕ್ತಿಯನ್ನು ಹೇಳಿದವರು ಸಾಹಿತ್ಯ, ರಾಜಕಾರಣ ಮತ್ತು ಸಮಾಜದ ನಡುವೆ ಇರುವ ವಿಶೇಷವಾದ ಸಂಬಂಧವನ್ನು ನಮಗೆ ಹೇಳಿದವರು ನವೋದಯದ ಲೇಖಕರು ಎನ್ನುವುದು ಇಲ್ಲಿ ಉಲ್ಲೇಖನೀಯ. ಈವತ್ತು ಬರೆಯುವವರು ನಗರ ಮತ್ತು ಹಳ್ಳಿ ಎರಡೂ ಸೇರಿಸಿಕೊಂಡು ಬರೆಯುತ್ತಿದ್ದಾರೆ. ಅದರ ಜೊತೆಗೆ ಈವತ್ತು ಸ್ತ್ರೀ ಕಥನಗಳು ಹೆಚ್ಚು ಮುಂದೆ ಬಂದಿವೆ. ಲಿಂಗರಾಜಕಾರಣವನ್ನು ಹೆಚ್ಚು ವೈಭವೀಕರಿಸಿಕೊಂಡು ಬರೆಯುತ್ತಿದ್ದಾರೆ. ಹೆಣ್ಣು ಎನ್ನುವುದು ಒಂದು ಮಾನದಂಡ. ಈ ಮಾನದಂಡವನ್ನು ನೋಡಿದರೆ ಅನ್ಯವು ಬೇರೆಯಾಗುತ್ತದೆ. ಅದು ಆಗಿದೆ. ಒಂದು ಅಂಶವನ್ನು ನಾವು ಈವತ್ತು ಗಮನಿಸಬೇಕು. ವ್ಯಕ್ತಿಯ ಅನುಭವ ಮತ್ತು ಅದರ ಸ್ವರೂಪವು ಇಲ್ಲಿ ಮುಖ್ಯವಾಗಿದೆ ಕನ್ನಡದ ಅನೇಕ ನವೋದಯದ ಲೇಖಕರಿಗೆ ಚರಿತ್ರೆ ಮತ್ತು ಅದರ ನಿರೂಪಣೆಯು ಅತ್ಯಂತ ಅಗತ್ಯವಿತ್ತು. ಚರಿತ್ರೆ ಮತ್ತು ಅದರ ನಿರೂಪಣೆ ಎನ್ನುವುದು ನವೋದಯ ಕಾಲದ ಲೇಖಕರಿಗೆ ಒಂದು ಮಾದರಿಯು ಮಾತ್ರವೇ ಆಗಿರಲಿಲ್ಲ. ಚರಿತ್ರೆಯನ್ನು ಕತೆಯಾಗಿ, ಬರಹವಾಗಿ. ಸಾಹಿತ್ಯದ ಚರಿತ್ರೆಯಾಗಿ, ಗ್ರಂಥ ಸಂಪಾದನೆಯಾಗಿ ನೋಡಿದರು. ಇದು ಸಾಂಸ್ಕೃತಿಕವಾಗಿ ಅತ್ಯಂತ ಮಹತ್ವದ್ದೂ ಆಗಿದೆ. ಇದರ ರಾಜಕೀಯವಾದ ಆಯಾಮವು ಮತ್ತೊಂದು ಥರ ಇದೆ. ಚರಿತ್ರೆಯನ್ನು ವರ್ಗೀಕರಣ ಮಾಡುವ ಅಗತ್ಯತವೂ ಅವರಿಗೆ ಇತ್ತು ಎನ್ನುವುದು ಸತ್ಯ. ಚರಿತ್ರೆಯನ್ನು ಆಗ ಬೇರೆ ಬೇರೆ ಥರ ನೋಡಿದರು. ಅದರಲ್ಲಿ ರಾಜಸತ್ತೆ, ಮಧ್ಯಯುಗ, ಆಧುನಿಕ ಎನ್ನುವುದು ಮುಖ್ಯವಾಗಿರುವ ವರ್ಗೀಕರಣ. ಮತ್ತೊಂದು ಬಗೆಯಲ್ಲಿ ಸಾಹಿತ್ಯವನ್ನು ವರ್ಗೀಕರಣ ಮಾಡಿದರು. ಅದರಲ್ಲಿ ಚಂಪೂ, ನಡುಗನ್ನಡ ಮತ್ತು ಆಧುನಿಕ ಎನ್ನುವುದೂ ಅತ್ಯಂತ ಮುಖ್ಯವಾಗಿತ್ತು. ಆದರೆ ಚರಿತ್ರೆಯನ್ನು ನೋಡುವಾಗ ನಮಗೆ ಆಧುನಿಕ ಮತ್ತು ನವೋದಯ, ಮಧ್ಯಯುಗ, ಪ್ರಾಚೀನ ಎನ್ನುವುದು ಬೇರೆ ಬೇರೆ ಅರ್ಥಗಳನ್ನು ಹೇಳುತ್ತವೆ. ನೃಪತುಂಗನ ಕಾಲ, ಅರಿಕೇಸರಿಯ ಕಾಲ, ಕೃಷ್ಣ ದೇವರಾಯನ ಕಾಲ ಎನ್ನುವ ಹಾಗೆ ನಾವು ಕೆಳದಿ ಅರಸರ ಕಾಲ, ಮೈಸೂರು ಒಡೆಯರ ಕಾಲ ಎಂದು ಹೇಳುತ್ತೇವೆ. ಆದರೆ ಅದರ ಜೊತೆಗೆ ಇಲ್ಲಿ ಇನ್ನೊಂದು ಅಂಶವು ಇದೆ. ಆಧುನಿಕ ಯುಗದಲ್ಲಿ ಈವತ್ತು ನಾವು ನವೋದಯ ಮತ್ತು ಪ್ರಗತಿಶೀಲ, ನವ್ಯ, ಮುಂತಾದವು ನಮಗೆ ವರ್ಗೀಕರಣಗಳು. ಈ ಕೆಲವು ಸೂಚನೆಗಳನ್ನು ಕೊಡುತ್ತವೆ. ರಾಷ್ಟ್ರ ಮತ್ತು ಅದರ ಅಂಶಗಳು ನಮಗೆ ಸಾಹಿತ್ಯವನ್ನು ಗ್ರಹಿಸಲು ಬೇಕಾದ ಆಂಶಿಕ ಸಂಗತಿಗಳನ್ನು ಸೂಚಿಸುತ್ತದೆ. ಆದರೆ ರಾಷ್ಟ್ರ ಮತ್ತು ಅದರ ಅಸ್ಮಿತೆಯನ್ನು ನಾವು ನೋಡುವುದು ಹೇಗೆ? ಅದರ ರೂಪವು ಸಾಹಿತ್ಯದಲ್ಲಿ ಮಾತ್ರವೇ ಇದೆ? ಮೇಲು ನೋಟಕ್ಕೆ ಇದು

ಅತ್ಯಂತ ಸರಳವಾದ ಪ್ರಶ್ನೆ. ಹಾಗೆ ನೋಡಿದರೆ ಸಾಹಿತ್ಯ ಮತ್ತು ಅದರ ಅನನ್ಯತೆಯು ಹೇಗೆ ಇದೆ ಎಂದು ಕೇಳಬೇಕಾಗುತ್ತದೆ. ಒಂದು ರಾಷ್ಟ್ರದಲ್ಲಿ ಈವತ್ತು ಇರುವ ಅನೇಕ ಸಂಗತಿಗಳನ್ನು ನೋಡಿದರೆ ಅವುಗಳು ಸಾಹಿತ್ಯದಲ್ಲಿ ಸಂಪೂರ್ಣವಾಗಿ ದಾಖಲಾಗಿದೆ ಎಂದು ಹೇಳಲು ಆಗುವುದಿಲ್ಲ ಈವತ್ತು ರಾಷ್ಟ್ರ ಮತ್ತು ಅದರ ಪ್ರಶ್ನೆಯನ್ನು ಕನ್ನಡದ ಭಾಷೆಯು ಒಂದು ಥರ ನೋಡಿದೆ. ಆದರೆ ಅದನ್ನು ಮಲೆಯಾಳಂ ಮತ್ತೊಂದು ಥರ ನೋಡಿದೆ. ಬಂಗಾಳಿಯು ಇನ್ನೊಂದು ಥರ ನೋಡಿದೆ. ಇದನ್ನು ರವೀಂದ್ರನಾಥ ಠಾಗೋರರು ರಾಷ್ಟವನ್ನು ರೊಮಾಂಟಿಕ್ ಧೋರಣೆಯಲ್ಲಿ ಹೇಳಿದರು. ಈ ಬಗೆಯ ರಾಷ್ಟ್ರ ಮತ್ತು ಅದರ ನಿರ್ವಚನವು ನಮಗೆ ಪಂಪನಲ್ಲಿ ಕಾಣುವುದಿಲ್ಲ. ನಮಗೆ ಆ ಬಗೆಯಲ್ಲಿ ಪಂಪನು ಹೇಳಿಲ್ಲ ಎಂದರೆ ಅದರ ಕಾರಣವೂ ಅತ್ಯಂತ ಸ್ಪಷ್ಟ ಒಂದು ಸಂಗತಿಯನ್ನು ಇಲ್ಲಿ ಹೇಳುವುದು ಅತ್ಯಂತ ಸೂಕ್ತ. ರಾಷ್ಟ್ರ ಮತ್ತು ಅದರ ಪ್ರಶ್ನೆಯನ್ನು ನಾವು ಇನ್ನೊಂದು ರೂಪದಲ್ಲಿ ನೋಡಿದ್ದು ನಿಜ. ಇಂಗ್ಲೀಷ್ ಮತ್ತು ಇಂಗ್ಲೆಂಡ್, ಜರ್ಮನ್ ಭಾಷೆ ಮತ್ತು ಜರ್ಮನಿ, ಗ್ರೀಕ್ ಭಾಷೆ ಮತ್ತು ಅದರ ಜೊತೆಗೆ ಇರುವ ರಾಷ್ಟ್ರಗಳು ಹೀಗೆ ಅನೇಕ ವರ್ಗೀಕರಣಗಳನ್ನು ಮಾಡಿದ್ದೇವೆ. ರಾಷ್ಟ್ರ ಮತ್ತು ಅದರ ಸ್ವರೂಪ ಹಾಗೂ ಸಾಹಿತ್ಯ ಮತ್ತು ಅದರ ಭಾಷೆ, ಅನೇಕ ವಿಚಾರಗಳನ್ನು ಚರ್ಚೆ ಮಾಡಿದ್ದೇವೆ. ಇದರ ಮತ್ತೊಂದು ರೂಪವನ್ನು ನಾವು ಈವತ್ತು ಭಾರತದಲ್ಲಿಯೂ ಕಾಣಬಹುದು. ಕನ್ನಡ ಮತ್ತು ಕಾರ್ನಾಟಕ, ಬಂಗಾಲಿ ಮತ್ತು ಬಂಗಾಳ ಒಟ್ಟಿಗೆಸಾಗುತ್ತದೆ. ಸಾಮಾಜಿಕ ಸೌಂದರ್ಯಶಾಸ್ತ್ರ ಎನ್ನುವುದಕ್ಕೆ ಈ ಅರ್ಥದಲ್ಲಿ ಅತ್ಯಂತ ಮಹತ್ವವು ಇದೆ. ಗಳಗನಾಥರನ್ನು ಓದುವಾಗ ನಮಗೆ ಆಗಿರುವುದು ಇದೇ ರೀತಿಯ ಅನುಭವ. ಮೇಲು ನೋಟಕ್ಕೆ ಅವರು ಬೇರೆ ಕಥನಗಳನ್ನು ಹೇಳಿದರು ಎಂದು ಅನಿಸಿದರೂ ಅವರು ಹೇಳಿದ್ದು ಕನ್ನಡದ ಕರ್ಮ ಕಥೆಯನ್ನು.. ಅದರ ಜೊತೆಗೆ ಗಳಗನಾಥರು ನಮಗೆ ಹೊಸದಾದ ಅಭಿರುಚಿಯನ್ನು ಹುಟ್ಟು ಹಾಕಿದರು. ಕಾದಂಬರಿ ಮತ್ತು ಅದರ ರುಚಿಯು ಸಿಕ್ಕಿತು. ಅವರ ಕಾದಂಬರಿಗಳು ಅತ್ಯಂತ ಸುಲಭವಾದ ಒಂದು ನಿರೂಪಣೆಯನ್ನು ಮಾಡುವುದಿಲ್ಲ. ಅದರಲ್ಲಿ ವಿವಿಧತೆಯು ಇದೆ. ಗಳಗನಾಥರನ್ನು ನಾವು ಎಡ ಅಥವಾ ಬಲ ಎಂದು ಸರಳವಾಗಿ ವರ್ಗೀಕರಣ ಮಾಡಲು ಆಗುವುದಿಲ್ಲ. ಅವರು ಗತವನ್ನು ಕುರಿತು ಹೇಳಿದರು. ಆದರೆ ಆ ಗತವು ಹೇಗೆ ನಮಗೆ ಮುಖ್ಯವಾಗುತ್ತದೆ ಎಂದು ನಿರೂಪಣೆ ಮಾಡುವುದು ಮಾತ್ರವೇ ಅತ್ಯಂತ ಮುಖ್ಯವಾಗಿತ್ತು. ಮತ್ತೊಂದು ಅಂಶವನ್ನು ನಾವು ಇಲ್ಲಿ ಗಮನಿಸುವುದು ಅತ್ಯಂತ ಅಗತ್ಯ. ಸಾಹಿತ್ಯ ಮತ್ತು ಸಂಸ್ಥೆಗಳಿಗೆ ಇರುವ ಸಂಬಂಧವು ಅತ್ಯಂತ ಸಂಕೀರ್ಣವಾದ್ದು ವಸಾಹತು ಕಾಲದ ತರುವಾಯ. ಸಾಹಿತ್ಯವು ನಮಗೆ ಅಗತ್ಯವಾಗಿದೆ ಎನ್ನುವ

ಪ್ರಶ್ನೆಯು ಬಂದುದು ಈ ಕಾಲದಲ್ಲಿ. ನಮಗೆ ಸಾಹಿತ್ಯವು ಯಾಕೆ ಮುಖ್ಯವಾಗಿದೆ ಮತ್ತು ಅದನ್ನು ಯಾಕೆ ಹೇಳಬೇಕು ಎಂದು ನಮ್ಮ ಹಿರಿಯ ಲೇಖಕರು ಹೇಳಿದರು. ಅದರಲ್ಲಿಯೂ ನಮಗೆ ನಮ್ಮ ಸಾಹಿತ್ಯ ಹೇಗೆ ಅತ್ಯಂತ ಅಗತ್ಯ ಎಂದು ಹೇಳುವಾಗ ಡಿ.ಎಲ್.ನರಸಿಂಹಾಚಾರ್ ಅವರು ಗ್ರಂಥವನ್ನು ಸಂಪಾದನೆ ಯಾಕೆ ಮುಖ್ಯ ಎಂದು ಹೇಳಿದರು. ಸಾಮಾಜಿಕ ದೃಷ್ಟಿಕೋನದಲ್ಲಿ ಹೇಳಬೇಕೆಂದರೆ ಆಗ ಗ್ರಂಥ ಸಂಪಾದನೆ ಎನ್ನುವುದು ಅತ್ಯಂತ ಮಹತ್ವದ ಕೆಲಸವೂ ಆಗಿರುವುದು ನಿಜ. ಅದನ್ನು ಮೌಲ್ಯ ರಹಿತವಾದ್ದು ಎಂದು ಭಾವಿಸುವುದು ಸಾಧ್ಯವಿಲ್ಲ. ನಮಗೆ ನವೋದಯ ಕಾಲದ ಲೇಖಕರು ಪ್ರಾಚೀನ ಪರಂಪರೆ ಮತ್ತು ಅದರ ಅಗತ್ಯವನ್ನು ನಿರೂಪಿಸಿದರು. ಅದು ನಂಬಿಕೆಯನ್ನು ಕೂಡಾ ಹೇಳುತ್ತದೆ. ಹದಿನಾರನೆಯ ಶತಮಾನದ ಅನಂತರ ಪಶ್ಚಿಮದಲ್ಲಿ ಧಾರ್ಮಿಕ ಸುಧಾರಣೆಯ ಪ್ರಶ್ನೆಯನ್ನು ಅನೇಕರು ಹೇಳಿದ್ದು ಇಲ್ಲಿ ಗಮನಾರ್ಹ. ಅದು ಮತ್ತೊಂದು ಅರ್ಥದಲ್ಲಿ ಶುದ್ಧೀಕರಣವನ್ನು ಹೇಳುತ್ತದೆ. ಹೊಸದಾದ ಜಗತ್ತಿಗೆ ಬೇಕಾದ ಪರಿವರ್ತನೆಯು ಅದರಲ್ಲಿ ಮುಖ್ಯವಾದ್ದು ಈಗ ಇತಿಹಾಸ. ಜನಾಂಗ ಮತ್ತು ಕಾಲ ಹಾಗೂ ಆಯಾ ಕಾಲದ ಮನೋಧರ್ಮವು ಒಂದಲ್ಲ ಒಂದು ಅರ್ಥದಲ್ಲಿ ಲೇಖಕರ ಮೇಲೆ ಪ್ರಭಾವವನ್ನು ಬೀರುತ್ತದೆ. ಆದ್ದರಿಂದ ಸಾಹಿತ್ಯದಲ್ಲಿ ಈ ಪ್ರಶ್ನೆಗಳು ಅತ್ಯಂತ ಸಹಜವಾಗಿ ಬರುತ್ತದೆ. ಆದರೆ ಇಲ್ಲಿ ಜನಾಂಗವು ಅತ್ಯಂತ ಪ್ರಭಾವಶಾಲಿಯೂ ಆಗಿರುವುದು ಸತ್ಯ. ಆದ್ದರಿಂದ ಈವತ್ತು ನಾವು ಯಾವುದನ್ನು ಹೇಳುತ್ತೇವೆಯೊ ಅದರ ಹಿಂದೆ ಒಂದು ಜನಾಂಗವು ಕೆಲಸವನ್ನು ಮಾಡುತ್ತದೆ. ಅದರಲ್ಲಿ ಒಂದು ಮೂಲವೂ ಇದೆ. ಇದನ್ನು ಹೇಳುವಾಗ ಲುಕಾಕ್ಸ್ ಮತ್ತೊಂದು ಮಾತನ್ನು ಹೇಳುತ್ತಾನೆ: ಕಾಲ, ಸನ್ನಿವೇಶ ಮತ್ತು ಮನೋಧರ್ಮವು ನಮ್ಮ ಪ್ರಜ್ಞೆಯನ್ನು ಹೇಳುತ್ತದೆ. ಜನಾಂಗವು ನಮಗೆ ಒಂದು ಮೂಲವಾಗಿದೆ. ಯಾವಾಗ ಸಮಾಜವು ಒಂದು ಪರಿಸರವನ್ನು ಬದಲು ಮಾಡಿತೋ ಆಗ ನಮ್ಮ ಬರಹಗಳು ಮತ್ತು ಅದರ ಸ್ವರೂಪಗಳೂ ಬದಲಾದವು. ಈ ದೃಷ್ಟಿಯಿಂದ ಬರಹ ಮತ್ತು ಅದರ ಅರ್ಥಗಳು ಕಾಲ ಕಾಲಕ್ಕೆ ಬದಲಾಗುತ್ತವೆ. ಅದರ ಅರ್ಥದ ವ್ಯಾಪ್ತಿಯೂ ಭಿನ್ನವಾಗುತ್ತದೆ. ಆಧುನಿಕ ಬಂಡವಾಳವಾದ ಮತ್ತು ಅದರ ಸ್ವರೂಪಗಳು ಹೇಗೆ ವ್ಯತ್ಯಾಸವು ಆಗುತ್ತಾ ಬಂದಿದೆಯೋ ಅದೇ ಥರ ಅದರ ಮೂಲಕ ನಮ್ಮ ಸಂವಹನ ಮತ್ತು ಅದರ ಮಾಧ್ಯಮಗಳೂ ಬದಲಾಗುತ್ತವೆ. ಸಂವಹನವು ಸುಮ್ಮನೆ ಆಗುವುದಿಲ್ಲ. ಅದರಲ್ಲಿ ಭಿನ್ನತೆಯು ಇರುತ್ತದೆ. ಅದರ ವಿನ್ಯಾಸಗಳು ವಿವಿಧ ಕಾಲದಲ್ಲಿ ವಿವಿಧ ಥರ ಇರುತ್ತದೆ. ಭಾಷೆ ಮತ್ತು ಅದರ ಸಂವಹನದಲ್ಲಿ ಸೂಚನೆಗಳು ಬದಲಾಗುತ್ತವೆ. ಅದರ ಸಂಜ್ಞೆ ಮತ್ತು ಅದರ ಸ್ವರೂಪಗಳು ಭಿನ್ನವಾಗುತ್ತವೆ. ಸಂಜ್ಞೆ ಮತ್ತು

ಅದರ ಸ್ವರೂಪಗಳು ವ್ಯತ್ಯಾಸವಾಗುವುದು ಅಂದರೆ ಅದರ ಸಂಯೋಜನೆಯಲ್ಲಿ ಭಿನ್ನವಾಗುವುದು. ಆದರೆ ಸಂಯೋಜನೆ ಎನ್ನುವುದು ನಮಗೆ ಹೇಗೆ ಬೇರೆಯಾಗುತ್ತದೆ ಮತ್ತು ಸಂವಹನವನ್ನು ಮಾಡುವಾಗ ನಾವು ಹೇಗೆ ನಮ್ಮದೇ ನಿಯಮವನ್ನು ರಚನೆ ಮಾಡುತ್ತೇವೆ ಎಂದು ಅರ್ಥವಿಸಿಕೊಳ್ಳಬೇಕು. ಒಂದು ಅರ್ಥದಲ್ಲಿ ಯಾವುದೇ ಭಾಷೆಯಲ್ಲಿ ಸಂಹಿತೆಗಳು ಬಹುತ್ವವನ್ನು ಹೊಂದಿರುತ್ತವೆ. ಅದರ ಜೊತೆಗೆ ಅದರಲ್ಲಿ ಸಮತೋಲನವು ಇರುತ್ತವೆ.ವ್ಯಕ್ತಿಯು ತನ್ನ ಅನುಭವವನ್ನು ಹೇಳುವುದು ತನ್ನ ಭಾಷೆಯಲ್ಲಿ ಆದರೆ ಭಾಷೆ ಎನ್ನುವುದು ನಮಗೆ ಎರಡು ಆಯಾಮವನ್ನು ಸೂಚಿಸುತ್ತವೆ. ಒಂದು ಅದರ ಬಹುತ್ವ ಮತ್ತೊಂದು ಅದರ ನಿಯಮಗಳು. ಕಾದಂಬರಿಯನ್ನು ಸೇರಿದ ಹಾಗೆ ಸಂಗೀತ ಸಮೇತ ಈ ದೃಷ್ಟಿಯಿಂದ ಒಂದು ಸುದೀರ್ಘವಾದ ಚರಿತ್ರೆಯನ್ನು ಹೊಂದಿರುತ್ತದೆ. ಪ್ರತಿಯೊಂದು ಚಾರಿತ್ರಿಕ ಸನ್ನಿವೇಶದಲ್ಲಿಯೂ ಲೇಖಕರು ತಮ್ಮ ಸಮಕಾಲೀನವಾದ ಸನ್ನಿವೇಶದಲ್ಲಿ ನಿಂತುಕೊಂಡು ಬರೆಯುತ್ತಾರೆ. ಅದರೆ ಇದರ ಮೂಲಕ ಲೇಖಕರು ನಿರ್ದಿಷ್ಟವಾದ ಅನುಸಂಧಾನವನ್ನು ಮಾಡುತ್ತಾರೆ. ಹೇಗೆ ಸಮಾಜ ಮತ್ತು ಅದರ ಕಾರಣಗಳು ಒಂದು ಸಾಹಿತ್ಯ ಮತ್ತು ಸಂಸ್ಕೃತಿಯ ಮೇಲೆ ಪ್ರಭಾವವನ್ನು ಬೀರುತ್ತದೆಯೋ ಅದೇ ರೀತಿಯಲ್ಲಿ ಅದು ನಮ್ಮ ಜೀವನದ ಕ್ರಮದ ಮೇಲೆಯೂ ಒಂದು ಪರಿಣಾಮವನ್ನು ಬೀರುತ್ತದೆ. ಪ್ರತಿಯೊಂದು ಹೊಸದಾದ ನಿರೂಪಣೆಯು ನಮಗೆ ಹೊಸದಾದ ದಿಕ್ಕನ್ನು ಹೇಳುತ್ತವೆ. ಯಾವುದು ನಮಗೆ ಹೊಸತು ಮತ್ತು ಯಾವುದು ನಮಗೆ ಹಳತು ಎಂದು ಅನಿಸುವುದು ಅವುಗಳ ಸಾಧ್ಯತೆಯ ಹಿನ್ನೆಲೆಯಲ್ಲಿ ಎಂದು ಅರ್ಥ ಮಾಡಿಕೊಳ್ಳುವುದು ಅಗತ್ಯ. ಮತ್ತೊಂದು ದೃಷ್ಟಿಕೋನದಲ್ಲಿ ಹೇಳುವುದಿದ್ದರೆ ಆಧುನಿಕ ಎನ್ನುವುದು ನಮಗೆ ನಮ್ಮ ವರ್ತಮಾನದ ಆಧಾರದಲ್ಲಿ ರೂಪುಗೊಳ್ಳುವ ಪ್ರಕ್ರಿಯೆಯೂ ಆಗಿರುತ್ತದೆ. ಕುಮಾರ ವ್ಯಾಸನ ಶೈಲಿಯು ನಮಗೆ ಈವತ್ತು ಒಂದು ನಿರ್ದಿಷ್ಟವಾದ ಶೈಲಿ. ಆದರೆ ನಾವು ಈವತ್ತು ಅದೇ ಬಗೆಯ ರೂಪಕ ಮತ್ತು ಅದೇ ಬಗೆಯ ಛಂದಸ್ಸನ್ನು ಬಳಸಲಾರೆವು. ಕಾಲವು ಬದಲಾಗಿದೆ. ಅದರಿಂದ ಈವತ್ತು ನಾವು ನಿರೂಪಣೆ ಮಾಡುವ ಕ್ರಮವೂ ಬದಲಾಗಿದೆ. ನಾವು ಈವತ್ತು ಕುಮಾರವ್ಯಾಸ ಮತ್ತು ಅವನ ಶೈಲಿಯನ್ನು ಹೇಳುವುದು ಅತ್ಯಂತ ಕಷ್ಟವಾಗಿದೆ. ಷಟ್ಪದಿಯನ್ನು ನಾವು ದಾಟಿದ್ದೇವೆ. ಕೇಳುವ ಪಠ್ಯಗಳು ನಮಗೆ ಈವತ್ತು ಓದುವ ಪಠ್ಯಗಳಾಗಿ ಪರಿವರ್ತನೆಗಳಾಗಿವೆ. ಇಲ್ಲಿ ಇನ್ನೊಂದು ಅಂಶವನ್ನು ನಾವು ಗಮನಿಸಬೇಕು. ಆಧುನಿಕ ಪಠ್ಯಗಳು ನಮಗೆ ಓದುವ ಕೃತಿಗಳಾಗಿವೆ. ಓದುವುದು ಮತ್ತು ಕೇಳಿಸಿಕೊಳ್ಳುವುದು ಎನ್ನುವುದೇ ಬೇರೆ ಮಾದರಿಯ ಪ್ರಕ್ರಿಯೆಗಳು ಆಗಿವೆ. ಇದನ್ನು ಒಂದು ಸಾಮಾಜಿಕ ಮತ್ತು ಆರ್ಥಿಕವಾದ ಪ್ರಶ್ನೆ ಎಂದೂ

ನೋಡಬೇಕಾಗುತ್ತದೆ. ಯಾರು ಬುದ್ಧಿಜೀವಿಗಳು ಎನ್ನುವ ಪ್ರಶ್ನೆಯು ಬಂದಿರುವುದು ಸತ್ಯ. ಅದರಲ್ಲಿಯೂ ಈ ಪ್ರಶ್ನೆಯು ಪುನರುಜ್ಜೀವನದ ಅನಂತರ ಈ ಪ್ರಶ್ನೆಗೆ ಬೇರೆ ವ್ಯಾಖ್ಯೆಯು ಸಿಕ್ಕಿತು. ಆಧುನಿಕ ಸಮಾಜದಲ್ಲಿ ಲೇಖಕರು ಮತ್ತು ಬುದ್ಧಿಜೀವಿಗಳು ನಾಯಕರಂತೆ ವರ್ತನೆ ಮಾಡುವುದು ಸತ್ಯ. ವ್ಯಕ್ತಿಯು ಒಂದು ಸಮಾಜದಲ್ಲಿ ಲೇಖಕನಾಗುವುದು ಅಥವಾ ಸಂಗೀತಕಾರನು ಆಗುವುದು ಇಲ್ಲವೇ ಕಾರ್ಮಿಕನಾಗುವುದು ಅಂದರೆ ಅವನು ನಿಜವಾದ ತನ್ನ ಶಕ್ತಿಯನ್ನು ಯಾವುದೋ ಒಂದು ವಿಚಾರಕ್ಕೆ ಬಳಸುವುದು ಎಂದೂ ಆಗುತ್ತದೆ. ಆಧುನಿಕ ಯುಗದಲ್ಲಿಯೂ ಮನುಷ್ಯ ಮತ್ತು ಅವನ ಶಕ್ತಿಗೆ ಒಂದು ವಿನಿಮಯ ಮೌಲ್ಯವು ಇದೆ. ಆದರೆ ಬರೆಯುವುದು ಅಂದರೆ ಅದರಲ್ಲಿ ನಾವು ನಮ್ಮ ಶಕ್ತಿಯನ್ನು ಬಳಸುತ್ತೇವೆ ಎನ್ನುವುದು ಲೆಕ್ಕಕ್ಕೆ ಸಿಗುವುದಿಲ್ಲ. ಬರಹ ಮತ್ತು ಅದರ ಚರಿತ್ರೆಗೆ ಈ ದೃಷ್ಟಿಯಿಂದ ಹೆಚ್ಚು ಮಹತ್ವವು ಇದೆ. ಇಲ್ಲಿ ಒಂದು ಅಂಶವನ್ನು ನಾವು ಹೇಳಬೇಕು: ನಮಗೆ ಜ್ಞಾನ ಮತ್ತು ಅದರ ರೂಪಕ್ಕೆ ವಿವಿಧ ಹಂತಗಳು ಇವೆ. ಆದರೆ ಯಾರು ಬರೆಯುತ್ತಾರೆಯೋ ಅವರಿಗೆ ಹೆಚ್ಚು ಮಹತ್ವವು ಇದೆ. ಇದೇ ಮಹತ್ವವು ರಂಗೋಲಿಯನ್ನು ಬರೆಯುವವರಿಗೆ ಇಲ್ಲ. ಅದನ್ನು ನಾವು ಬೇರೆ ಬೇರೆ ವರ್ಗಗಳಿಗೆ ಅನ್ವಯವನ್ನು ಮಾಡಬಹುದು. ಲೇಖಕ ಮತ್ತು ಅತ್ಯಂತ ಸಾಮಾನ್ಯನಾದ ಒಬ್ಬ ನೌಕರನಿಗೆ ವ್ಯತ್ಯಾಸವು ಎಲ್ಲಿ ಇದೆ ಎಂದು ನೋಡಬೇಕು. ಸಾಮಾನ್ಯನಾದ ಮನುಷ್ಯನು ಕೆಲಸವನ್ನು ಮಾಡುವ ರೀತಿಯು ಬೇರೆ ಇರುತ್ತದೆ. ಬರೆಯುವುದು ದೈಹಿಕವಾದ ಶಕ್ತಿಗಿಂತ ಹೆಚ್ಚಾಗಿ ಅದು ಮಾನಸಿಕವಾದ ಶಕ್ತಿ. ಆದ್ದರಿಂದ ಇವುಗಳ ನಡುವೆ ಭಿನ್ನತೆಗಳು ಇರುತ್ತವೆ. ಬರಹ ಮತ್ತು ಅದರ ಆವಶ್ಯಕತೆಗೆ ಒಂದು ಆಯಾಮ ಇರುತ್ತದೆ. ಅದೇ ಆಯಾಮವನ್ನು ಇಟ್ಟಿಗೆಯ ರಚನೆಗೆ ಅನ್ವಯ ಮಾಡಲು ಆಗುವುದಿಲ್ಲ. ನಾವು ಇಲ್ಲಿ ಇನ್ನೊಂದು ಸಂಗತಿಯನ್ನು ಗಮನಕ್ಕೆ ತಂದು ಕೊಳ್ಳುವುದು ಅತ್ಯಂತ ಉಚಿತ. ಇಟ್ಟಿಗೆಯನ್ನು ನಾವು ಮಾಡುತ್ತೇವೆ ಎಂದಾದರೆ ಆಗ ಅದರ ಗಾತ್ರವನ್ನು ನಾವು ಗಮನಿಸಬೇಕು: ಇಟ್ಟಿಗೆಗೆ ಗಾತ್ರವು ಅಗತ್ಯ. ಅದೇ ರೀತಿಯಲ್ಲಿ ಸೂಜಿಯ ಉದ್ದ ಮತ್ತು ಅಗಲಕ್ಕೆ ಒಂದು ಲೆಕ್ಕವು ಇದೆ. ಇದನ್ನು ನಾವು ಬರಹಕ್ಕೆ ತಂದು ಕೊಳ್ಳಲು ಸಾಧ್ಯವೇ ಇಲ್ಲ. ಇದನ್ನು ಅಡರ್ನೊ ಹೇಳುತ್ತಾನೆ. ಅವನು ಹೇಗೆ ಗಣಿತ ಎನ್ನುವುದು ನಮಗೆ ಹೊಸದಾದ ವಿವರಣೆಗಳನ್ನು ಕೊಟ್ಟವು ಎನ್ನುತ್ತಾನೆ. ಇದು ಅವನು ಪ್ರತಿಪಾದಿಸುವ ಅತ್ಯಂತ ಮುಖ್ಯವಾದ ಅಂಶ. ಆದರೆ ಪಿಟೀಲ್ ಮತ್ತು ಅದರ ತಂತಿಗಳಿಗೆ ಒಂದು ಲೆಕ್ಕವು ಇದೆ. ಸಂಗೀತ ಮತ್ತು ಅದರ ಸ್ವರೂಪವೂ ಆಧುನಿಕ ಯುಗದಲ್ಲಿ ಬೇರೆ ಆಯಿತು. ಇದರಲ್ಲಿ ಆಧುನಿಕ ಎನ್ನುವುದು ಸಂಗೀತದಲ್ಲಿ ಒಂದು ಆಯಾಮವನ್ನು

ಕೊಟ್ಟಿದೆ. ಲೈರ್ ಎನ್ನುವುದು ನಮಗೆ ಗ್ರೀಕ್ ನಾಟಕಗಳಿಂದ ದೊರೆತ ಒಂದು ತಂತಿ ವಾದ್ಯ. ಅದಕ್ಕೆ ಲೆಕ್ಕವಿತ್ತು. ಅದು ರಂಗಭೂಮಿಗೆ ಅತ್ಯಂತ ಅಗತ್ಯವಾಗಿತ್ತು. ಕಾಲ ಕ್ರಮೇಣ ಇದು ಬದಲಾಗಿದೆ. ವಾದ್ಯದ ತಂತಿಗಳು ವ್ಯತ್ಯಾಸವಾಗಿದೆ. ಯಾವುದೇ ಸಾಹಿತ್ಯದ ರೂಪಗಳು ಒಂದು ಸಂಸ್ಕೃತಿಯಲ್ಲಿ ತನ್ನದೇ ಆದ ಪಾತ್ರವನ್ನು ವಹಿಸುತ್ತವೆ ಎನ್ನುವುದು ನಿಜ. ಇದ್ದಕ್ಕಿದ್ದಂತೆ ನಮ್ಮಲ್ಲಿ ಚಂಪೂ ಕಾವ್ಯಗಳು ಹುಟ್ಟಿಲ್ಲ. ವಚನಗಳು ಬಂದಿಲ್ಲ. ಸಾಹಿತ್ಯವನ್ನು ನಾವು ಒಂದು ಕಾಲಕ್ಕೆ ಅನುಸಾರವಾಗಿ ನೋಡಬೇಕಾಗುತ್ತದೆ. ಸಾಹಿತ್ಯ ಮತ್ತು ಅದರ ಆಶಯಗಳು ಒಂದು ಕಾಲಕ್ಕೆ ಒಂದು ಥರ ಇರುತ್ತದೆ. ಮತ್ತೊಂದು ಕಾಲಕ್ಕೆ ಮತ್ತೊಂದು ಥರ ಇರುತ್ತದೆ. ಒಂದು ಕಾಲದಲ್ಲಿ ಮಾನ್ಯವಾದ್ದು ಮತ್ತೊಂದು ಕಾಲದಲ್ಲಿ ಮಾನ್ಯವಾಗುತ್ತದೆ ಎಂದು ಹೇಳಲಾಗುವುದಿಲ್ಲ. ನಾವು ನೋಡುವ ಮತ್ತು ಗ್ರಹಿಸುವ ಸಮಾಜವೂ ವ್ಯತ್ಯಾಸವಾಗುತ್ತವೆ. ಅಷ್ಟೇ ಅಲ್ಲ ನಾವು ಓದುವುದು ಮತ್ತು ಗ್ರಹಿಸುವುದು ಎನ್ನುವುದೂ ಆಶಯವನ್ನು ಹೇಳುತ್ತದೆ. ತೇಜಸ್ವಿಯವರನ್ನು ಓದುವಾಗ ನಿರ್ದಿಷ್ಟ ಸನ್ನಿವೇಶದ ಹಿನ್ನಲೆಯಲ್ಲಿಯೇ ಗ್ರಹಿಸುತ್ತೇವೆ. ಆದ್ದರಿಂದಲೇ ನಮಗೆ ತೇಜಸ್ವಿಯವರು ಹೇಳುವುದು ಅತ್ಯಂತ ಮುಖ್ಯ. ತಾತ್ವಿಕ ಎನ್ನುವುದು ನಮಗೆ ಬರೀ ರೂಪವನ್ನು ಆಧರಿಸಿಕೊಂಡು ಇರುವುದಿಲ್ಲ. ನಮಗೆ ಸಂಕಥನಗಳನ್ನು ನಿರ್ಧಾರ ಮಾಡುವುದು ಆಶಯಗಳು. ತೇಜಸ್ವಿಯವರು ಹೇಳುವುದು ಗ್ರಾಮಜೀವನವನ್ನು. ಅವರು ಭಕ್ತಿಗೀತೆಗಳನ್ನು ಬರೆದಿಲ್ಲ. ಅವರಿಗೆ ಅದು ಮುಖ್ಯವಲ್ಲ.ಇದನ್ನು ಹೇಳಲು ಕಾರಣವು ಇದೆ. ಭಕ್ತಿ ಮತ್ತು ಧಾರ್ಮಿಕ ಚಳುವಳಿಗಳು ಬಳಸುವ ಭಾಷೆಯು ಬೇರೆ ಥರ ಇರುತ್ತದೆ. ಅದು ಬೇರೆ ಪ್ರಶ್ನೆ. ಆದರೆ ನಮಗೆ ಕಾದಂಬರಿಯು ಒಂದು ಸಾಹಿತ್ಯದ ಪ್ರಕಾರವಾಗಿ ಬೆಳೆದು ಬಂದುದಕ್ಕೂ; ಅದು ಒಂದು ಮಾರುಕಟ್ಟೆಯ ವಸ್ತುವಾಗಿ ಇರುವುದಕ್ಕೂ ಒಂದು ಸಂಬಂಧವು ಇದೆ. ಸಾಹಿತ್ಯಕ್ಕೆ ಯಾವುದೇ ಮೌಲ್ಯವು ಇಲ್ಲದೆ ಹೋಗಿದ್ದರೆ ಇದು ಅರ್ಥ ಪೂರ್ಣವಾಗುತ್ತಿರಲಿಲ್ಲ. ಆದರೂ ಸಾಹಿತ್ಯದಲ್ಲಿ ಎರಡು ಪ್ರಕ್ರಿಯೆಗಳು ಇರುತ್ತವೆ. ಅದರಲ್ಲಿ ಒಂದು ನಮ್ಮ ನಿತ್ಯದ ಜೀವನಕ್ಕೆ ಸಂಬಂಧ ಪಟ್ಟದ್ದು. ಸಾಹಿತ್ಯದಲ್ಲಿ ಮತ್ತೊಂದು ಬಗೆಯು ಇದೆ. ಅದು ನಮ್ಮ ನಿತ್ಯದ ಜೀವನಕ್ಕಿಂತ ಹೊರತಾದ್ದು. ಸಾಮಾನ್ಯವಾದ ನಮ್ಮ ಭಾಷೆಯು ಒಂದು ಬಗೆಯಲ್ಲಿ ಬರೀ ಗಣಿತದಂತೆ ಇರುತ್ತದೆ. ಅದರಲ್ಲಿ ಲೆಕ್ಕದ ಮಾದರಿಗೆ ಹೆಚ್ಚು ಪ್ರಾಶಸ್ತ್ಯವು ಇರುತ್ತದೆ. ಅಡರ್ನೊ ಹೇಳಿದ ಮಾತನ್ನು ಇಲ್ಲಿ ಮತ್ತೆ ಉಲ್ಲೇಖಿಸಬಹುದು. ಸಂಗೀತಕ್ಕೆ ಚರಿತ್ರೆಯು ಇದೆ. ಆದರೆ ಚರಿತ್ರೆಯು ಇರುವುದು ಬರೀ ಅದರ ಭಾಷೆಯಲ್ಲಿ ಅಲ್ಲ; ಸಂಗೀತವು ನಮ್ಮ ಕಿವಿಗೆ ಹೆಚ್ಚು ಸುಖವನ್ನು ಕೊಡುತ್ತದೆ. ಎನ್ನುವುದರಲ್ಲಿ ಹಾಗಿದ್ದರೂ ಸಂಗೀತ ಎನ್ನುವುದು ಸಹಜವಲ್ಲ. ಅದು ಕೂಡಾ ಆಧುನಿಕ

ಉತ್ಪಾದನೆಯ ಒಂದು ಭಾಗ. ಆಧುನಿಕ ಸಂಗೀತ ಮತ್ತು ಅದರ ಮಾರುಕಟ್ಟೆಯು ಅತ್ಯಂತ ವಿಸ್ತಾರವಾಗಿದೆ. ಅದು ಈವತ್ತು ಒಂದು ವಿಶಾಲವಾದ ಉದ್ದಿಮೆಯು ಆಗಿದೆ. ಚಿತ್ರ ಸಂಗೀತವು ಇದನ್ನು ಸೂಚಿಸುತ್ತದೆ.

ಕಾದಂಬರಿ ಎನ್ನುವುದು ಈವತ್ತು ತನ್ನದೇ ಆದ ಒಂದು ಚಹರೆಯನ್ನು ಹೊಂದಿದೆ. ಅದರ ಪರಿಣಾಮವು ಸಂಸ್ಕೃತಿಯ ಮೇಲೆ ಆಗಿದೆ. ಅದರ ಪರಿಣಾಮ ಮತ್ತು ಭಾವಗೀತೆಯ ಪರಿಣಾಮವು ಒಂದೇ ಥರ ಇಲ್ಲ. ಅವುಗಳ ಭಾಷೆಯೂ ಅತ್ಯಂತ ಭಿನ್ನವಾದ್ದು. ಭಾವಗೀತೆಯು ನಮ್ಮ ಜೀವನದ ಎಲ್ಲಾ ಭಾಗವನ್ನು ಸ್ಪರ್ಷ ಮಾಡುತ್ತದೆಯೇ ಎಂದು ಕೇಳಿದರೆ ಅದಕ್ಕೆ ಒಂದು ಸುಲಲಿತವಾದ ಉತ್ತರವನ್ನು ಕೊಡುವುದು ಅತ್ಯಂತ ಕಷ್ಟ. ಎಷ್ಟೋ ಸರ್ತಿ ಭಾವಗೀತೆಯು ನಮ್ಮ ಜೀವನವನ್ನು ಯಾವುದೇ ಕಾರಣಕ್ಕೆ ಮುಟ್ಟುವುದೂ ಇಲ್ಲ. ಅದರೊಂದಿಗೆ ಸಂವಾದ ಮಾಡುವುದೇ ಅತ್ಯಂತ ಕಷ್ಟ. ಭಾವಗೀತೆಯದು ಎರಡು ಬಗೆಯ ನಡಿಗೆ. ಒಂದು ಅದು ಭಾವಗೀತೆಯು ಆಗಿರುವುದರಿಂದ ಅದರಲ್ಲಿ ಭಾವ ಮಾತ್ರವೇ ಪ್ರಧಾನ. ಮತ್ತೊಂದು ಅದರ ಗಾಯನದ ಗುಣ. ಒಂದು ಕ್ಷಣ ಬಂದು ಮಾಯವಾಗುವ ಭಾವನೆಗಳು ಭಾವಗೀತೆಯಲ್ಲಿ ಅತ್ಯಂತ ಮುಖ್ಯ. ಚಲನ ಚಿತ್ರ ಗೀತೆಗಳು ಮತ್ತು ಆಧುನಿಕ ಸಂಗೀತವು ಹೇಗೆ ಯಂತ್ರಗಳನ್ನು ಬಳಸುತ್ತವೆ ಎನ್ನುವುದು ಎಲ್ಲರಿಗೆ ಗೊತ್ತು. ವಾದ್ಯ ಮತ್ತು ಅದರ ಬಳಕೆಯು ಈವತ್ತು ಅತ್ಯಂತ ಸಹಜವಾಗಿದೆ. ಆದರೆ ಅನೇಕ ವಾದ್ಯಗಳು ನಮಗೆ ವಿಜ್ಞಾನದ ಕೊಡುಗೆಯು ಆಗಿದೆ. ವಯೊಲಿನ್. ಹೇಗೆ ನಮ್ಮ ಭಾವನೆಗಳನ್ನು ಹೇಳುತ್ತದೆ ಎಂದು ಅಡರ್ನೊ ವಿವರಿಸುತ್ತಾನೆ. ಒಂದು ಅಂಶವು ಇಲ್ಲಿ ಮುಖ್ಯ: ಆಧುನಿಕ ವಾದ್ಯಗಳು ಹೇಗೆ ಆಧುನಿಕ ಕೈಗಾರಿಕೆ ಮತ್ತು ಅದರ ಉತ್ಪನ್ನಗಳನ್ನು ಬಳಸುತ್ತದೆ ಎಂದು ನೋಡಬೇಕು. ವಾದ್ಯ ಮತ್ತು ಅದರ ಪರಿಕರಗಳು ಹಾಗೂ ಅದರ ಬಳಕೆಯು ಹೇಗೆ ಇದೆ ಎಂದರೆ ಅದರ ಪ್ರಯೋಗವು ಅತ್ಯಂತ ಹೆಚ್ಚು ಇಷ್ಟವಾಗುವುದು ಮಧ್ಯಮವರ್ಗಕ್ಕೆ. ಭೌತಿಕ ವಸ್ತು ಮತ್ತು ಅದರ ಪರಿಣಾಮವನ್ನು ಈ ದೃಷ್ಟಿಯಿಂದ ನಾವು ಅಲೋಚನೆ ಮಾಡಬೇಕಾದ ಅಗತ್ಯವಾಗಿದೆ, ಸಂಗೀತವನ್ನು ನಾವು ಕೇಳುತ್ತೇವೆ. ಅದನ್ನು ನಾವು ನೋಡುವುದಿಲ್ಲ. ಕಿವಿಗೆ ಇಂಪು ಎನ್ನುವುದು ಒಂದು ವರ್ಗದ ಭಾವನೆಗಳನ್ನು ಸೂಚಿಸುತ್ತದೆ. ಸಂಗೀತವು ನಮಗೆ ಹೆಚ್ಚು ಸಂತೋಷವನ್ನು ಮತ್ತು ಮನೋಸೆಳೆತವನ್ನು ಉಂಟು ಮಾಡುತ್ತದೆಯೋ ಆಗ ಅದನ್ನು ನಿಜವಾಗಿಯೂ ಸರಿಯಾಗಿ ವಿಶ್ಲೇಷಣೆ ಮಾಡುವುದು ಸಾಧ್ಯವಿಲ್ಲ. ಸಂಗೀತಕ್ಕೆ ಒಂದು ಪರಂಪರೆಯು ಇದೆ. ಅದಕ್ಕೆ ಒಂದು ನಿಯಮವು ಇದೆ.

ಅದಕ್ಕೆ ವಿವಿಧ ಸಾಧ್ಯತೆಯು ಇದೆ. ಅದನ್ನು ನಾವು ಅಲ್ಲಗಳೆಯಲು ಆಗುವುದು ಇಲ್ಲ. ಸಂಗೀತವನ್ನು ಕೇಳುವುದು ಅಂದರೆ ವ್ಯಕ್ತಿಯು ಅದನ್ನು ಅನುಭವಿಸುವುದು. ಇದರಲ್ಲಿ ವ್ಯಕ್ತಿ ಎನ್ನುವುದು ಪ್ರತ್ಯೇಕತೆಯನ್ನು ಹೇಳುತ್ತದೆ. ಸಂಗೀತದಲ್ಲಿ ಕೇಳುಗ, ಸಂಗೀತದ ಪರಿಕರ, ಸಂಗೀತದ ಅನನ್ಯತೆ ಹೀಗೆ ಅನೇಕ ಸಂಗತಿಗಳು ಇರುತ್ತವೆ. ಆದ್ದರಿಂದ ಸನ್ನಿವೇಶ ಮತ್ತು ಅನ್ವೇಷಣೆಗೆ ವಿವಿಧ ಆಯಾಮವು ಇರುತ್ತದೆ. ಅದರ ಜೊತೆಗೆ ಒಂದು ಚರಿತ್ರೆಯು ಇರುತ್ತದೆ. ಚರಿತ್ರೆಯಲ್ಲಿ ಲೇಖಕರು ಮತ್ತು ಕಲಾವಿದರು ಇರುತ್ತಾರೆ.  ಲೇಖಕರು ಮತ್ತು ಅವರ ಆಲೋಚನೆಗೆ ಹಾಗೂ ಲೋಕದ ಗ್ರಹಿಕೆಗೆ ಈ ಕಾರಣದಿಂದ ಅತ್ಯಂತ ಮಹತ್ವವವು ಇದೆ. ಕುಮಾರವ್ಯಾಸನು ಬರೆದ ಥರ ನಾವು ಈವತ್ತು ಯಾಕೆ ಬರೆಯಲು ಸಾಧ್ಯವಾಗುವುದಿಲ್ಲ ಎನ್ನುವುದಕ್ಕೆ ಇದೂ ಒಂದು ಕಾರಣವಾಗಿದೆ. ಹಾಗೆ ನೋಡಿದರೆ ನಿಜವಾಗಿಯೂ ಅತ್ಯಂತ ಮಹತ್ವದ ಪಾತ್ರವನ್ನು ಯಾವ ಸಾಹಿತ್ಯ ಪ್ರಕಾರವು ತುಂಬಿದೆ  ಎಂದು ಹೇಳುವುದು ಅತ್ಯಂತ ಕಷ್ಟ. ಪ್ರತಿಯೊಂದು ಸಾಹಿತ್ಯ ಪ್ರಕಾರಗಳು ತಮ್ಮದೇ ಆದ ಒಂದು ಅನನ್ಯತೆಯನ್ನು ಹೊಂದಿವೆ. ವಾಸ್ತವವಾಗಿ ಈವತ್ತು ನಾವು ಯಾವುದನ್ನು ಕಾವ್ಯ ಎಂದು ಹೇಳುತ್ತೇವೆಯೋ ಅದರ ಹಿಂದೆ ಬಹಳ ದೊಡ್ಡದಾದ ಒಂದು ಚರಿತ್ರೆಯು ಇದೆ. ಅದು ವಿಸ್ತಾರವಾಗುತ್ತಾ ಬಂದಿರುವುದೂ ಅಷ್ಟೇ ಸತ್ಯ. ಹಾಗೆ ನೋಡಿದರೆ ಸಾಹಿತ್ಯ ಮತ್ತು ಅದರ ಜೊತೆಗೆ ಇರುವ ತತ್ವಜ್ಞಾನವು ಅತ್ಯಂತ ಮುಖ್ಯ. ಸಾಹಿತ್ಯವು ನಿತ್ಯವೂ ಅನೇಕವನ್ನು ಹುಡುಕಿದೆ. ಅದರಲ್ಲಿ ಸತ್ಯದ ಪ್ರಶ್ನೆಯು ಬಂದಿದೆ. ನವೋದಯದ ಕಾಲದಲ್ಲಿ ಸಾಹಿತ್ಯ ವಿಮರ್ಶೆಯನ್ನು ವಿಮರ್ಶೆಯನ್ನು ಕೂಡಾ ಒಂದು ಹಂತದಲ್ಲಿ ರಸಯಾತ್ರೆ ಎಂದು ಭಾವಿಸಿದ್ದು ಈ ದೃಷ್ಟಿಯಿಂದ ಅತ್ಯಂತ ಮಹತ್ವದ್ದು. ಸಾಹಿತ್ಯ ವಿಮರ್ಶೆಯು ಅತ್ಯಂತ ಮಹತ್ವದ ಪ್ರಶ್ನೆಯನ್ನು ಎತ್ತುತ್ತದೆ. ಅದು ತಾತ್ವಿಕವಾಗಿದೆ. ನವೋದಯ ಕಾಲದಲ್ಲಿ ಮತ್ತೊಂದು ಪ್ರಶ್ನೆಯು ಬಂದುದು ನಿಜ. ಆಗ ಯಾವುದು ಸಾಹಿತ್ಯ, ಯಾವುದು ಲಲಿತ ಪ್ರಬಂಧ, ಯಾವುದು ವಿಮರ್ಶೆ ಮುಂತಾದ ಪ್ರಶ್ನೆಗಳು ಬಂದಿದ್ದವು. ಆದರೆ ಇವುಗಳು ನಮ್ಮ ವ್ಯಕ್ತಿತ್ವ ಮತ್ತು ಅದರ ಮುಂದುವರಿಕೆಯ ಭಾಗ ಎಂದು ಭಾವಿಸಿದ್ದರು. ಅದರ ಜೊತೆಗೆ ಅದನ್ನು ನಮ್ಮ ಅತ್ಯಂತ ಮುಖ್ಯವಾದ ಒಂದು ಅಭಿವ್ಯಕ್ತಿ ಎಂದು ಲೇಖಕರು ತಿಳಿದಿದ್ದರು. ಕುವೆಂಪುರವರ 'ಅಜ್ಜಯ್ಯನ ಅಭ್ಯಂಜನ,' ಗೊರೂರು ಅವರ 'ನಮ್ಮ ಎಮ್ಮೆಗೆ ಮಾತು ತಿಳಿಯುವುದೇ', ಬೇಂದ್ರೆಯವರ 'ಸಾಯೋಆಟ' ಮುಂತಾದವುಗಳು ಇದಕ್ಕೆ ಉದಾಹರಣೆಗಳಾಗಿವೆ. ಆದ್ದರಿಂದ ಅಭಿವ್ಯಕ್ತಿ ಮತ್ತು ಅದರ ಪ್ರಶ್ನೆಯು ನವೋದಯದಲ್ಲಿ ಭಿನ್ನವಾಗಿದೆ. ಆದರೆ ಆಗ ಅನೇಕ ಲಲಿತ ಪ್ರಬಂಧಗಳು ಬಂದಂತೆ ಅನಂತರ ಬಂದಿಲ್ಲ ಎನ್ನುವುದು ಗಮನಾರ್ಹ.

ಅಭಿವ್ಯಕ್ತಿ ಎನ್ನುವುದು ಯಾವುದೇ ಜೊತೆಗೆ ಸಹಯೋಗವನ್ನು ಪಡೆಯಲು ಸಾಧ್ಯವೋ ಅದನ್ನು ಆಗ ಲೇಖಕರು ಶೋಧಿಸಿದರು. ಅದು ಗದ್ಯ, ಅದು ನಾಟಕ ಮುಂತಾದ ಪ್ರಶ್ನೆಗಳು ಅಲ್ಲ ಎನ್ನುವುದು ಇಲ್ಲಿ ಅತ್ಯಂತ ಮುಖ್ಯ. ಆದ್ದರಿಂದ ಅನೇಕ ಲೇಖಕರು ಸುಂದರವಾದ ಎಲ್ಲಾ ಬರವಣಿಗೆಗಳು ಸಾಹಿತ್ಯದ ದೃಷ್ಟಿಯಿಂದ ಅತ್ಯಂತ ಮುಖ್ಯ. ಸುಂದರವಾದ ಬರಹ ಎನ್ನುವುದು ಏಕಮುಖವಾಗಿರಬಹುದು. ಆದರೆ ಆ ವಾದವು ಬಂದಿರುವುದು ನಿಜ. ಸುಂದರವಾದ ಬರಹ ಎನ್ನುವುದಕ್ಕೆ ಬೇರೆ ಆಯಾಮವು ಇದೆ. ಅದು ಸೌಂದರ್ಯ ಎನ್ನುವುದನ್ನು ಮಾತ್ರವೇ ಹೇಳುತ್ತದೆ. ಸಾಹಿತ್ಯದಲ್ಲಿ ಸುಂದರವಾದ್ದು ಎಂದರೆ ಅದರಲ್ಲಿ ಅತ್ಯಂತ ಸುಂದರವಾದ ಮತ್ತು ಕಿವಿಗೆ ಮತ್ತು ಮನಸ್ಸಿಗೆ ಆಹ್ಲಾದವನ್ನು ಉಂಟುಮಾಡುವಂಥದ್ದು ಎನ್ನುವ ಅರ್ಥವು ಬರುತ್ತದೆ. ಇದರ ಜೊತೆಗೆ ಮತ್ತೊಂದು ವಿಚಾರವು ಕೂಡಾ ಸಾಂಗತ್ಯವನ್ನು ಪಡೆದಿದೆ. ಅದನ್ನು ನಾವು ಕಲ್ಪನೆ ಎಂದು ಕರೆಯುತ್ತೇವೆ. ಸುಂದರವಾದ್ದು ಎಂದರೆ ಈ ಅರ್ಥದಲ್ಲಿ ಕಲ್ಪನೆಯಿಂದ ಕೂಡಿದ, ಹೃದ್ಯವಾದ ಶೈಲಿ ಎನ್ನುವುದು ಇಲ್ಲಿ ಭಾವಾರ್ಥ. ಹಾಗಿದ್ದರೆ ನಮ್ಮ ಮುಂದೆ ಇರುವ ಅತ್ಯಂತ ಮುಖ್ಯವಾದ ಪ್ರಶ್ನೆ ಎಂದರೆ ಅತ್ಯಂತ ಸುಂದರವಾಗಿ ನಾವು ಬರೆದಿರುವ ಸಾಹಿತ್ಯ ವಿಮರ್ಶೆಯೂ ಕಲಾತ್ಮಕವಾಗಿರುತ್ತದೆಯೇ? ಇದಕ್ಕೆ ಅತ್ಯಂತ ಸರಳವಾದ ಒಂದು ಉತ್ತರವನ್ನು ನಾವು ಕೊಡಲಾರೆವು. ಅತ್ಯಂತ ಸುಂದರವಾದ ಒಂದು ವರದಿ, ಒಂದು ಜಾಹೀರಾತು ಕೂಡಾ ನಮಗೆ ಒಂದು ಕಲಾಕೃತಿ ಎಂದು ಅನಿಸಬೇಕು. ಆದರೆ ಹಾಗೆ ಆಗುವುದಿಲ್ಲ. ಇಲ್ಲಿ ಅತ್ಯಂತ ಮುಖ್ಯವಾದ ಸಮಸ್ಯೆ ಎಂದರೆ ಸುಂದರ ಎನ್ನುವುದರ ಮೇಲೆ ಇಲ್ಲ. ಅದರ ಬದಲು ಅದರ ಆಶಯವು ಇಲ್ಲಿ ಹೆಚ್ಚು ಮುಖ್ಯವಾಗುತ್ತದೆ. ಬರಹವು ಒಂದು ಕಾಲಕ್ಕೆ ಅನ್ವಯವಾಗುತ್ತದೆ.

ಸಾಹಿತ್ಯದಲ್ಲಿ ಕಲ್ಪನೆ ಮತ್ತು ಅದರ ಸಾಧ್ಯತೆಗಳು ಯಾವತ್ತೂ ಬೇರೆಯಾಗುತ್ತವೆ. ನಾವು ಅದನ್ನು ವರ್ಗೀಕರಣ ಮಾಡಲು ಸಾಧ್ಯವಿದೆ. ಸಾಹಿತ್ಯ ವಿಮರ್ಶೆಯು ಕಲ್ಪನೆಯೇ ಅಥವಾ ಅದು ವಿಜ್ಞಾನವೇ ಎಂದು ಅನೇಕರಿಗೆ ಅನುಮಾನವು ಬಂದಿರುವುದು ಸತ್ಯ. ಆದರೆ ಕಾವ್ಯದ ಬದಲಿಗೆ ವಿಮರ್ಶೆಯು ಇಲ್ಲ. ಅದರ ಕೆಲಸ ಮತ್ತು ಅದರ ಸ್ವರೂಪವು ಭಿನ್ನ. ಒಂದು ಮಾತನ್ನು ಇಲ್ಲಿ ಹೇಳಬಹುದು: ವಿಜ್ಞಾನವು ತನ್ನದೇ ಆದ ಒಂದು ಕಾರ್ಯವಿಧಾನವನ್ನು ಹೊಂದಿರುತ್ತದೆ. ಕವಿತೆಯು ವಿಮರ್ಶೆಯಾಗಿ ಪರಿವರ್ತನೆಯಾಗಿಲ್ಲ. ಯಾವಾಗ ವಿಜ್ಞಾನವು ತನ್ನ ಪ್ರತ್ಯೇಕವಾದ ಒಂದು ಅಸ್ತಿತ್ವವನ್ನು ಹೊಂದಿತೋ ಆಗ ಅದರ ಅರ್ಥವೂ ಬೇರೆಯಾಯಿತು. ಹಾಗೆ ನೋಡಿದರೆ ವಿಜ್ಞಾನವು ತನ್ನ ಹಿಂದಿನ ಸಂಶೋಧನೆಯನ್ನು ನಿರಾಕರಿಸುವುದಿಲ್ಲ. ಅದು ತನ್ನ ಹಿಂದೆ ಇದ್ದ ಚರಿತ್ರೆಯನ್ನು

ಮರೆಯುವುದೂ ಇಲ್ಲ. ಅದು ಮತ್ತೊಂದು ರೂಪದಲ್ಲಿ ಮುಂದುವರಿಯುತ್ತದೆ. ಕಲೆಯು ಹೇಳುವುದು ನಮ್ಮ ಚೈತನ್ಯವನ್ನು. ಅದು ನಮ್ಮ ಶಕ್ತಿಯೂ ಆಗಿರುತ್ತದೆ. ಎಲ್ಲಿಯ ವರೆಗೆ ಹೊಸದಾದ ಅನ್ವೇಷಣೆಯು ನಡೆಯುವುದಿಲ್ಲವೋ ಅಲ್ಲಿಯ ವರೆಗೆ ವಿಜ್ಞಾನವು ತನ್ನ ಹಿಂದೆ ಇದ್ದ ಸೂತ್ರವನ್ನು ಅವಲಂಬಿಸುತ್ತದೆ.

ವಿಜ್ಞಾನ ಎನ್ನುವುದೂ ಒಂದು ಬಗೆಯಲ್ಲಿ ಅಭಿವ್ಯಕ್ತಿಯೇ ಹೌದು. ಅದರಲ್ಲಿ ಎರಡು ಮಾತಿಲ್ಲ. ಆದರೆ ಅದರ ಅಭಿವ್ಯಕ್ತಿ ಮತ್ತು ಅದರ ಶಕ್ತಿಯು ಬೇರೆಯಾಗಿರುತ್ತದೆ. ಸಾಹಿತ್ಯ ಮತ್ತು ಅದರ ಬರವಣಿಗೆ ಎನ್ನುವುದು ಒಂದು ವಿಧಾನವನ್ನು ಅವಲಂಬಿಸುತ್ತದೆ. ವಿಜ್ಞಾನದ ಬರಹಗಳಲ್ಲಿ ಗುರಿಯು ಅತ್ಯಂತ ಮುಖ್ಯ. ಈವತ್ತು ವಿಜ್ಞಾನವನ್ನು ಅತ್ಯಂತ ಉನ್ನತವಾದ ಒಂದು ಶಕ್ತಿ ಎಂದು ಹೇಳುತ್ತೇವೆ. ಚರಿತ್ರೆ ಮತ್ತು ಶುದ್ಧವಾದ ಒಂದು ವಿಜ್ಞಾನ ಹಾಗೂ ಸಾಹಿತ್ಯ ಎನ್ನುವುದರ ನಡುವೆ ಈವತ್ತು ಬೇರೆ ಬೇರೆ ಜಗಳಗಳು ಇರುತ್ತವೆ. ಹತ್ತೊಂಬತ್ತನೆಯ ಶತಮಾನದ ಬಳಿಕ ವಿಜ್ಞಾನವು ಮುಂದೆ ಬಂದದ್ದು ಆಶ್ಚರ್ಯವೇನಲ್ಲ. ಯಾವುದು ನಮ್ಮ ಭೌತಿಕವಾದ ಒಂದು ಪ್ರಪಂಚವು ಆಗಿದೆಯೋ ಅದನ್ನು ವಿಜ್ಞಾನವಾದಿಗಳು ತಮ್ಮ ವೈಜ್ಞಾನಿಕವಾದ ಚಿಂತನೆಯಿಂದ ವಿವರಿಸಬಹುದು ಎಂದು ಭಾವಿಸಿದರು. ಭೌತಿಕವಾದ ಈ ಜಗತ್ತನ್ನು ವಿವರಿಸಲು ನಮಗೆ ವಿಜ್ಞಾನವು ಒಂದು ದಾರಿ ಎಂದು ಅನೇಕರು ಅದೇ ದಾರಿಯನ್ನು ಆಯ್ಕೆ ಮಾಡಿದರು. ಆದರೆ ಚರಿತ್ರೆ ಮತ್ತು ಅದರ ಅನ್ವಯವನ್ನು ನಾವು ಕಾಣುವುದು ಹೇಗೆ ಎನ್ನುವುದು ಮುಖ್ಯವಾದ ಒಂದು ಪ್ರಶ್ನೆ. ಆದ್ದರಿಂದಲೇ ಚರಿತ್ರೆ ಮತ್ತು ಅದರ ಅನ್ವಯದ ಪ್ರಶ್ನೆಯು ಬೇರೆಯಾಯಿತು. ಯಾವುದು ಆಗಿದೆಯೋ ಅದನ್ನು ನಾವು ನಿರೂಪಣೆ ಮಾಡುತ್ತೇವೆ. ಈ ನಿರೂಪಣೆಯು ಹೇಗೆ ಇರುತ್ತದೆ ಎಂದು ಮೊದಲು ನಾವು ನಿರ್ಧಾರ ಮಾಡಲು ಸಾಧ್ಯವಿಲ್ಲ. ಚರಿತ್ರೆ ಮತ್ತು ಅದರ ನಿರೂಪಣೆಯು ಹೀಗೆ ಬೇರೆ ಬೇರೆ ಥರ ಇರುತ್ತದೆ. ಅದರಲ್ಲಿ ನಾವು ಯಾವುದರ ವಿವರಣೆಯನ್ನು ಕೊಡುತ್ತೇವೆಯೋ ಅಥವಾ ಹಿಂದೆ ಯಾವುದು ಆಗಿದೆಯೋ ಅದನ್ನು ನಾವು ಮುಂದುವರಿಸುತ್ತೇವೆಯೋ ಎನ್ನುವುದು ಬೇರೆ ಪ್ರಶ್ನೆ. ಚರಿತ್ರೆ ಮತ್ತು ಅದರ ನಿರೂಪಣೆಯು ನಮಗೆ ಬೇಕಾದ ರೀತಿಯಲ್ಲಿಯೂ ಇರಲು ಸಾಧ್ಯ. ನಮಗೆ ಯಾವುದು ಪ್ರಮೇಯವಾಗಿದೆಯೋ ಅದನ್ನು ಇಟ್ಟುಕೊಂಡು ಚರಿತ್ರೆಯನ್ನು ಹೇಳುತ್ತೇವೆ. ಚರಿತ್ರೆ ಮತ್ತು ಅದರ ಸಂಕಥನಗಳು ನಮ್ಮ ಜ್ಞಾನವನ್ನು ಆಧರಿಸಿಕೊಂಡು ರೂಪುಗೊಳ್ಳುತ್ತದೆ. ಆದರೆ ಚರಿತ್ರೆಗೆ ಅದರದೇ ಆದ ಒಂದು ವಿಶ್ವಾತ್ಮಕವಾದ ಚಹರೆಯು ಇರುತ್ತದೆ ಎನ್ನುವುದು ಸತ್ಯ. ಅದಕ್ಕೆ ಅದರದೇ ಆದ ಒಂದು ನಿಯಮವೂ ಇದೆ. ಇದನ್ನೇ ಮಾರ್ಕ್ಸವಾದವು ಬಾಹ್ಯ ಮತ್ತು ಆಂತರಿಕ ರಚನೆಗಳು ಮತ್ತು

ಅದರ ಸಂಬಂಧಗಳು ಎಂದು ಹೇಳುತ್ತದೆ. ಉತ್ಪಾದನೆ ಮತ್ತು ಸಮಾಜದ ನಡುವೆ ಇರುವ ವಿವರಣೆಗಳನ್ನು ಅದು ನಿರ್ದಿಷ್ಟ ಎಂದು ಹೇಳುತ್ತದೆ. ನಮಗೆ ಯಾವುದು ದಕ್ಕುತ್ತದೆಯೋ ಅದನ್ನು ಮಾತ್ರವೇ ನಾವು ನಿರೂಪಣೆ ಮಾಡುತ್ತೇವೆ. ಅದು ಸಂಯೋಜನೆ. ಎರಡನೆಯದಾಗಿ ಚರಿತ್ರೆಯು ಆಗಿ ಹೋಗಿರುವುದರಿಂದ ಅದಕ್ಕೆ ಒಂದು ರೂಪವೂ ಇದೆ. ಕುವೆಂಪು ಬರಹಗಳನ್ನು ನಾವು 'ಆಗಿರುವ ಬರಹಗಳು' ಎಂದು ಹೇಳಲು ಸಾಧ್ಯವಿದೆ. ಮೊದಲಿನಿಂದಲೂ ನಾವು ಚರಿತ್ರೆಯನ್ನು ಹೇಳುವುದು ಅಂದರೆ ಅದರ ದಾಖಲೆಗಳನ್ನು ಇಟ್ಟುಕೊಂಡು ನಿರೂಪಣೆ ಮಾಡುವುದು ಎಂದೇ ಹೇಳುತ್ತೇವೆ. ಚರಿತ್ರೆಯು ಆಗಿದೆ ಎಂದು ಹೇಳಲು ನಮಗೆ ಇರುವುದು ವಿವಿಧ ದಾಖಲೆಗಳು. ಆದರೆ ಇಲ್ಲಿಯೇ ಸಮಸ್ಯೆಯು ಇರುತ್ತದೆ. ನಾವು ಈಗ ಹತ್ತನೆಯ ಶತಮಾನದ ಚರಿತ್ರೆಯನ್ನು ಹೇಳುವುದು ಹೇಗೆ ಎನ್ನುವುದು ನಮ್ಮ ಮುಂದೆ ಇರುವ ಅತ್ಯಂತ ಮಹತ್ವದ ಪ್ರಶ್ನೆ. ಅದನ್ನು ಸಾಹಿತ್ಯದ ವಿದ್ಯಾರ್ಥಿಗಳು ಪಂಪನನ್ನು ನೋಡಿಕೊಂಡು ಚರಿತ್ರೆಯನ್ನು ಹೇಳಬಹುದು.

– 2 –

ನವೋದಯ ಕಾಲದ ಬರಹಗಳನ್ನು ನೋಡಿದರೆ ನಮಗೆ ಬರಹ ಮತ್ತು ಅದರ ಸಾಧ್ಯತೆಯು ಬೇರೆಯಾಗಿತ್ತು. ಎನ್ನುವ ತಿಳುವಳಿಕೆ ಬರುತ್ತದೆ. ಅದರಲ್ಲಿ ಭಾವನೆಗಳು ಮಾತ್ರವೇ ನಾವು ಮುಖ್ಯ ಎಂದು ಹೇಳಿದರೂ ಅಂತಿಮವಾಗಿ ಅದು ಯಾರ ಭಾವನೆಯನ್ನು ಹೇಳುತ್ತದೆ ಎನ್ನುವ ಪ್ರಶ್ನೆಯು ಇದೆ. ಒಂದು ವರ್ಗದ ಪ್ರಾತಿನಿಧಿಕವಾದ ರೂಪವನ್ನು ಇದು ಹೇಳುತ್ತದೆ. ಅದರ ಜೊತೆಗೆ ಅದು ಮಧ್ಯಮವರ್ಗ ಮತ್ತು ಅದರ ಮೌಲ್ಯಗಳನ್ನು ನಿರೂಪಣೆ ಮಾಡುತ್ತದೆ. ನವೋದಯ ಮತ್ತು ಅದರ ದೃಷ್ಟಿಕೋನದಲ್ಲಿ ನಮಗೆ ಮನುಷ್ಯ ಮತ್ತು ಅವನ ಕ್ರಿಯಾತ್ಮಕವಾದ ಶಕ್ತಿಯೂ ಕಾಣುತ್ತದೆ. ಮನುಷ್ಯ ಮತ್ತು ಅವನ ಘನತೆಯನ್ನು ಹೇಳುವುದು ಇಲ್ಲಿ ಅತ್ಯಂತ ಮುಖ್ಯ. ಮತ್ತೊಂದು ಅಂಶವೆಂದರೆ ನವೋದಯವು ನಮಗೆ ನಿಸರ್ಗ ಮತ್ತು ಅದರ ಪ್ರಾತಿನಿಧಿಕವಾದ ರೂಪವನ್ನು ಬದಲು ಮಾಡಿಕೊಂಡು ಹೇಳುತ್ತದೆ. ಆದ್ದರಿಂದ ನಿಸರ್ಗವನ್ನು ಅದು ನೋಡುವ ಕ್ರಮವು ಬೇರೆಯಾಗುತ್ತದೆ. ಅದರ ಜೊತೆಗೆ ಅದು ನಮಗೆ ಹೊಸದಾದ ಜ್ಞಾನ ಮತ್ತು ಅದರ ನಿರೂಪಣೆಯನ್ನು ಮಾಡುತ್ತದೆ. ಭಾವಗೀತೆಯು ಲಯವನ್ನು ಅತ್ಯಂತ ಮುಖ್ಯ ಎಂದು ಹೇಳುತ್ತದೆ. ಯಾವಾಗ ಲಯವು ಮುಖ್ಯವಾಗುತ್ತದೆಯೋ ಆಗ ಅದರ ಅರ್ಥವು ಬೇರೆಯಾಗುತ್ತದೆ. ಅದರಲ್ಲಿ ಗಾಯನದ ಗುಣವು ಬರುತ್ತದೆ. ಗಾಯನವು ಬಂದರೆ ಅದಕ್ಕೆ ನಾವು ವಾದ್ಯ ಮತ್ತು ಅದರ ಪರಿಕರವನ್ನು ಬಳಸುವ

ಸಾಧ್ಯತೆಯು ಹೆಚ್ಚು ಇರುತ್ತದೆ. ಒಂದು ಅತ್ಯಂತ ವಿಶಿಷ್ಟವಾದ ಸಂಯೋಜನೆಯನ್ನು ನಾವು ರೊಮಾಂಟಿಕ್ ಕಾವ್ಯದಲ್ಲಿ ನೋಡಬಹುದು. ಅದರ ಲಯವು ಸಂಗೀತಕ್ಕೆ ಪೂರಕವಾದ್ದರಿಂದ ಅದರ ಅರ್ಥವು ಬೇರೆಯಾಗುತ್ತದೆ. ಸಂಗೀತ ಮತ್ತು ಕಾವ್ಯ ಎನ್ನುವುದು ಹೇಗೆ ಜೊತೆಯಲ್ಲಿ ಇರುತ್ತದೆ ಎನ್ನುವುದಕ್ಕೆ ಇದು ಒಂದು ದೃಷ್ಟಾಂತವಾಗಿದೆ. ಇಲ್ಲಿ ಎದ್ದು ಕಾಣುವುದು ಇದೇ ಬಗೆಯ ಸಹಯೋಗ. ಕಾವ್ಯದಲ್ಲಿ ಬಳಸುವ ಧ್ವನಿ ಮತ್ತು ಅದರ ನಾದಕ್ಕೆ ವಿಶಿಷ್ಟತೆಯು ಇರುತ್ತದೆ. ಅದನ್ನು ನಾವು ನಿಷೇಧಿತವಾದ ಅರ್ಥದಲ್ಲಿ ಹೇಳಬೇಕಾಗಿಲ್ಲ. ಹಾಗೆ ನೋಡಿದರೆ ಜನಪ್ರಿಯ ಸಂಗೀತ ಮತ್ತು ಶಾಸ್ತ್ರೀಯ ಸಂಗೀತಗಳು ನಿರ್ದಿಷ್ಟವಾದ ಧ್ವನಿಯನ್ನು ಹೊರಡಿಸುವುದು ಅದನ್ನು ನುಡಿಸುವವನ ಮೂಲಕ. ಆದ್ದರಿಂದ ಇದರಲ್ಲಿ ನುಡಿಸುವವನು ವಿಶಿಷ್ಟವಾದ ಪಾತ್ರವನ್ನು ವಹಿಸುತ್ತಾನೆ. ವಾದ್ಯ ಪರಿಕರ ಮತ್ತು ಅದರ ಸ್ವರೂಪಕ್ಕೂ ಅದನ್ನು ನುಡಿಸುವವನ ಶಕ್ತಿಗೂ ಒಂದು ಸಂಬಂಧವು ಇದೆ. ಆದ್ದರಿಂದಲೇ ಕಲಾತ್ಮಕವಾದ ತಂತ್ರಜ್ಞಾನವು ಅತ್ಯಂತ ಮುಂಚೂಣಿಗೆ ಬಂದಿದೆ. ಯಾವುದು ನಮ್ಮ ಸಂವೇದನೆಗೆ ಮುಟ್ಟುತ್ತದೆಯೋ ಅದನ್ನು ನಾವು ಅತ್ಯಂತ ಸುಂದರವಾದ ಕಾವ್ಯ ಎಂದು ಹೇಳಿದೆವು. ಮತ್ತೊಂದು ವಿಚಾರವಿದೆ ಬೇಂದ್ರೆಯವರ ಕಾವ್ಯ ನಮಗೆ ಮುಟ್ಟುತ್ತದೆ. ಅದರಲ್ಲಿ ಜೀವನ ಪ್ರೀತಿಯು ಇದೆ. ಹಾಗೆಯೇ ಅದು ಆಕರ್ಶಕವಾಗಿದೆ. ಅವರ ಕಾವ್ಯವನ್ನು ಕುರೂಪಿಯಾದ ಕಾವ್ಯ ಎಂದು ಹೇಳಲು ಬರುವುದೇ ಇಲ್ಲ. ಭಾಷೆ ಮತ್ತು ಅದರ ಸ್ವರೂಪವನ್ನು ನಾವು ಕಾವ್ಯದಲ್ಲಿ ಮಾತ್ರವೇ ಕಾಣುತ್ತೇವೆ ಎಂದು ಅರ್ಥವಲ್ಲ. ಪ್ರಜಾವಾಣಿಯು ಸುದ್ದಿಯನ್ನು ಕೊಡುವುದು ಭಾಷೆಯಲ್ಲಿ. ಜಾಹೀರಾತು ತನ್ನ ಉತ್ಪಾದನೆಗಳನ್ನು ಕುರಿತು ಹೇಳುವುದೂ ಭಾಷೆಯಲ್ಲಿಯೇ. ಜಾಹೀರಾತು ಭಾಷೆಯು ಹೆಚ್ಚು ಖಚಿತವಾಗಿರುತ್ತದೆ. ಅದರ ಜೊತೆಗೆ ಅದು ನಮಗೆ ಆಕರ್ಶಣೆಯನ್ನು ಹುಟ್ಟಿಸುತ್ತದೆ. ಆದರೆ ನವ್ಯ ಕವಿತೆಗಳು ಈ ಮಾದರಿಯವು ಅಲ್ಲ. ಅದರಲ್ಲಿ ಭಾವಗೀತಾತ್ಮಕವಾದ ಲಯವು ಕಾಣುವುದಿಲ್ಲ. ಅದು ಭಾವ ಕೇಂದ್ರವನ್ನು ಹೇಳಿಕೊಳ್ಳುವುದೂ ಇಲ್ಲ. ಅದರ ಸಂಕಥನ ಮಾದರಿಯು ಬೇರೆ. ಈ ದೃಷ್ಟಿಯಿಂದ ಅಡಿಗರ ದೆಹಲಿಯಲ್ಲಿ ಕವಿತೆಯನ್ನು ನಾವು ಇಲ್ಲಿ ಗಮನಿಸಬಹುದು. ಅದು ಹೊಸದಾದ ರೂಪವಾದ್ದರಿಂದ ಅದನ್ನು ಹೇಗೆ ಗ್ರಹಿಸಬೇಕು ಎಂದು ಹೇಳಲು ಸುಲಭವಾಗಿರಲಿಲ್ಲ. ಅಡಿಗರ ಕಾವ್ಯವು ನಮಗೆ ಅತ್ಯಂತ ಸುರಕ್ಷಿತವಾದ ಜನರು ಮತ್ತು ಅವರ ಭಾವನೆಗಳನ್ನು ಹೇಳುವುದಿಲ್ಲ. ಅದರಲ್ಲಿ ಬರುವ ಕೋಪವೂ ಅತ್ಯಂತ ಅರ್ಥ ಪೂರ್ಣ. ಅದು ಸ್ವಂತಿಕೆಯನ್ನು ಹೇಳುತ್ತದೆ. ವ್ಯಕ್ತಿಯು ಸ್ವತಂತ್ರನಾಗಿ ಹೇಗೆ ಯೋಚನೆಯನ್ನು ಮಾಡಬಲ್ಲ ಎನ್ನುವುದನ್ನು ಅವರ ಕವಿತೆಗಳು ಹೇಳುತ್ತವೆ. ಬಹುತೇಕ ನವ್ಯ

ಕಪಿತೆಗಳಲ್ಲಿ ನೋವು ಮತ್ತು ಸಂಕಟಗಳು ಇವೆ. ಸಾಮಾಜಿಕ ಜೀವನ ಮತ್ತು ಅದರ ಛಿದ್ರೀಕರಣವೂ ನವ್ಯದಲ್ಲಿ ಹೆಚ್ಚು ಮುಖ್ಯವಾಗುತ್ತವೆ. ವ್ಯಕ್ತಿ, ವ್ಯಕ್ತಿತ್ವ, ಅವನ ಆಲೋಚನೆ ಹಾಗೂ ಅನುಭವ ಎನ್ನುವುದು ನವ್ಯದಲ್ಲಿ ಅತ್ಯಂತ ಮುಖ್ಯ. ಆದರೆ ಇಲ್ಲಿ ನಮಗೆ ಮತ್ತೊಂದು ಮಹತ್ವದ ಪ್ರಶ್ನೆಯು ಬರುತ್ತದೆ. ಕಾವ್ಯಕ್ಕೆ ಮತ್ತು ವ್ಯಕ್ತಿಗೆ ಇರುವ ಸಂಬಂಧವನ್ನು ನಾವು ಮರೆಯಬಾರದು. ಕಾರಂತರು ನಮಗೆ ಕೊಟ್ಟ ಕಾದಂಬರಿ ಮತ್ತು ಗಿರಿಯವರು ಕೊಟ್ಟ ಕಾದಂಬರಿಗಳಿಗೆ ತುಂಬಾ ವ್ಯತ್ಯಾಸವಿದೆ. ಈ ವ್ಯತ್ಯಾಸವು ಕಾಲ ಮತ್ತು ಅವಕಾಶದಿಂದ ಬಂದಿದೆ. ನವ್ಯ ಕಾದಂಬರಿಕಾರರು ವ್ಯಕ್ತಿ ಮತ್ತು ಸಮಾಜವನ್ನು ನೋಡುವ ಕ್ರಮವು ಬೇರೆಯಾಗಿದೆ. ಮಧ್ಯಮವರ್ಗ ಮತ್ತು ಅದರ ಮನೋಸ್ಥಿತಿಯನ್ನು ನವ್ಯಕಾದಂಬರಿಗಳು ಹೇಳುತ್ತವೆ. ನವ್ಯರು ಬರೆಯುವಾಗ ಸನ್ನಿವೇಶವು ಬೇರೆಯಾಗಿತ್ತು. ವ್ಯಕ್ತಿ ಮತ್ತು ಅವನ ಅನುಭವದ ಪ್ರಪಂಚವೂ ಭಿನ್ನವಾಗಿತ್ತು. ವ್ಯಕ್ತಿ ಮತ್ತು ಸಮಾಜದ ನಡುವೆ ಇರುವ ವ್ಯತ್ಯಾಸವನ್ನು ಇದು ಹೇಳಿದ್ದು ಸ್ಪಷ್ಟ. ಯಾವ ಕಾದಂಬರಿಯಲ್ಲಿ ವ್ಯಕ್ತಿ ಮತ್ತು ಸಮಾಜದ ನಡುವೆ ಇರುವ ಸಂಬಂಧವು ಅತ್ಯಂತ ಸಂಕೀರ್ಣವಾಗಿರುತ್ತದೆ. ವ್ಯಕ್ತಿ ಮತ್ತು ಸಮಾಜವನ್ನು ಕಾದಂಬರಿಗಳು ಒಂದು ಥರ ನಿರೂಪಣೆಯನ್ನು ಮಾಡಬಹುದು. ಅವಕ್ಕೆ ಒಂದು ರಚನೆಯು ಇರುತ್ತದೆ. ಕಾದಂಬರಿಯ ರಚನೆಗೆ ಅನೇಕ ಬಿಡಿಯಾದ ಅಂಶಗಳೂ ಇರುತ್ತವೆ. ಶಿಕಾರಿ ಕಾದಂಬರಿಯನ್ನು ನೆನಪು ಮಾಡಬೇಕಾಗುತ್ತದೆ. ಆಧುನಿಕ ಕಾದಂಬರಿಗಳು ಹೇಗೆ ಇವೆ ಎನ್ನುವುದಕ್ಕೆ ಈ ಕಾದಂಬರಿಯು ನಮಗೆ ಒಂದು ದೃಷ್ಟಾಂತವಾಗಿದೆ. ಇಡೀ ಕಾದಂಬರಿಯು ನಮಗೆ ಹಳ್ಳಿ ಮತ್ತು ನಗರಗಳ ಮಧ್ಯೆ ಇರುವ ವೈರುಧ್ಯಗಳನ್ನು ಈ ಕಾದಂಬರಿಯು ನಮಗೆ ತಿಳಿಸುತ್ತದೆ. ಆಧುನಿಕ ಶಕ್ತಿ ಮತ್ತು ಅದರ ನಿಯಂತ್ರಣಗಳು ಬೇರೆ ಬೇರೆ ಥರ ಇರುತ್ತದೆ. ಹಾಗೆಂದು ಅವುಗಳು ಸಂವಿಧಾನ ಬದ್ಧವಾಗಿ ಇರುತ್ತದೆ ಎಂದು ಹೇಳಲು ಬರುವುದೂ ಇಲ್ಲ. ಸಮಾಜ ಮತ್ತು ಅದರ ವಾಸ್ತವವು ಬೇರೆಯಾಗುತ್ತದೆ. ಹಿಂಸೆ ಮತ್ತು ಅದರ ರೂಪಗಳೂ ಭಿನ್ನವಾಗುತ್ತವೆ. ಸಮಾಜದಲ್ಲಿ ಒಂದು ಹೊಸದಾದ ಪದ್ಧತಿಯು ಬಂದಿದೆ. ಅದನ್ನು ವ್ಯಕ್ತಿಯು ಎದುರಿಸಬೇಕಾಗಿದೆ. ಎನ್ನುವುದರ ಸೂಚನೆಯಿದು. ನಾಗಪ್ಪನು ಇಂಥ ಸಂಕೀರ್ಣವಾದ ಒಂದು ಜಗತ್ತನ್ನು ಹೇಳುತ್ತಿದ್ದಾನೆ. ಒಂದು ಹೊಸದಾದ ಪರಿಸರವು ಆಗಿದೆಯೋ ಅದನ್ನು ಮನುಷ್ಯನೂ ಬೇರೆ ಥರ ಎದುರಿಸಬೇಕಾಗುತ್ತದೆ. ಒಂದು ಹೊಸದಾದ ಪದ್ಧತಿಯು ಹೇಗೆ ಬರುತ್ತದೆ ಎನ್ನುವುದನ್ನು ಕಾರಂತರೂ ಹೇಳಿದ್ದಾರೆ. ಅವರಲ್ಲಿ ವ್ಯಕ್ತಿ ಮತ್ತು ಸಮಾಜದ ನಡುವೆ ಉಂಟಾಗುವ ಸಂಬಂಧ ಮತ್ತು ಸಂಘರ್ಷಗಳಿಗೆ ವಿವಿಧ ಆಯಾಮಗಳೂ ಇವೆ. ಅದರ ಜೊತೆಗೆ ಈವತ್ತು ಕೈಗಾರಿಕೆಗಳು ನಮಗೆ ಹೊಸದಾದ ಅನುಭವವನ್ನು

ಹೇಳುತ್ತಿವೆ ನಗರಗಳು ಮತ್ತು ಅದರ ಜೊತೆಗೆ ವ್ಯಕ್ತಿ ಸಂಬಂಧಗಳು ಹೇಗೆ ಇವೆ ಎನ್ನುವುದನ್ನು ನಮಗೆ ಅರ್ಥಮಾಡಿಕೊಳ್ಳಲು ಭಿನ್ನವಾದ ಮೂಲಗಳೂ ಇವೆ. ಆದರೆ ಅದನ್ನು ಕಥನಗಳು ಹೇಳಿದ ಕ್ರಮಗಳು ಭಿನ್ನವಾಗಿವೆ. ಹಾಗೆ ನೋಡಿದರೆ ಆಧುನಿಕ ಕೈಗಾರಿಕೆಗಳು ಹಳೆಯ ಅನೇಕ ಮಾದರಿಗಳನ್ನು ಬದಲಿಸಿವೆ. ಇದರಲ್ಲಿ ಸಂಗೀತದ ಪರಿಕರಗಳೂ ಸೇರಿವೆ ಎಂದು ಅಡರ್ನೊ ಹೇಳುತ್ತಾನೆ. ಆದರೆ ಒಂದು ವಿಚಾರವು ನಮಗೆ ಸತ್ಯವಾಗಿದೆ. ಅದರಲ್ಲಿ ಕಾದಂಬರಿ ಪ್ರಕಾರವು ಹುಟ್ಟಿದ್ದಕ್ಕೂ ಆಧುನಿಕ ಜೀವನದ ಪದ್ಧತಿಗೂ, ವಸಾಹತು ಶಿಕ್ಷಣ ಪದ್ಧತಿಗೂ ಒಂದು ಸಂಬಂಧವು ಇದೆ. ಆದರೆ ಆಧುನಿಕ ಕಾದಂಬರಿಗಳು ಮನುಷ್ಯ ಮತ್ತು ಅವನ ಮನೋಸ್ಥಿತಿಯನ್ನು ಹೇಳುತ್ತವೆ. ಒಂದು ಅರ್ಥದಲ್ಲಿ ಅದು ಹೇಳುವ ಅನೇಕ ವಿವರಗಳು ನಮಗೆ ತಟ್ಟುತ್ತವೆ. ಕಾದಂಬರಿ ಮತ್ತು ಅದರ ಸಿದ್ಧಾಂತ ಎನ್ನುವುದು ನಮಗೆ ಆಧುನಿಕ ಯುಗದ ಒಂದು ಮಹತ್ವದ ಕೊಡುಗೆ ಎನ್ನುವುದರಲ್ಲಿ ಎರಡು ಮಾತಿಲ್ಲ. ಆದರೆ ಇಲ್ಲಿ ಇನ್ನೊಂದು ಅಂಶವನ್ನು ಗಮನಿಸಬೇಕು. ಕನ್ನಡದ ಕಾದಂಬರಿಗಳು ನಮಗೆ ನಮ್ಮ ಪ್ರದೇಶ ಮತ್ತು ನಮ್ಮ ಆಗು ಹೋಗುಗಳನ್ನು ಹೇಳಿವೆ. ಅದರ ಆಶಯಗಳೂ ನಮಗೆ ಅರ್ಥವಾಗುತ್ತವೆ. ಕನ್ನಡದ ಆಶಯಗಳನ್ನು ಕನ್ನಡದ ಲೇಖಕರು ಹೇಳಿದ್ದಾರೆ. ಒಂದು ಅರ್ಥದಲ್ಲಿ ಒಂದು ವೇಳೆ ಕಾರಂತರು ಹೇಳುವ ಅತ್ಯಂತ ಸಣ್ಣ ವಿವರಗಳೂ ಬ್ರಿಟೀಶರಿಗೆ ಅರ್ಥವಾಗಿದ್ದರೆ ಅದರ ಕತೆಯು ಏನಾಗುತ್ತಿತ್ತು.? ಆದರೆ ಇದೇ ಮಾತನ್ನು ಗಿರಿಯವರ ಗತಿಸ್ಥಿತಿಗೆ ಅನ್ವಯವನ್ನು ಮಾಡಲು ಬರುವುದೂ ಇಲ್ಲ. ಮತ್ತೊಂದು ಅರ್ಥದಲ್ಲಿ ನಮಗೆ ಅತ್ಯಂತ ನಾಗರಿಕವಾದ ಒಂದು ವಿದ್ಯಾವಂತ ಜಗತ್ತನ್ನು ಹೇಳಿದವರು ದೇಸಾಯಿಯವರು. ಅವರ ಕಾದಂಬರಿಗಳಲ್ಲಿ ಮೇಲು ಮಧ್ಯಮವರ್ಗದ ಜನರು ಮತ್ತು ಅವರ ಭಾವನೆಗಳು ಇವೆ. ಈ ಬಗೆಯನ್ನು ನಾವು ಕುವೆಂಪು ಕಾದಂಬರಿಗಳಲ್ಲಿ ಕಾಣುವುದು ಸಾಧ್ಯವಿಲ್ಲ. ದೇಸಾಯಿಯರ ಕಾದಂಬರಿಗಳಲ್ಲಿ ವಿಶ್ವ, ವ್ಯಕ್ತಿ ಮತ್ತು ಅವರ ಅಂತರಂಗವು ವಿಶಿಷ್ಟವಾಗಿ ಕಾಣುತ್ತದೆ. ಹಾಗೆ ನೋಡಿದರೆ ಆಧುನಿಕ ಲೇಖಕರು ಮತ್ತು ಅವರ ಬರಹಗಳು ಈವತ್ತು ಬೇರೆ ಬೇರೆ ವಿಚಾರಗಳಿಂದ ಪ್ರೇರಿತವಾಗಿದೆ. ಆಧುನಿಕತೆಗೆ ಬೇರೆ ಬೇರೆ ಆಯಾಮಗಳೂ ಇವೆ. ನಮ್ಮ ನವ್ಯದ ಲೇಖಕರು ಸಂಪೂರ್ಣವಾಗಿ ವಾಸ್ತವ ಎನ್ನುವುದನ್ನು ಒಪ್ಪಲಿಲ್ಲ. ಕುದುರೆ ಮೊಟ್ಟೆ ಮತ್ತು ಗತಿಸ್ಥಿತಿ ಎನ್ನುವುದು ಇಲ್ಲಿ ಉಲ್ಲೇಖಿಸಬಹುದಾದ ಕಾದಂಬರಿಗಳು. ಆಧುನಿಕತಾದಿಗಳು ಒಂದು ಅರ್ಥದಲ್ಲಿ ವಾಸ್ತವವನ್ನು ಸಂಪೂರ್ಣವಾಗಿ ತಿರಸ್ಕಾರ ಮಾಡಿದ್ದು ಮಾತ್ರವೇ ಅಲ್ಲ, ಅದರ ಮೂಲಕ ಅವರು ಅದನ್ನು ಒಂದು ವಿವರಣೆಯು ಮಾತ್ರವೇ ಆಗಿದೆ ಎಂದು ಹೇಳಿದರು. ಹಾಗೆಯೇ ಅವರು ಕಲಾತ್ಮಕ ಎನ್ನುವುದನ್ನು ಮಾತ್ರವೇ ಹೇಳಿದರು.

ಅದರ ಜೊತೆಗೆ ಸಾಹಿತ್ಯ ಎನ್ನುವುದು ಯಾವುದೋ ಒಂದು ವಿಷಯವು ಮಾತ್ರವೇ ಅಲ್ಲ ಎಂದು ಭಾವಿಸಿದರು. ತಾತ್ವಿಕತೆಯನ್ನು ಹಿಂದೆ ಇಟ್ಟು ಅದರ ಬದಲು ನಾವು ಹೇಗೆ ಹೇಳುತ್ತೇವೆ ಎನ್ನುವುದು ಮಾತ್ರವೇ ಅತ್ಯಂತ ಮುಖ್ಯ ಎಂದು ಅನೇಕರು ತಿಳಿದರು. ನಿರೂಪಣೆ ಎನ್ನುವುದು ಅತ್ಯಂತ ಮುಖ್ಯವಾಗಿದ್ದು ಇಲ್ಲಿ ಗಮನಾರ್ಹ.

ವಿದ್ಯಮಾನಶಾಸ್ತ್ರವು ಬೇರೆ ಥರ ನಿರೂಪಣೆಯನ್ನು ಹೇಳುತ್ತದೆ. ನಿರೂಪಣೆಯು ಹೇಗೆ ಮುಖ್ಯವಾಗುತ್ತದೆ ಎಂದು ಹೇಳುವಾಗ ಈವತ್ತು ನಿರೂಪಣೆ ಮತ್ತು ಅದರ ವಿವಿಧತೆಯನ್ನು ಕುರಿತು ಅದು ಹೇಳಿದ್ದು ಸತ್ಯ. ಅದರಲ್ಲಿ ಕೆಲವರು ಕೃತಿಯು ಒಂದು ಧ್ವನಿಯನ್ನು ಮಾತ್ರವೇ ಹೇಳಬೇಕಾಗಿಲ್ಲ ಎಂದೂ ಹೇಳುತ್ತಾರೆ. ಆಶಯಗಳಿಗೆ ಒಂದು ಮೂಲವೂ ಇರಬಹುದು ಅಥವಾ ಜೀವನದ ಕ್ರಮಕ್ಕಿಂತ ಬೇರೆ ನಿಲುವು ಇರಬಹುದು. ಈವತ್ತು ನಮಗೆ ವಿವಿಧ ಸೌಕರ್ಯಗಳು ಇವೆ. ಅದರ ಜೊತೆಗೆ ಈವತ್ತು ವಿಜ್ಞಾನವು ಅತ್ಯಂತ ಮುಂದೆ ಬಂದಿದೆ. ಆದ್ದರಿಂದ ನಾವು ಮನಸ್ಸು, ಸಮಾಜ, ಚರಿತ್ರೆಯನ್ನು ನೋಡುವ ವಿಧಾನಗಳು ಬದಲಾಗಿವೆ. ಜೀವನದ ಕುರಿತ ದೃಷ್ಟಿಕೋನಗಳು ಕೂಡಾ ಬೇರೆಯಾಗಿವೆ. ಅದರ ಜೊತೆಗೆ ಈವತ್ತು ನಾವು ಅನೇಕ ಸಂಗತಿಗಳನ್ನು ನೋಡುವುದು ನಮಗೆ ಯಾವುದು ದಕ್ಕುತ್ತದೆಯೋ ಅದನ್ನು ಮಾತ್ರವೇ. ನಮಗೆ ಇರುವುದು ಯಾವುದು ನಾವು ಮತ್ತು ಯಾವುದು ನಾವು ಅಲ್ಲ ಎನ್ನುವುದು ಮಾತ್ರವೇ. ಇದನ್ನು ಇನ್ನೊಂದು ಮಾತಿನಲ್ಲಿ ಹೇಳುತ್ತೇವೆ: ಯಾವುದು ನಮ್ಮ ಅನುಭವ ಮತ್ತು ಯಾವುದು ನಮ್ಮ ಅನುಭವ ಅಲ್ಲ ಎನ್ನುವುದು ನಮಗೆ ಮುಖ್ಯ. ಇದು ನಮ್ಮ ವಾಸ್ತವದ ಗ್ರಹಿಕೆಗೆ ಪರಿಣಾಮವನ್ನು ಬೀರುತ್ತದೆ. ಬುದ್ಧಿಜೀವಿಗಳ ಜೀವನದ ಕ್ರಮವು ಬದಲಾದಾಗ ಅವರು ಹೇಳುವ ಸಂಗತಿಗಳು ಬದಲಾಗುತ್ತವೆ. ಅವರ ನೋಟವೂ ಬೇರೆಯಾಗುತ್ತದೆ. ಆದರೆ ಒಂದು ಅಂಶವು ಇಲ್ಲಿ ಮುಖ್ಯ: ಲೇಖಕರು ತಮ್ಮ ಬರಹಗಳಲ್ಲಿ ಒಂದು ಸಮತೋಲನವನ್ನು ರೂಪಿಸುತ್ತಾರೆ. ಅಂದರೆ ಅವರು ತಮ್ಮ ಅನುಭವವನ್ನು ಹೇಗೆ ಹೇಳುತ್ತಾರೆ ಎನ್ನುವುದು ಅವರ ಪ್ರಜ್ಞೆಗೆ ಸಂಬಂಧ ಪಟ್ಟದ್ದೂ ಹೌದು. ಅದರ ಜೊತೆಗೆ ಲೇಖಕನು ತನ್ನ ಬರಹದಲ್ಲಿ ಒಂದು ಸಂಯೋಜನೆಯು ಇರುವಂತೆ ನೋಡುತ್ತಾನೆ. ಈ ದೃಷ್ಟಿಯಿಂದ ಆಶಯವು ಅತ್ಯಂತ ಮುಖ್ಯವಾಗುತ್ತದೆ. ಯಾವುದೇ ಕಲಾಕೃತಿ ಮತ್ತು ಅದರ ಆಶಯವು ಹೇಗೆ ಇರುತ್ತದೆ ಎಂದು ಚರ್ಚೆಮಾಡುವಾಗ ಇದನ್ನು ಅರ್ಥ ಕೊಳ್ಳುವುದು ಅತ್ಯಂತ ಅಗತ್ಯ. ರೂಪಗಳು ಎನ್ನುವುದಕ್ಕೆ ಒಂದು ಸಾಧ್ಯತೆಯು ಇದೆ. ಅದು ಚರಿತ್ರೆಯಲ್ಲಿ ಮುಂದುವರಿಯುತ್ತದೆ. ಆದರೂ ಲೇಖಕನು ಕಾಲವನ್ನು ಮೀರಿ ಬರೆಯಲಾರ. ಅವನು ತನ್ನ ಸಾಧ್ಯತೆಯನ್ನು ಅದರ ಮೂಲಕವೇ

ರೂಪಿಸುತ್ತಾನೆ. ಭಾಷೆ ಎನ್ನುವುದು ನಮಗೆ ನಮ್ಮ ನಿರೂಪಣೆಯ ಒಂದು ಆಯುಧವೂ ಹೌದು. ನಮ್ಮ ಅನುಭವವನ್ನು ಹೇಳಲು ಇರುವ ಒಂದೇ ಒಂದು ಪರಿಕರವೆಂದರೆ ಭಾಷೆ. ಅದು ಮತ್ತೊಂದು ಅರ್ಥದಲ್ಲಿ ಒಂದು ಪರ್ಯಾಯವಾದ ಶಕ್ತಿಯೂ ಆಗಿರುತ್ತದೆ. ಸಂಕಥನ ಮತ್ತು ನಿರೂಪಣೆಗೆ ಭಾಷೆಯೂ ಅತ್ಯಂತ ಮುಖ್ಯವಾದ ಒಂದು ಸೇತುವೆ ಕೂಡಾ ಹೌದು. ಅದೇ ರೀತಿಯಲ್ಲಿ ನಮ್ಮ ಭಾಷೆಯು ವಸ್ತು ಮತ್ತು ವಿಷಯವನ್ನು ಹೇಳುತ್ತದೆ. ನಾವು ಕತೆಯನ್ನು ಹೇಗೆ ಹೇಳುತ್ತೇವೆ ಎನ್ನುವುದು ನಮ್ಮ ಅರಿವಿಗೆ ಬರುತ್ತದೆ. ಹಾಗೆಂದು ನಮ್ಮ ನಿರೂಪಣೆ ಮತ್ತು ನಾವು ರೂಪಿಸುವ ಸಂಕಥನಗಳು ಭಾಷೆಗೆ ಅನ್ವಯವಾಗುತ್ತವೆ. ನಿರೂಪಣೆ ಎನ್ನುವುದು ನಮಗೆ ಒಂದು ಅರ್ಥದಲ್ಲಿ ಅದು ಯಾವುದನ್ನು ಹೇಳುತ್ತದೆಯೋ ಅದರ ಅರ್ಥವನ್ನು ಸೂಚಿಸುತ್ತದೆ. ನಿಜವಾದ ಒಂದು ಕಥನ ಎಂದು ಹೇಳುವಾಗ ಅದರ ಸ್ವರೂಪವು ಬೇರೆ ಎನ್ನುವುದು ನಮಗೆ ಅರ್ಥವಾಗುತ್ತದೆ. ನಿಜವಾದ ಕಥನ ಎಂದು ಹೇಳುವಾಗ ಅದರಲ್ಲಿ ಒಂದು ಚರಿತ್ರೆಯು ಇದೆ. ಅದನ್ನು ನಾವು ಮರೆಯಬಾರದು. ನಿಜವಾದ ಒಂದು ಕಥನ ಎನ್ನುವುದು ನಮಗೆ ಚರಿತ್ರೆಯನ್ನು ಒಂದು ಮಾನದಂಡವಾಗಿಸುತ್ತದೆ. ಯಾವುದು ನಮಗೆ ಅತ್ಯಂತ ಅಗತ್ಯವೆಂದು ಅನಿಸುತ್ತದೆಯೋ ಅದನ್ನು ನಾವು ನಿರೂಪಣೆ ಮಾಡುತ್ತೇವೆ. ಅದು ನಮ್ಮ ಬಯಕೆಯನ್ನು, ನಮ್ಮ ಆಸೆಯನ್ನು ಮತ್ತು ನಮ್ಮ ಜೀವನದ ಸಂವಾದಗಳನ್ನು ಹೇಳುತ್ತವೆ. ನಾನು ಹುಲಿಯನ್ನು ಕೊಂದೆ ಎಂದರೆ ಅದು ಒಂದು ಫ್ಯಾಂಟಸಿಯು ಆಗಬಹುದು. ಅದು ಒಂದು ಭ್ರಾಂತಿಯ ಮಾತೂ ಆಗಬಹುದು. ಆದರೆ ಇದರ ಮತ್ತೊಂದು ರೂಪವು ಇದೆ: ನಾನು ಇಲಿಯನ್ನು ಕೊಂದೆ ಎಂದು ಹೇಳಿದರೆ ಅದು ಫ್ಯಾಂಟಸಿಯು ಅಲ್ಲ. ಅದು ವಾಸ್ತವವೂ ಆಗಿರುತ್ತದೆ. ಇದಕ್ಕೆ ಪೂರಕವಾಗಿ ನಾವು ಮತ್ತೊಂದು ಮಾತನ್ನು ಹೇಳಬಹುದು: ನಾನು ಇಲಿಯನ್ನು ಕೊಂದೆ ಎಂದು ಹೇಳುವುದು ನಮ್ಮ ಮಟ್ಟಿಗೆ ಒಂದು ಚರಿತ್ರೆಯೂ ಆಗಿರುತ್ತದೆ. ನಮ್ಮ ಎದುರು ಕುಳಿತವರು ಅದಕ್ಕೆ ಮರು ಮಾತನ್ನು ಹೇಳಬಹುದು. ಯಾವಾಗ? ಎನ್ನುವ ಪ್ರಶ್ನೆಯು ಬಂದರೆ ಮತ್ತೆ ನಮ್ಮ ಸಂವಾದವು ಮುಂದುವರಿಯುತ್ತದೆ. ಆದರೆ ನಾವು ಜೀವನದಲ್ಲಿ ಕೆಲವನ್ನು ಹೇಳಲು ಸಾಧ್ಯವಾಗುತ್ತದೆ. ಆದರೆ ಮತ್ತೆ ಕೆಲವು ಅನುಭವಗಳು ಹೇಳಬಹುದಾದವುಗಳು. ಅದರಲ್ಲಿಯೂ ನಾವು ಯಾರ ಜೊತೆಗೆ ಸಂವಾದ ಮಾಡುತ್ತೇವೆಯೋ ಅದರ ಸ್ವರೂಪಕ್ಕೆ ಅನುಸಾರವಾಗಿ ನಿರೂಪಣೆ ಮಾಡುತ್ತೇವೆ. ಜೀವನದಲ್ಲಿ ನಾವು ಅನೇಕರನ್ನು ಭೇಟಿಯಾಗುತ್ತೇವೆ. ಅವರ ಜೊತೆಗೆ ಬೇರೆ ಬೇರೆ ವಿಷಯಗಳ ಜೊತೆಗೆ ನಾವು ಮಾತಾಡುತ್ತೇವೆ. ಅವರು ನಮಗೆ ಆತ್ಮೀಯರಾದರೆ ನಮ್ಮ ಸುಖವನ್ನು ಮತ್ತು ದುಃಖವನ್ನು

ಹಂಚಿಕೊಳ್ಳುತ್ತೇವೆ. ಜೀವನದಲ್ಲಿ ಇದು ಅತ್ಯಂತ ಮಹತ್ವದ್ದೂ ಆಗಿರಬಹುದು. ವಾಸ್ತವವನ್ನು ನಾವು ಹೇಗೆ ಹೇಳುತ್ತೇವೆ ಎನ್ನುವುದರ ಆಧಾರದ ಮೇಲೆ ಇವುಗಳು ನಿರ್ಣಯವಾಗುತ್ತವೆ. ನಿಜವಾದ ಚಾರಿತ್ರಿಕವಾದ ಸಂಗತಿಗಳು ಹೇಗೆ ನಿರೂಪಣೆಗೆ ಗುರಿಯಾಗುತ್ತವೆ ಎಂದು ಯೋಚನೆ ಮಾಡಬೇಕು. ಚರಿತ್ರೆ ಮತ್ತು ಅದರ ಪ್ರಜ್ಞೆಯು ನಮಗೆ ಒಂದು ಪ್ರೇರಣೆಯನ್ನು ಕೊಡುತ್ತದೆ. ಆದರೆ ಚರಿತ್ರೆಯು ನಮಗೆ ಒಂದು ಶಾಸ್ತ್ರವೂ ಹೌದು. ನಮ್ಮ ಪ್ರಜ್ಞೆಯ ಮೇಲೆ ಅದು ಬೀರುವ ಪ್ರಭಾವವನ್ನು ನಾವು ಒಂದು ವಿವರದ ಮೂಲಕ ಹೇಳಲು ಸಾಧ್ಯವಾಗುವದಿಲ್ಲ. ಅದು ನಮಗೆ ಒಂದು ಮಾನವಿಕವಾದ ಅಧ್ಯಯನದ ಕ್ರಮವೂ ಹೌದು. ಚರಿತ್ರೆ ಮತ್ತು ಅದರ ಜ್ಞಾನ ಎನ್ನುವುದಕ್ಕೆ ಬೇರೆ ಬೇರೆ ಆಯಾಮವು ಇದೆ. ನಮ್ಮ ಆಲೋಚನೆಯು ಬೆಳೆದು ಬಂದ ಬಗೆಯನ್ನು ಚರಿತ್ರೆಯು ಹೇಳುತ್ತದೆ. ಅದು ನಮ್ಮ ಅಸ್ತಿತ್ವದ ಕಥನವೂ ಹೌದು. ಚರಿತ್ರೆಯು ನಮಗೆ ಮತ್ತೊಂದು ಬಗೆಯ ತತ್ವಜ್ಞಾನದ ನಿರೂಪಣೆಯೂ ಆಗಿರುತ್ತದೆ. ಚರಿತ್ರೆ ಮತ್ತು ಮನೋಸ್ಥಿತಿ ಮತ್ತು ಸಮೂಹವು ಜೊತೆಗೆ ಹೋಗುತ್ತವೆ. ಅದು ಅತ್ಯಂತ ಮುಖ್ಯ. ಆದರೆ ಚರಿತ್ರೆ ಎನ್ನುವುದು ನಮಗೆ ಯಾವುದು ಆಗಿದೆಯೋ ಅದನ್ನು ಹೇಳುತ್ತದೆ. ಮುಂದೆ ಯಾವುದು ನಡೆಯಲಿದೆ ಎಂದು ಅದು ಹೇಳಲಾರದು. ಚರಿತ್ರೆಗೆ ಹಲವು ಆಯಾಮಗಳು ಇವೆ. ಅದರಲ್ಲಿ ಈ ಮೊದಲು ಹೇಳಿದಂತೆ ವಿವರಿಸಬಹುದು. ಮತ್ತೆ ಕೆಲವನ್ನು ನಾವು ವಿವರಿಸುವುದು ಅತ್ಯಂತ ಕಷ್ಟ. ಚರಿತ್ರೆಯನ್ನು ನಾವು ನಿರೂಪಿಸುತ್ತೇವೆ ಎಂದರೆ ಅದು ಒಂದು ವಿವರಣೆಯೂ ಹೌದು. ಇಲ್ಲಿ ಇನ್ನೊಂದು ಅಂಶವನ್ನು ನಾವು ಗಮನಿಸಬೇಕು: ನಮ್ಮ ನವೋದಯ ಕಾಲದ ಲೇಖಕರು ಚರಿತ್ರೆ, ಕಾವ್ಯ, ವಿಮರ್ಶೆ ಮತ್ತು ಮೀಮಾಂಸೆಯ ಬರಹಗಳನ್ನು ವಿವಿಧ ರೀತಿಯಲ್ಲಿ ಗ್ರಹಿಸಿದರು. ಚರಿತ್ರೆ ಮತ್ತು ಅದರ ಪ್ರಜ್ಞೆಗಳು ಹೇಗೆ ಕೆಲಸವನ್ನು ಮಾಡುತ್ತದೆ ಎನ್ನುವುದಕ್ಕೆ ಇದು ಒಂದು ನಿದರ್ಶನವೂ ಆಗಿರುತ್ತದೆ. ಚರಿತ್ರೆಯನ್ನು ಕಾವ್ಯದ ಜೊತೆಗೆ ನಿರೂಪಿಸುವ ಅತ್ಯಂತ ಮುಖ್ಯವಾದ ಕ್ರಮವನ್ನು ಪಂಪ ಮತ್ತು ರನ್ನರು ಹೇಳಿಕೊಟ್ಟರು. ಸಾಹಿತ್ಯದಲ್ಲಿ ನಾವು ಮಾಡುವ ಅನೇಕ ವರ್ಗೀಕರಣಗಳು ಈ ದೃಷ್ಟಿಯಿಂದ ಮಹತ್ವದ್ದು ಎನ್ನುವುದೂ ನಿಜ. ಚಂಪೂ, ರಗಳೆ, ಷಟ್ಪದಿ ಮುಂತಾದವು ಇಲ್ಲಿ ನೆನಪು ಮಾಡಿಕೊಳ್ಳುವುದು ಅತ್ಯಂತ ಮುಖ್ಯ. ವಾಸ್ತವವಾಗಿ ಹತ್ತೊಂಬತ್ತನೆಯ ಶತಮಾನದಲ್ಲಿ ಚರಿತ್ರೆ ಮತ್ತು ಅದರ ಪ್ರಜ್ಞೆಗೆ ಬೇರೆ ಬೇರೆ ಆಯಾಮಗಳು ಬಂದವು. ಚರಿತ್ರೆ ಮತ್ತು ಅದರ ಅಧ್ಯಯನದಲ್ಲಿ ಹೊಸದಾದ ಆಯಾಮಗಳು ಬಂದವು. ಚರಿತ್ರೆಯನ್ನು, ತತ್ವಜ್ಞಾನವನ್ನು, ಕಾವ್ಯದ ಶಾಸ್ತ್ರಗಳನ್ನು ಜೊತೆಗೆ ಬೆರೆಸಿದರು. ಚರಿತ್ರೆಯನ್ನು ಒಂದು ವಿಶಿಷ್ಟವಾದ ಅಧ್ಯಯನ ಎಂದು ಹೇಳುವಾಗ ಅದರ ಸಾಧ್ಯತೆಯು ಬೇರೆಯಾಗುತ್ತದೆ. ಅದರಲ್ಲಿ ವಿಜ್ಞಾನವೂ

ಚರಿತ್ರೆಯೆಂದರೆ ಅದು ಕಾವ್ಯವೂ ಹೌದು, ಅದರ ಜೊತೆಗೆ ಅದು ವಿಜ್ಞಾನವು ಹೌದು ಎಂದು ಹೇಳಿದರು. ಚರಿತ್ರೆಯನ್ನು ಅತ್ಯಂತ ಆಳವಾಗಿ ಅಧ್ಯಯನ ಮಾಡುವಾಗ ಅನೇಕವನ್ನು ಜೊತೆಗೆ ತರುವುದು ಅತ್ಯಂತ ಅವಶ್ಯ ಎಂದು ಅನೇಕ ತಾತ್ವಿಕರು ವಿವರಿಸಿದರು. ಅದಕ್ಕೆ ಕೆಲವು ಚಹರೆಗಳು ಇರುವುದು ಸತ್ಯ. ಚರಿತ್ರೆ ಮತ್ತು ಅದರ ಅರಿವು ನಮಗೆ ಹೇಗೆ ಮುಖ್ಯವಾಗಿದೆ ಎನ್ನುವುದನ್ನು ಹೇಳುವಾಗ ಅದನ್ನು ಒಂದು ಮಹಾನ್ ನಿರೂಪಣೆ ಮಾಡಲಾಗಿದೆ ಎಂದು ಹೇಳುತ್ತಾನೆ. ಚರಿತ್ರೆಯನ್ನು ಕತೆಯನ್ನಾಗಿ ಮಾಡುವಾಗ ಅದರ ಜೊತೆಗೆ ಬೇರೆ ಸಂಗತಿಗಳು ಸೇರಿವೆ ಎನ್ನುವುದು ಅವನ ವಾದವಾಗಿದೆ. ಅರಿಸ್ಟಾಟಲ್ ಮೆಟಾಫಿಸಿಕ್ಸ್ ಮತ್ತು ಅದರ ಕಲ್ಪನೆಯನ್ನು ನಮ್ಮ ಮುಂದೆ ಇಟ್ಟದ್ದನ್ನು ನಾವು ಇಲ್ಲಿ ಹೇಳಬೇಕು. ಚರಿತ್ರೆಯನ್ನು ನೋಡುವಾಗ ನಮಗೆ ನಮ್ಮ ಹೇಗೆ ಬೇರೆ ಬೇರೆ ತಾತ್ವಿಕತೆಗಳು ಕೆಲಸವನ್ನು ಮಾಡುತ್ತವೆ ಎಂದು ಹಿದೇನ್ ವೈಟ್ ವಿವರಿಸುತ್ತಾನೆ. ಅನೇಕ ಪರಿಕಲ್ಪನೆಗಳು ಇದರ ಮೇಲೆ ಪ್ರಭಾವವನ್ನು ಬೀರುತ್ತವೆ. ರೂಪನಿಷ್ಟತೆ, ಪ್ರದರ್ಶನಾತ್ಮಕ ಸಿದ್ಧಾಂತ ಮುಂತಾದವುಗಳು ನಮ್ಮ ಮೇಲೆ ಪ್ರಭಾವವನ್ನು ಬೀರುತ್ತವೆ. ಅದರ ಜೊತೆಗೆ ಸಾಹಿತ್ಯದಲ್ಲಿ ಇರುವ ಅನೇಕ ಸಂಗತಿಗಳು ನಮ್ಮ ನಿಲುವನ್ನು ಪ್ರಭಾವಿಸುತ್ತವೆ. ಅದರಲ್ಲಿ ದುರಂತ, ಕಾಮಿಡಿ, ವ್ಯಂಗ್ಯ ಮುಂತಾದವುಗಳು ನಮಗೆ ಚರಿತ್ರೆಯನ್ನು ಗ್ರಹಿಸಲು ಬೇಕಾದ ಪರಿಕರವನ್ನು ಕೊಟ್ಟಿರುವುದು ಸತ್ಯ. ಅದರ ಜೊತೆಗೆ ಅನೇಕ ಸಿದ್ಧಾಂತಿಗಳು ನಮಗೆ ಚರಿತ್ರೆಯನ್ನು ಗ್ರಹಿಸಲು ಬೇಕಾದ ಅರಿವನ್ನು ಕೊಟ್ಟರು. ಅದರಲ್ಲಿ ಮಾರ್ಕ್ಸವಾದ, ಹೆಗೆಲ್‌ವಾದ, ನೀಶೆಯ ವಾದ ಮುಂತಾದವುಗಳು ಇವೆ. ಚರಿತ್ರೆಯನ್ನು ನೋಡಲು ನಮಗೆ ಹೀಗೆ ಒಂದು ದಾರಿಯು ಮಾತ್ರವೇ ಇದೆ ಎಂದು ನಾವು ತಿಳಿಯಬೇಕಾಗಿಲ್ಲ. ನಮ್ಮ ಎದುರು ಯಾವುದು ನಡೆಯುತ್ತದೆ ಮತ್ತು ಯಾವುದು ಹೇಗೆ ನಡೆದಿದೆ ಎನ್ನುವುದು ಒಂದು ಅನ್ವಯವೂ ಆಗಿರುತ್ತದೆ. ಸಾಹಿತ್ಯ ಮತ್ತು ಅದರ ಚರ್ಚೆಯಲ್ಲಿ ವಿವಿಧ ಸಂಗತಿಗಳು ಬರುತ್ತವೆ ಎನ್ನುವುದು ಸತ್ಯ. ಅದರಲ್ಲಿ ರೂಪಕಗಳು ಮತ್ತು ಅದರ ಪ್ರಶ್ನೆಗಳು ಇವೆ. ಹಾಗೆಯೇ ಕಾವ್ಯ ಮತ್ತು ಅದರ ಭಾಷೆಯ ಚರ್ಚೆಗಳೂ ಇವೆ. ಕಾವ್ಯ ಮತ್ತು ವ್ಯಾಕರಣದ ಪ್ರಶ್ನೆಗಳು ಇವೆ. ಜೊತೆಗೆ ಸಾಹಿತ್ಯ ಮತ್ತು ಓದುಗರು ಎನ್ನುವುದೂ ಇದೆ. ಚರಿತ್ರೆ ಮತ್ತು ತತ್ವಜ್ಞಾನಗಳ ಅಧ್ಯಯನಗಳ ಮೇಲೆ ಇವು ಪ್ರಭಾವವನ್ನು ಬೀರಿವೆ. ಹಾಗೆ ನೋಡಿದರೆ ಚರಿತ್ರೆಯನ್ನು ಮತ್ತು ಭಾಷೆಯನ್ನು ನಾವು ಬೇರೆ ಮಾಡಲು ಬರುವುದಿಲ್ಲ. ಅದನ್ನು ಭಾಷೆಯ ಮೂಲಕವೇ ನೋಡಬೇಕಾಗುತ್ತದೆ. ನಮಗೆ ಹತ್ತೊಂಬತ್ತನೆಯ ಶತಮಾನದಲ್ಲಿ ಚರಿತ್ರೆ ಮತ್ತು ಅದರ ಅನುಸಂಧಾನಕ್ಕೆ ತತ್ವಜ್ಞಾನವೂ ನೆರವಾಗಿದೆ. ಅದರ ವೈಜ್ಞಾನಿಕ ಚಿಂತನೆಗಳು

ನಮಗೆ ನೆರವಾಗಿದ್ದು ನಿಜ. ವಿಜ್ಞಾನ ಮತ್ತು ಅದರ ಸಿದ್ಧಾಂತಗಳು ಚರಿತ್ರೆಯನ್ನು ನೋಡುವ ಪರಿಕರಗಳೂ ಆದವು. ನಿಜವಾದ ಚರಿತ್ರೆ ಮತ್ತು ಅದರ ಸ್ವಭಾವವನ್ನು ನೋಡಲು ತತ್ವಜ್ಞಾನವು ಅತ್ಯಂತ ಮುಖ್ಯ. ಚರಿತ್ರೆಯು ತತ್ವಜ್ಞಾನವನ್ನು ಬಿಟ್ಟು ಇಲ್ಲ. ಎರಡನೆಯದಾಗಿ ಈವತ್ತು ವಾಸ್ತವವನ್ನು ಅರ್ಥ ಮಾಡಿಕೊಳ್ಳಲಿಕ್ಕೆ ಬೇಕಾಗುರುವುದು ವಾಸ್ತವ ಎನ್ನುವುದು ನಮಗೆ ಒಂದು ಹಾದಿಯೂ ಆಗಿದೆ. ಚರಿತ್ರೆ ಎನ್ನುವುದು ಆತ್ಯಂತ ಆಳದಲ್ಲಿಯೂ ಇದೆ. ಅದನ್ನು ನಾವು ಮೇಲು ನೋಟದಲ್ಲಿ ನಿರ್ಧಾರ ಮಾಡಲು ಆಗುವುದಿಲ್ಲ. ಮಲೆಗಳಲ್ಲಿ ಮದುಮಗಳು ಕಾದಂಬರಿಯು ಬರೀ ಒಂದು ಕಾದಂಬರಿಯು ಮಾತ್ರವೇ ಆಗಿಲ್ಲ. ಅದರಲ್ಲಿ ಮಲೆನಾಡಿನ ಚರಿತ್ರೆಯು ಇದೆ. ಅದರ ಜೊತೆಗೆ ಮಲೆನಾಡು ಮತ್ತು ಅದರ ಜ್ಞಾನರೂಪಗಳೂ ಇವೆ. ಇದೇ ವಾಸ್ತವವು ಅವರಿಗೆ ಕಾವ್ಯವನ್ನು ಬರೆಯಲು ಪ್ರೇರಣೆಯನ್ನು ನೀಡಿದೆ. ಇದು ಅತ್ಯಂತ ಸುಲಭವಾಗಿರಲಿಲ್ಲ. ಪದ್ಯವನ್ನು ನಾವು ಬರೆಯುವುದು ಅಂದರೆ ಅದರಲ್ಲಿ ನಾವು ಪದಗಳನ್ನು ಆಯ್ಕೆ ಮಾಡುವುದು ಹೌದು. ಇಲ್ಲಿ ಕಾರಂತರ ಕಾದಂಬರಿಗಳು, ವೈದ್ಯರ ಕಾದಂಬರಿಗಳು ಮುಂತಾದವುಗಳನ್ನು ನೆನಪು ಮಾಡಿಕೊಳ್ಳುವುದು ಅತ್ಯಂತ ಸೂಕ್ತ. ಹಾಗೆ ನೋಡಿದರೆ ಚರಿತ್ರೆ ಮತ್ತು ಅದರ ಸಾಮಾನ್ಯವಾದ ಅರ್ಥಗಳು ಬೇರೆಯಿರುತ್ತವೆ. ಹಾಗೆಂದು ಅದನ್ನು ಅತ್ಯಂತ ಸೂಕ್ಷ್ಮವಾಗಿ ನೋಡಿದರೆ ಅದರ ಗುಣ ಮತ್ತು ಸ್ವಭಾವಗಳು ಭಿನ್ನವಾಗುತ್ತವೆ. ಚರಿತ್ರೆಯನ್ನು ನಾವು ನೈತಿಕವಾದ ಒಂದು ದೃಷ್ಟಿಕೋನದಲ್ಲಿ ಮಾತ್ರವೇ ನೋಡಬೇಕಾದ ಅಗತ್ಯವಿಲ್ಲ. ಚರಿತೆ ಮತ್ತು ಅದರ ಸ್ವರೂಪವನ್ನು ನಿರ್ಧಾರ ಮಾಡುವುದಕ್ಕೆ ನಮ್ಮಲ್ಲಿ ಒಂದು ಬಗೆಯ ಅತ್ಯಂತ ವಿಶಿಷ್ಟವಾದ ತಿಳುವಳಿಕೆಯೂ ಅಗತ್ಯ ಇರುತ್ತದೆ ಹಾಗೆ ನೋಡಿದರೆ ಚರಿತ್ರೆಯ ಸಿದ್ಧಾಂತದ ಹಿನ್ನೆಲೆಯಲ್ಲಿ ಅನೇಕ ಸಂಗತಿಗಳು ಇರುತ್ತವೆ. ಹಾಗೆ ನೋಡಿದರೆ ಹತ್ತೊಂಬತ್ತನೆಯ ಶತಮಾನದ ತರುವಾಯ ವಿವಿಧ ಕ್ಷೇತ್ರಗಳಲ್ಲಿ ಬೇರೆ ಬೇರೆ ಬದಲಾವಣೆಯು ಕಂಡಿತು. ಅದರಲ್ಲಿಯೂ ಸಮಾಜ ಮತ್ತು ಬುದ್ಧಿಜೀವಿಗಳ ನಡುವೆ ಬೇರೆ ಬೇರೆ ರೀತಿಯ ಸಂಕಥನಗಳು ಬಂದವು. ಅದರ ಪರಿಣಾಮವಾಗಿ ನಾವು ಈವತ್ತು ಸಾಹಿತ್ಯ, ತತ್ವಜ್ಞಾನ ಮತ್ತು ಚರಿತ್ರೆಯಲ್ಲಿ ಬೇರೆ ಬೇರೆ ಚರ್ಚೆಗಳು ಪ್ರಾರಂಭವಾದವು. ಚರಿತ್ರೆಯು ಈ ದೃಷ್ಟಿಯಿಂದ ನಮಗೆ ಅತ್ಯಂತ ಮುಖ್ಯವಾಗಿದೆ ಅದರ ಮೂಲಕ ನಾವು ವಿಜ್ಞಾನ, ತತ್ವಜ್ಞಾನ, ಸಮಾಜ ಮತ್ತು ಸಂಸ್ಕೃತಿಯನ್ನು ಗ್ರಹಿಸಬಲ್ಲ ಸಾಧ್ಯತೆಗಳು ಇವೆ.

ಆಧುನಿಕ ಚರಿತ್ರೆಕಾರರು ರಚನೆ ಮತ್ತು ಅದರ ಸ್ವರೂಪವನ್ನು ಚರ್ಚೆ ಮಾಡುವಾಗ ಅದನ್ನು ಬೇರೆ ರೀತಿಯಲ್ಲಿ ಗ್ರಹಿಸಿದ್ದಾರೆ. ಕಾದಂಬರಿ ಮತ್ತು ಅದರ ರಚನೆಗಳಿಗೆ ಒಂದು ಆಯಾಮವೂ ಇರುತ್ತದೆ. ಪಠ್ಯವನ್ನು ಆಧುನಿಕ

ಅರ್ಥದಲ್ಲಿ ಗ್ರಹಿಸುವುದು ಒಂದು ಥರ. ಅದರಲ್ಲಿ ವಸ್ತು ಮತ್ತು ರಚನೆಗಳು ಸದಾ ದ್ವಂದ್ವಾತ್ಮಕವೂ ಆಗಿರುತ್ತದೆ. ರಾಚನಿಕ ವಾದಿಗಳು ರಚನೆಯನ್ನು ನೋಡುವುದು ಅದರ ಒಂದು ಅತ್ಯಂತ ವಿಶಿಷ್ಟವಾದ ಸಾಧ್ಯತೆಯ ನೆಲೆಯಿಂದ. ಕಾವ್ಯ ಮತ್ತು ಗದ್ಯದ ರಚನೆಗಳು ಯಾವತ್ತೂ ಬೇರೆಯಾಗಿರುತ್ತದೆ ಎಂದು ಅವರು ಭಾವಿಸುತ್ತಾರೆ. ನಮಗೆ ಭಾಷೆಯು ಇಂಥದ್ದೇ ಒಂದು ಕಾಲದಲ್ಲಿ ಹುಟ್ಟಿತು ಎಂದು ಗೊತ್ತಿಲ್ಲ. ಅದರ ರೂಪವನ್ನು ನಾವು ಈಗ ಒಂದು ನಿರ್ದಿಷ್ಟವಾದ ಇಸವಿಯ ಹಿನ್ನೆಲೆಯಲ್ಲಿ ಹೇಳಲಾರೆವು. ಆದರೆ ಅದು ನಮ್ಮ ಪ್ರಜ್ಞೆಯನ್ನು ಹೇಳುತ್ತದೆ. ನಮ್ಮ ಕೌಶಲವನ್ನು ಸೂಚಿಸುತ್ತದೆ. ವಾಸ್ತವವಾದಿ ರಚನೆ ಮತ್ತು ಅದರ ರೂಪವು ಒಂದು ಥರ ಇದೆ. ಅದನ್ನು ನಿರ್ದಿಷ್ಟವಾದ ಪ್ರಾತಿನಿಧಿಕತೆ ಎಂದೂ ಹೇಳಬಹುದು.

ಪ್ರತಿಯೊಂದು ಅಧ್ಯಯನ ಶಿಸ್ತುಗಳು ಕೂಡಾ ತನ್ನದೇ ಆದ ಒಂದು ವ್ಯಾಪ್ತಿಯನ್ನು ಹೊಂದಿರುತ್ತದೆ. ಅಷ್ಟೇ ಅಲ್ಲ ಅದರದೇ ಆದ ಒಂದು ಚೌಕಟ್ಟನ್ನು ಅಳವಡಿಸುತ್ತದೆ. ಅಧ್ಯಯನಕ್ಕೆ ಬೇಕಾದ ಪರಿಕಲ್ಪನೆಯನ್ನು ರೂಪಿಸುತ್ತದೆ. ಅಧ್ಯಯನಕ್ಕೆ ಹೆಚ್ಚು ನಿರ್ದಿಷ್ಟವಾದ ಒಂದು ಆಶಯವೂ ಇರುತ್ತದೆ. ಪ್ರತಿಯೊಂದು ಚಾರಿತ್ರಿಕವಾದ ಸಂಕಥನವನ್ನು ನೋಡಿದರೂ ನಮಗೆ ಒಂದು ವಿಷಯವು ನಮ್ಮ ಅರಿವಿಗೆ ಬರುತ್ತದೆ: ಚರಿತ್ರೆ ಮತ್ತು ಅದರ ಹಿಂದೆ ಇರುವ ಗ್ರಹಿಕೆಗಳು ಒಂದು ಥರ ಇರುತ್ತದೆ. ಆದರೆ ತತ್ವಜ್ಞಾನದ ಚರಿತ್ರೆಯು ಬೇರೆ ಥರ ಇರುತ್ತದೆ. ಇವು ಸಂಕಥನದ ದೃಷ್ಟಿಯಿಂದ ಬೇರೆ ಇರುತ್ತದೆ. ಇದನ್ನು ಚಾರಿತ್ರಿಕವಾದ ಅಸ್ತಿತ್ವದ ಹಿನ್ನೆಲೆಯಲ್ಲಿಯೂ ನೋಡಬೇಕಾಗುತ್ತದೆ. ಚರಿತ್ರೆಯು ನಮಗೆ ಬೇರೆ ಬೇರೆ ಪಾಠಗಳನ್ನು ಹೇಳಿದೆ.

ಅನೇಕ ಸಂದರ್ಭದಲ್ಲಿ ಒಂದು ಘಟನೆಯನ್ನು ಹೇಳುವಾಗ ನಾವು ಅದನ್ನು ಒಂದು ಪ್ರತ್ಯೇಕ ಘಟಕ ಎಂದು ಭಾವಿಸುತ್ತೇವೆ. ಅನೇಕ ಇತಿಹಾಸಕಾರರಿಗೆ ಐತಿಹ್ಯ ಮತ್ತು ಪುರಾಣಗಳು ಶೈಲಿ ಮತ್ತು ನಿರೂಪಣೆಯ ತಂತ್ರಗಳು ಅಷ್ಟು ಮುಖ್ಯ ಎಂದು ಅನಿಸುವುದಿಲ್ಲ. ಸಾಹಿತ್ಯವನ್ನು ಕತೆಗಾರರು ಹೇಗೆ ನಿರ್ವಹಣೆ ಮಾಡುತ್ತಾರೆ ಎನ್ನುವುದು ಅವರ ಗಮನದಲ್ಲಿ ಇಲ್ಲ. ಆದರೆ ಅದರಲ್ಲಿ ಬೇರೆ ಬೇರೆ ಅಂಶಗಳು ಇರುತ್ತವೆ ಎನ್ನುವುದನ್ನು ನೋಡಲು ಹೋಗುವುದೂ ಇಲ್ಲ. ಇತಿಹಾಸಕಾರರು ಭಾಷೆಯನ್ನು ಒಂದು ವಾಹಕ ಮಾತ್ರವೇ ಆಗಿದೆ ಎಂದು ತಿಳಿಯುತ್ತಾರೆ. ಆದ್ದರಿಂದ ಅವರ ಗಮನವು ಭಾಷೆ ಎಂದರೆ ಅದು ಒಂದು ಸಂಜ್ಞೆ ಮಾತ್ರ. ಅಷ್ಟೇ ಅಲ್ಲ ಅವರು ಬರೀ ತಾಂತ್ರಿಕತೆಯನ್ನು ಮಾತ್ರವೇ ಗುರುತಿಸುತ್ತಾರೆ. ಆದ್ದರಿಂದ ಭಾಷೆ ಮತ್ತು ಅದರ ಸ್ವೀಕಾರ ಎನ್ನುವುದು ಒಂದು ಸರಳ ಸಮೀಕರಣದ ಥರ ಆಗುತ್ತದೆ. ಚರಿತ್ರೆಯನ್ನು ಕುರಿತು ನಾವು ಯಾವ ನಿರೂಪಣೆಯನ್ನು ಅವಲಂಬಿಸುತ್ತೇವೆ ಎನ್ನುವುದು ಮುಖ್ಯ. ಚರಿತ್ರೆ ಮತ್ತು ಅದರ ನಿರೂಪಣೆಯಲ್ಲಿ ಅತ್ಯಂತ ಮುಖ್ಯವಾದ್ದು ನಮ್ಮ ತಾತ್ವಿಕವಾದ ನಿಲುವುಗಳು

ಎನ್ನುವುದು ಸತ್ಯ. ಅದನ್ನು ನಾವು ಯಾವ ರೀತಿಯಲ್ಲಿ ನಿರೂಪಿಸುತ್ತೇವೆ ಎನ್ನುವುದನ್ನು ಅವಲಂಬಿಸಿಕೊಂಡು ಹೇಳಬೇಕಾಗುತ್ತದೆ. ನೀಶೆಯು ಹಾಸ ಚರಿತ್ರೆ ಎನ್ನುವ ಪರಿಕಲ್ಪನೆಯನ್ನು ನಿರಾಕರಿಸುತ್ತಾನೆ. ಅದರ ಜೊತೆಗೆ ಅವನು ಚರಿತ್ರೆಯನ್ನು ಬೇರೆ ಥರ ನೋಡುತ್ತಾನೆ. ಅವನು ಇತಿಹಾಸ ಮತ್ತು ಅದರ ನಿರಚನೆಯ ಅಗತ್ಯವನ್ನು ಹೆಚ್ಚು ಪ್ರತಿಪಾದಿಸುತ್ತಾನೆ. ಸಂಸ್ಕೃತಿಯು ಚರಿತ್ರೆಯಲ್ಲಿ ಒಂದು ನಿರ್ದಿಷ್ಟವಾದ ಪಾತ್ರವನ್ನು ವಹಿಸುತ್ತದೆ. ಪುನರುಜ್ಜೀವನವು ಮತ್ತೊಂದು ಅರ್ಥದಲ್ಲಿ ನಿಸರ್ಗ ಮತ್ತು ಅದರ ಪರಿಕಲ್ಪನೆಯನ್ನು ಬದಲಿಸಿತು. ಇದರಿಂದ ಜನರು ಮತ್ತು ನಿಸರ್ಗದ ಸಂಬಂಧದ ದ್ವಂದ್ವದ ಪ್ರಶ್ನೆಯು ಹೆಚ್ಚು ಪ್ರಧಾನವಾಯಿತು.

ಪುನರುಜ್ಜೀವನದ ಅನಂತರ ಚರಿತ್ರೆಯಲ್ಲಿ ಮತ್ತು ಅದರ ದಾಖಲೆಗಳನ್ನು ನೋಡುವ ಕ್ರಮಗಳಲ್ಲಿ ವ್ಯತ್ಯಾಸವಾಯಿತು. ಅದೇ ವೇಳೆಗೆ ಕೆಲವನ್ನು ವಿಚಾರವಾದ ಮತ್ತು ಕೆಲವನ್ನು ಅವೈಚಾರಿಕ ಎಂದು ಹೇಳುವ ಪರಿಸ್ಥಿತಿಯು ಬಂದಿತು. ಅದರ ಜೊತೆಗೆ ಆಧುನಿಕ ಮತ್ತು ಹಳೆಯ ಎನ್ನುವುದಕ್ಕೆ ಬೇರೆ ಬೇರೆ ಅರ್ಥಗಳು ಬಂದವು. ವಿವರಣೆಗಳಲ್ಲಿ ಬದಲಾವಣೆಗಳು ಕಾಣಿಸಿದವು. ಯಂತ್ರಗಳು ನಮಗೆ ಯಾವ ರೀತಿಯ ಬದಲಾವಣೆಯನ್ನು ತರುತ್ತದೆ ಎನ್ನುವುದು ಸ್ವಯಂವೇದ್ಯ. ಈ ಅರ್ಥದಲ್ಲಿ ಚರಿತ್ರೆ ಮತ್ತು ಅದರ ಪ್ರಜ್ಞೆ ಎನ್ನುವುದು ಅತ್ಯಂತ ಮುಖ್ಯ. ಚರಿತ್ರೆಗೆ ಒಂದು ಮೌಲ್ಯವಿದೆ. ಹಾಗೆ ನೋಡಿದರೆ ಚರಿತ್ರೆ ಮತ್ತು ಅದರ ಪ್ರಜ್ಞೆಗೆ ವಿವಿಧ ಆಯಾಮಗಳೂ ಇರುತ್ತವೆ. ನಾವು ಚರಿತ್ರೆಯನ್ನು ವಿಮರ್ಶಾತ್ಮಕವಾಗಿಯೂ ನೋಡಬೇಕಾಗುತ್ತದೆ. ಅದು ನಮ್ಮ ಅಗತ್ಯ. ಚರಿತ್ರೆಯು ಮೌಲ್ಯ ರಹಿತವಾದ್ದು ಅಲ್ಲ. ಚರಿತ್ರೆಯಲ್ಲಿ ಏನು ಆಗಿದೆಯೋ ಅದನ್ನು ನಾವು ನಂಬುವುದು ಅಲ್ಲ, ಅದರ ಬದಲು ಅದು ನಡೆಯಲು ಏನು ಕಾರಣವು ಇದೆ ಎನ್ನುವುದನ್ನು ನೋಡುವುದು.

ಅನೇಕ ಚರಿತ್ರೆಕಾರರು ಘಟನೆಯನ್ನು ಮಾತ್ರವೇ ವಿವರಿಸುತ್ತಾರೆ. ಹೀಗೆ ಹೇಳುವಾಗಲೂ ನಮಗೆ ವಾಹಕವಾದ ಒಂದು ಭಾಷೆಯು ಮಾತ್ರ. ಚರಿತ್ರೆಯು ನಿರಂತರವಾದ್ದು ಮಾತ್ರವೇ ಅಲ್ಲ, ಅದು ಪರಿವರ್ತನೆಯನ್ನು ಹೇಳುತ್ತದೆ. ಅದರ ಜೊತೆಗೆ ತಿಳುವಳಿಕೆಯನ್ನು ಹೇಳುತ್ತದೆ. ಆದರೆ ಯಾವುದೇ ಕಾರಣಕ್ಕೆ ಅದು ಅರ್ಥಹೀನವಾದ್ದು ಅಲ್ಲ.

■

# ಅವೈಚಾರಿಕತೆ ಮತ್ತು ಪುನರುಜ್ಜೀವನದ ಜ್ಞಾನ ಮಾದರಿಗಳು

ಪುನರುಜ್ಜೀವನದ ಕಾಲವು ಹೇಗೆ ನಮ್ಮ ವೈಚಾರಿಕತೆಯನ್ನು ರೂಪಿಸಿದೆ ಮತ್ತು ನಿರ್ದಿಷ್ಟವಾದ ಮಾನದಂಡಗಳನ್ನು ಹೇಳಿವೆ ಎನ್ನುವುದು ಎಲ್ಲರಿಗೂ ಗೊತ್ತಿರುವ ಸಂಗತಿಯು ಆಗಿದೆ. ಅದು ಕೆಲವು ಸೂಚನೆಗಳನ್ನು ರೂಪಿಸಿದೆ. ನಮಗೆ ವೈಚಾರಿಕತೆಯನ್ನು ನಿರ್ದಿಷ್ಟವಾಗಿ ಪರಿಚಯ ಮಾಡಿದ್ದು ಪುನರುಜ್ಜೀವನವೇ ಎನ್ನುವುದು ಇಲ್ಲಿ ಗಮನಾರ್ಹ. ಅದು ಹೊಸದಾದ ಸಂವೇದನೆಯನ್ನು ರೂಪಿಸಿದ್ದು ನಿಜ. ಒಮ್ಮೆ ನೀಶೆಯು ನಮಗೆ ಇತಿಹಾಸ ಮತ್ತು ಅದರ ಪ್ರಜ್ಞೆಯನ್ನು ಕುರಿತು ಕೆಲವು ವಿಚಾರಗಳನ್ನು ಹೇಳುತ್ತಾನೆ: ಚರಿತ್ರೆ ಮತ್ತು ಅದರ ಪ್ರಜ್ಞೆ ಎನ್ನುವುದು ಹೇಗೆ ನಮ್ಮ ಸಂವೇದನೆಯ ಭಾಗವಾಗಿದೆ ಎಂದೂ ತಿಳಿಸುತ್ತಾನೆ. ಚರಿತ್ರೆಯಲ್ಲಿ ನಾವು ನೋಡುವ ದೃಷ್ಟಿಕೋನವು ಹೇಗೆ ಇರುತ್ತದೆ ಎಂದೂ ತಿಳಿಸುವಾಗ ಅವನು ಇತಿಹಾಸಕಾರನಿಗೆ ಸಂದು ಹೋದುದರ ಬಗ್ಗೆ ಕರುಣೆ ಮತ್ತು ಸಹಮತ ಎರಡೂ ಇರಬೇಕಾಗಿಲ್ಲ ಎಂದು ಅವನು ಭಾವಿಸುತ್ತಾನೆ. ಚಾರಿತ್ರಿಕವಾದ ಆಯ್ಕೆ ಮತ್ತು ಚರಿತ್ರೆಯ ಕುರಿತಾದ ಒಂದು ವಿಮರ್ಶಾತ್ಮಕವಾದ ನೋಟವನ್ನು ಅವನು ಅಂಗೀಕರಿಸುತ್ತಾನೆ. ಆದರೆ ಚರಿತ್ರೆ ಎಂದರೆ ಅದು ಸ್ಮಾರಕವಲ್ಲ. ಚರಿತ್ರೆಯು ಕೆಲವು ಸರ್ತಿ ಉಪಯೋಗವನ್ನು ಹೊಂದಿರುತ್ತದೆ. ಮತ್ತೆ ಕೆಲವೊಮ್ಮೆ ಚರಿತ್ರೆಯಿಂದ ನಮಗೆ ಯಾವುದೇ ಉಪಯೋಗವಿಲ್ಲ. ಅದು ಜೀವನಕ್ಕೆ ಒಂದು ಭಾರ ಎಂದು ಹೇಳುವವರೂ ಇದ್ದಾರೆ. ಕಾರಣವನ್ನು ಹೊಂದಿರುವುದು ಮತ್ತು ಯಾವುದೇ ಕಾರಣವು ಇಲ್ಲದೆ ಇರುವುದು ಎನ್ನುವುದಕ್ಕೆ ನಾವು ವಿಶೇಷವಾದ ಅರ್ಥವನ್ನು ಕೊಡಬೇಕಾಗಿಲ್ಲ ಎನ್ನುವುದು ಸತ್ಯ. ಆದರೆ ಈ ಪರಿಕಲ್ಪನೆಗೆ ಅತ್ಯಂತ ಹೆಚ್ಚು ಮಹತ್ವವು ಬಂದಿತು. ಅದು ಬೇರೆ ಪ್ರಶ್ನೆ. ಭೌತಿಕ ಮತ್ತು ಆಧ್ಯಾತ್ಮಿಕ ಎನ್ನುವುದು ಒಂದು ಸರಳವಾದ ದ್ವಂದ್ವವನ್ನು ಹೊಂದಿದೆ. ಅದರ ಚರ್ಚೆಯು ಕೂಡಾ ಆಗ

ಬಂದಿರುವುದು ಕುತೂಹಲದಾಯಕ. ಇದರ ಪರಿಣಾಮವಾಗಿ ಆಧುನಿಕ ಮನುಷ್ಯನ ಕುರಿತು ವಿವಿಧ ವ್ಯಾಖ್ಯೆಗಳು ಬಂದವು. ಜ್ಞಾನ ಮತ್ತು ಅದರ ಹುಡುಕಾಟವು ಹೇಗೆ ಮುಂದೆ ಬಂದಿತು ಎನ್ನುವುದೂ ಎಲ್ಲರಿಗೂ ಗೊತ್ತಿರುವ ಸಂಗತಿ. ಇದರ ಪರಿಣಾಮವು ಚರಿತ್ರೆಯ ಕುರಿತ ದೃಷ್ಟಿಕೋನಗಳಲ್ಲಿಯೂ ನಾವು ಕಾಣಬಹುದು. ವಾಸ್ತವವಾಗಿ ಈವತ್ತು ವ್ಯಕ್ತಿಗೆ ತನ್ನದೇ ಆದ ಒಂದು ಅವಕಾಶ ಮತ್ತು ಕಾಲವು ಇದೆ. ಮನುಷ್ಯನನ್ನು ರೂಪಿಸಲು ಒಂದು ಆಧುನಿಕ ಜ್ಞಾನವೂ ಅತ್ಯಂತ ಮಹತ್ವದ ಕೊಡುಗೆಯನ್ನು ಕೊಟ್ಟಿದೆ. ಅದು ಅತ್ಯಂತ ಮುಖ್ಯ. ಒಂದು ಉದಾಹರಣೆಯನ್ನು ಇಲ್ಲಿ ಕೊಡಬಹುದು: ನಮಗೆ ಮತ್ತೆ ಮರುಹುಟ್ಟು ಇದೆಯೇ? ಈ ಪ್ರಶ್ನೆಯನ್ನು ಆಧ್ಯಾತ್ಮವಾದಿಗಳು ಒಂದು ರೀತಿಯಲ್ಲಿ ಹೇಳುತ್ತಾರೆ. ದೇವರು ಇದ್ದಾನೆಯೇ ಇಲ್ಲವೇ ಎನ್ನುವುದಕ್ಕೆ ಕಾರಣವಾದವು ಒಂದು ಉತ್ತರವನ್ನು ಕೊಡುತ್ತದೆ. ಅದನ್ನು ಹೀಗೆ ಹೇಳಬಹುದು: ಅಸ್ತಿತ್ವ ಮತ್ತು ನಾಸ್ತಿತ್ವ, ಇದೆ ಅಥವಾ ಇಲ್ಲ. ದೇವರು ಕಾಣುವುದಿಲ್ಲ. ಆದ್ದರಿಂದ ಅವನು ಇಲ್ಲ. ದೇವರು ಕಾಣಿಸದೇ ಇದ್ದರೂ ಅವನು ನಮ್ಮ ನಿಯಂತ್ರಣ ಮಾಡುತ್ತಾನೆ. ಹೀಗೆ ಮುಂದುವರೆಯುತ್ತದೆ. ವಿಮರ್ಶಾತ್ಮಕವಾದ ಚರಿತ್ರೆಯ ಕಲ್ಪನೆಯು ಈ ದೃಷ್ಟಿಯಿಂದ ಅನೇಕವನ್ನು ನಮಗೆ ತಿಳಿಸುತ್ತದೆ.

ಚರಿತ್ರೆಯಿಂದ ನಾವು ಕಲಿಯುವುದು ತುಂಬಾ ಇದೆ. ಅದರ ಕುರಿತಾದ ಕಾಳಜಿಯು ನಮಗೆ ಒಂದು ಮುನ್ನೋಟವನ್ನು ಕೊಡುತ್ತದೆ. ಅದರೆ ಅನೇಕರು ಚರಿತ್ರೆಯನ್ನು ವಿವರಿಸುವಾಗ ಅದನ್ನು ಒಂದು ಸಂವಾದಿಯಾದ ತತ್ವ ಎಂದು ಭಾವಿಸುತ್ತಾರೆ ಚರಿತ್ರೆಯಲ್ಲಿ ಒಳ್ಳೆಯದು ಮತ್ತು ಕೆಟ್ಟದ್ದು ಎರಡೂ ಸೇರಿಕೊಂಡಿದೆ. ಅದರಲ್ಲಿ ಕತೆಗಳು ಇವೆ. ಅದರಲ್ಲಿ ನಾಯಕರೂ ಇದ್ದಾರೆ. ಅವರ ಜೊತೆಗೆ ಖಳನಾಯಕರೂ ಇದ್ದಾರೆ. ಎಷ್ಟೋ ಕತೆಗಳಲ್ಲಿ ಸಾಮಾನ್ಯರೂ ಇದ್ದಾರೆ. ಯಾವಾಗ ನಾವು ಚರಿತ್ರೆಯ ಅರಿವು ಇಟ್ಟುಕೊಳ್ಳುತ್ತೇವೆಯೋ ಆಗ ನಮ್ಮ ಸಂವೇದನೆಯು ಬೇರೆಯಾಗುತ್ತದೆ. ಅದು ಅತ್ಯಂತ ಮುಖ್ಯ.. ಕೊನೆಗೆ ಒಂದು ಮಾತನ್ನು ಹೇಳಬೇಕು: ಮಾಸ್ತಿಯವರ ರಂಗಪ್ಪನ ದೀಪಾವಳಿ ಎನ್ನುವ ಕತೆಯನ್ನು ನೆನಪು ಮಾಡಿಕೊಳ್ಳಬೇಕು. ರಂಗಪ್ಪನಂಥ ಅತ್ಯಂತ ಸಾಮಾನ್ಯನೂ ನಮ್ಮ ಚರಿತ್ರೆಯಲ್ಲಿ ಆಗಿದ್ದಾನೆ. ಅವನಿಗೂ ಜೀವನದಲ್ಲಿ ಒಂದು ತತ್ವಜ್ಞಾನ ಮತ್ತು ಕನಸುಗಳು ಇವೆ. ಅವನೂ ಇದೇ ಸಮಾಜದಲ್ಲಿ ಇದ್ದಾನೆ. ಚರಿತ್ರೆಯಲ್ಲಿ ಅಂಥವರೂ ಭಾಗವಹಿಸಿದ್ದಾರೆ. ಅವನಿಗೂ ಒಂದು ಅನನ್ಯತೆಯು ಇದೆ. ನಾವು ಇದನ್ನು ಸಾಂಪ್ರದಾಯಿಕವಾದ ಇತಿಹಾಸಕಾರಂತೆ ನೋಡಬೇಕಾಗಿಲ್ಲ. ಅವನ ಜೀವನದಲ್ಲಿ ದೀಪಾವಳಿಗೆ ಒಂದು ಮಹತ್ವವು ಇದೆ. ರಂಗಪ್ಪ ವ್ಯಕ್ತಿಯೂ ಹೌದು. ಪ್ರತಿಯೊಬ್ಬರಿಗೂ ಇಲ್ಲಿ ಒಂದು ಅಸ್ತಿತ್ವವು ಇರುವುದೂ ಹೌದು.

■

# ಚರಿತ್ರೆಯ ಭಾರದಲ್ಲಿ ಕಾಲಿಡಲು ತೆರಪಿಲ್ಲ

ನಾವು ಯಾವುದನ್ನು ಚರಿತ್ರೆ ಎಂದು ಹೇಳುತ್ತಾ ಬಂದಿದ್ದೇವೆಯೋ ಅದು ನಮ್ಮ ಪ್ರಜ್ಞೆಗೆ ಸಂಬಂಧ ಪಟ್ಟ ವಿಚಾರವೂ ಆಗಿರುವುದು ಸತ್ಯ. ಆದರೆ ಇನ್ನೊಂದು ಅಂಶವನ್ನು ನಾವು ಗಮನಿಸಬೇಕು: ಹತ್ತೊಂಬತ್ತನೆಯ ಶತಮಾನದಲ್ಲಿ ಬೇರೆ ಬೇರೆ ತಿಳುವಳಿಕೆಗಳು ಬಂದ ಮೇಲೆ ನಮಗೆ ದಕ್ಕಿದ ಅನುಭವಗಳು ಒಂದು ರೂಪದಲ್ಲಿ ಇರಲಿಲ್ಲ. ಆದ್ದರಿಂದ ಪರಿಣಾಮ ಎನ್ನುವುದು ಅತ್ಯಂತ ಭಿನ್ನವಾದ ಕತೆಯು ಆಯಿತು. ಆದರೆ ಅಧ್ಯಯನ ಎನ್ನುವುದು ಒಂದು ಶಿಸ್ತು ಕೂಡಾ ಆಯಿತು. ಚರಿತ್ರೆಯು ನಮಗೆ ಜ್ಞಾನವನ್ನು ಕೊಟ್ಟಿದೆ. ಮತ್ತೊಂದು ದೃಷ್ಟಿಯಿಂದ ಚರಿತ್ರೆ ಮತ್ತು ಅದರ ಜ್ಞಾನವು ನಮಗೆ ಒಂದು ಬಗೆಯಲ್ಲಿ ನಿರ್ದಿಷ್ಟವೂ ಹೌದು. ಹಾಗೆ ನೋಡಿದರೆ ಚರಿತ್ರೆಯನ್ನು ಕುರಿತು ನಾವು ಯೋಚನೆಯನ್ನು ಮಾಡುವುದು ಅಂದರೆ ನಾವು ಬೆಳೆದು ಬಂದ ಬಗೆಯನ್ನು ಅರ್ಥಮಾಡಿಕೊಳ್ಳುವುದೂ ಎನ್ನುವುದು ಸತ್ಯ. ಅದು ನಮಗೆ ಮತ್ತೊಂದು ಅರ್ಥದಲ್ಲಿ ನಮ್ಮ ಭೌತಿಕವಾದ ಪರಂಪರೆಯನ್ನು ನೆನಪು ಮಾಡುತ್ತದೆ. ಆದರೆ ಯಾವುದನ್ನು ನಾವು ಚರಿತ್ರೆ ಮತ್ತು ಅದರ ಪ್ರಜ್ಞೆ ಎಂದು ಹೇಳುತ್ತೇವೆಯೋ ಅದರ ಕುರಿತು ಅನೇಕರು ಅನೇಕ ಮಾದರಿಯಲ್ಲಿ ಯೋಚನೆ ಮಾಡಿದ್ದಾರೆ. ಇದರ ಜೊತೆಗೆ ನಾವು ಈಗ ಆಧುನಿಕ ಯುಗದಲ್ಲಿ ವ್ಯಕ್ತಿಯನ್ನೂ, ಮತ್ತು ಅವನ ಪ್ರಜ್ಞೆಯನ್ನು ಒಂದು ಕೇಂದ್ರ ಎಂದು ತಿಳಿದಿದ್ದೇವೆ. ಚರಿತ್ರೆ ಮತ್ತು ಅದರ ಪ್ರಜ್ಞೆ ಎನ್ನುವುದು ಹೇಗೆ ನಮಗೆ ಸಾಹಿತ್ಯ ಮತ್ತು ಇತರ ಜ್ಞಾನಶಾಖೆಗಳಲ್ಲಿ ಅತ್ಯಂತ ಮಹತ್ವವಾಗಿದೆ ಎಂದು ಅನೇಕ ಚಿಂತಕರು ಹೇಳಿದ್ದಾರೆ. ಅವರಲ್ಲಿ ಫುಕೋ ಕೂಡಾ ಒಬ್ಬ. ಚರಿತ್ರೆ ಮರು ರೂಪೀಕರಣಕ್ಕೆ ಕಥನವು ಹೇಗೆ ಉಪಯುಕ್ತವಾಗಿದೆ ಎಂದು ಇದು ನಮಗೆ ಅತ್ಯಂತ ಮುಖ್ಯ. ಇದನ್ನು ಒಂದು ತಾತ್ವಿಕವಾದ ಒಂದು ಅಧ್ಯಯನದ ಕ್ರಮವೆಂದೂ ಹೇಳಬಹುದು. ಈ ಬಗೆಯನ್ನು ಒಂದು ವಿದ್ಯಮಾನದ ಶಾಸ್ತ್ರವೆಂದೂ ಹೇಳಬಹುದು.. ಚರಿತ್ರೆಯ ಮತ್ತು ಅದರ ಕಲ್ಪನೆಗೆ ಅತ್ಯಂತ ಆಳವಾದ ಒಂದು ರೂಪವು ಇದೆ. ಯುರೋಪ್ ಒಂದು ಹಂತದಲ್ಲಿ ಚರಿತ್ರೆ ಮತ್ತು ಅದರ

ಗ್ರಹಿಕೆಗೆ ಬೇಕಾದ ಒಂದು ವಿಶಿಷ್ಟವಾದ ಆಯಾಮವನ್ನು ಕೊಟ್ಟಿತು ಎನ್ನುವುದು ಸತ್ಯ. ಅದರ ಜೊತೆಗೆ ಎರಡನೆಯ ಹಂತದಲ್ಲಿ ಅದು ಚರಿತ್ರೆ ಮತ್ತು ಅದರ ಅಧ್ಯಯನದಲ್ಲಿ ಒಂದು ಸಂಸ್ಕೃತಿಯನ್ನು ಗ್ರಹಿಸಲಿಕ್ಕೆ ಬೇಕಾದ ಪರಿಕರಗಳೂ ಸಿದ್ಧವಾದವು. ಸಂಸ್ಕೃತಿ ಮತ್ತು ನಾಗರಿಕತೆ ಹಾಗೂ ಚರಿತ್ರೆಗಳ ಹೊಸದಾದ ಪಯಣಗಳು ಹೇಗೆ ನಮಗೆ ಅಗತ್ಯವಾಗುತ್ತದೆ ಎನ್ನುವುದನ್ನು ಇದು ಹೇಳಿತು ಚರಿತ್ರೆ ಎನ್ನುವುದಕ್ಕೆ ಒಂದು ಕ್ರಿಯಾತ್ಮಕವಾದ ರೂಪವೂ ಇದೆ. ಆದ್ದರಿಂದ ಅದು ನಿರ್ದಿಷ್ಟವಾದ ನಿರೂಪಣೆಗೆ ಗುರಿಯಾಗುತ್ತದೆ. ಚರಿತ್ರೆಯನ್ನು ನಾವು ಕತೆಯಂತೆ ಹೇಳುತ್ತಿದ್ದೇವೆ. ಇತಿಹಾಸಕಾರರು ಚರಿತ್ರೆಯನ್ನು ಕತೆ ಹೇಳುವಂತೆ ಹೇಳದೆ ವಿಧಿಯಿಲ್ಲ. ಅದರ ಜೊತೆಗೆ ಅದು ಒಂದು ಸಂವಾದವನ್ನು ಹೇಳುತ್ತದೆ. ಪ್ರತಿಯೊಬ್ಬ ಇತಿಹಾಸಕಾರನೂ ತನ್ನದೇ ಆದ ಒಂದು ಸಂವಾದವನ್ನು ರೂಪಿಸಿಕೊಳ್ಳುತ್ತಾನೆ. ಅವನು ಹೇಳುವ ಕತೆಗಳು ಅವನ ನಿಲುವನ್ನು ಹೇಳುತ್ತವೆ ಮಾತ್ರವೇ ಅಲ್ಲ, ಅವುಗಳು ನಮಗೆ ಒಂದು ಕಲ್ಪನೆಯನ್ನು ಹೇಳುತ್ತದೆ. ವಿವರಣೆ ಮತ್ತು ಅದರ ಪ್ರಾತಿನಿಧಿಕತೆಗೆ ಒಂದು ನಿರ್ದಿಷ್ಟವಾದ ಆಯಾಮವೂ ಇರುತ್ತದೆ. ಈಗಾಗಲೇ ಚರಿತ್ರೆಯನ್ನು ಹೇಳಿ ಮುಗಿಸಿದ್ದಾರೆ ಎಂದು ಭಾವಿಸಬೇಕಾದ ಅಗತ್ಯವಿಲ್ಲ. ಇತಿಹಾಸವು ನಮಗೆ ಅನೇಕ ಚಿಂತನೆಗಳನ್ನು ಹೇಳುತ್ತವೆ. ಆದರೆ ಅದರಲ್ಲಿ ಅನೇಕ ಘಟನೆಗಳೂ ಇರುತ್ತವೆ ಎನ್ನುವುದು ಸತ್ಯ. ಚರಿತ್ರೆಯಲ್ಲಿ ಯಾವುದು ನಿಜವಾಗಿಯೂ ಪ್ರಾತಿನಿಧಿಕವಾಗಿದೆ ಎನ್ನುವುದು ಅತ್ಯಂತ ಮುಖ್ಯ. ಚರಿತ್ರೆಯಲ್ಲಿ ಎಲ್ಲವೂ ನಿಜವಾದ ಅರ್ಥದಲ್ಲಿ ಪ್ರಾತಿನಿಧಿಕವಾಗಿ ಇರುವುದಿಲ್ಲ. ಕೆಲವು ದಿನಗಳಲ್ಲಿ ಕರಗುತ್ತವೆ. ಅದನ್ನು ನೋಡಲು ನಮಗೆ ಸರಿಯಾದ ಆವರಣಗಳು ಇಲ್ಲ. ಚರಿತ್ರೆಯ ರಚನನೆಗಳು ತಮ್ಮದೇ ಆದ ಆಂಶಿಕ ಸಂಗತಿಗಳನ್ನು ಇಟ್ಟುಕೊಂಡಿರುತ್ತವೆ. ನಾವು ಯಾವ ಮಾಹಿತಿಯನ್ನು ಸಂಗ್ರಹ ಮಾಡುತ್ತೇವೆ ಮತ್ತು ಆ ಮಾಹಿತಿಯನ್ನು ಇಟ್ಟುಕೊಂಡು ನಾವು ಯಾವುದನ್ನು ಚರ್ಚೆ ಮಾಡುತ್ತೇವೆ ಎನ್ನುವುದು ಅತ್ಯಂತ ಮುಖ್ಯ. ಮಾಹಿತಿಯನ್ನು ತೆಗೆದುಕೊಳ್ಳುವಾಗ ಅದರ ನಿರೂಪಣೆಯು ಬೇರೆಯಾಗುತ್ತದೆ. ಮಾಹಿತಿ ಎನ್ನುವುದು ನಮಗೆ ಒಂದು ಆಕರವು ಮಾತ್ರವೇ ಆಗಿರುತ್ತವೆ. ಹೇಗೆ ಇದ್ದರೂ ನಮ್ಮ ಇತಿಹಾಸ ಮತ್ತು ಅದರ ಸ್ವರೂಪವನ್ನು ನಾವು ವಿವಿಧ ರೀತಿಯಲ್ಲಿ ಕ್ರೋಢೀಕರಣ ಮಾಡಲು ಸಾಧ್ಯವು ಇದೆ. ಚರಿತ್ರೆ ಮತ್ತು ಅದರ ಅಧ್ಯಯನವು ನಮಗೆ ಈ ದೃಷ್ಟಿಯಿಂದ ಅತ್ಯಂತ ಮುಖ್ಯವಾಗಿದೆ. ಆದರೆ ಒಂದು ಅಂಶವಂತೂ ಸತ್ಯ. ಚರಿತ್ರೆಯಲ್ಲಿ ನಿರ್ದಿಷ್ಟವಾದ ರಚನೆ ಮತ್ತು ಅದರಲ್ಲಿ ಒಂದು ಏಕತೆಯು ಇರುತ್ತದೆ. ಚರಿತ್ರೆಯು ಏನು ಆಗಿದೆಯೋ ಅದನ್ನು ಹೇಳುತ್ತದೆ. ಅದರಲ್ಲಿ ನಿರ್ದಿಷ್ಟವಾದ ಒಂದು ಧ್ವನಿಯೂ ಇದೆ. ಮತ್ತೊಂದು ಅರ್ಥದಲ್ಲಿ ಅದು ಚರಿತ್ರೆಯನ್ನು ಅನುಕ್ರಮವಾಗಿ ಹೇಳುತ್ತದೆ. ಆದರೆ ಅದು ನಿರೂಪಣೆಗೆ ಒಳಗಾಗುವಾಗ ಅದರಲ್ಲಿ ಕೆಲವು ಸತ್ಯವಾದ ಸಂಗತಿಯು ಇರುತ್ತದೆ.

ಹೀಗಾಗಿ ಚರಿತ್ರೆಯು ನಿಂತ ನೀರಲ್ಲ. ಅದರ ಚಲನಶೀಲವಾದ್ದು ಎನ್ನುವುದು ನಿಜ. ಆದ್ದರಿಂದ ಅದರ ಸ್ವರೂಪವನ್ನು ಆಯಾ ಸನ್ನಿವೇಶಕ್ಕೆ ಅನುಸಾರವಾಗಿ ಹೇಳುತ್ತಾರೆ, ಚರಿತ್ರೆಯನ್ನು ನಿರೂಪಿಸುವಾಗ ನಾವು ಮಾಡುವ ಒಂದು ಮುಖ್ಯವಾದ ತಂತ್ರವೆಂದರೆ ಅದರಲ್ಲಿ ಕಾಲ ಮತ್ತು ಸ್ಥಳವನ್ನು ನೋಡುವುದು. ಇದು ಅತ್ಯಂತ ಅಗತ್ಯ. ಯಾವುದು ಚರಿತ್ರೆಯಲ್ಲಿ ಮುಕ್ತವಾದ ಒಂದು ನಿಲುವು ಎಂದು ಹೇಳುತ್ತೇವೆಯೋ ಅದು ಎಲ್ಲಿಂದಲೋ ಪ್ರಾರಂಭವಾಗುತ್ತದೆ. ಅದನ್ನು ಎಲ್ಲಿಯೋ ಮುಕ್ತಾಯ ಮಾಡಬೇಕಾಗುತ್ತದೆ. ಈ ಕಾರಣದಿಂದ ಅದು ತೆರೆದ ಪಠ್ಯವೂ ಹೌದು. ಹಿದೇನ್ ವೈಟ್ ಅದನ್ನು ಹೇಳುವಾದ ಅದನ್ನು ಉದ್ಘಾಟನೆ ರಹಿತವಾದ್ದು ಎಂದು ಹೇಳುತ್ತಾನೆ. ಚರಿತ್ರೆಯು ಪ್ರಾರಂಭವಾಗುತ್ತದೆ. ಆದರೆ ಅದು ಮುಕ್ತಾಯವಾಗುವುದಿಲ್ಲ. ಅನೇಕ ಇತಿಹಾಸಕಾರರು ನಾವು ಹುಡುಕಿದೆವು ಎಂದು ಹೇಳುತ್ತಾರೆ. ಮತ್ತೆ ಕೆಲವರು ನಾವು ಚರಿತ್ರೆಯ ನಿರ್ದಿಷ್ಟವಾದ ಸಂಗತಿಯನ್ನು ಗುರುತಿಸಿದೆವು ಎಂದು ಭಾವಿಸುತ್ತಾರೆ. ಯಾವುದು ನಮ್ಮ ಮೇಲುನೋಟದ ಕಣ್ಣಿಗೆ ಕಾಣುವುದಿಲ್ಲವೋ ಅದನ್ನು ಅವರು ತಾವು ಗುರುತಿಸಿದೆವು ಎಂದು ಹೇಳಿಕೊಳ್ಳುತ್ತಾರೆ. ಆದರೆ ಚರಿತ್ರೆ ಮತ್ತು ಅದರ ಹುಡುಕಾಟ ಎನ್ನುವುದು ಒಂದು ಅರ್ಥದಲ್ಲಿ ಅತ್ಯಂತ ಪ್ರಜ್ಞಾ ಪೂರ್ವಕವಾದ ಪ್ರಕ್ರಿಯೆ. ಕತೆಯನ್ನು ಹೇಳುವವರು ಕಥನ ಮತ್ತು ಅದರ ಆಶಯವನ್ನು ಹಾಗೂ ಅದರ ಸಂವಿಧಾನವನ್ನು ಒಂದು ಲಗತ್ತು ಎನ್ನುವಂತೆ ತಿಳಿಯುತ್ತಾರೆ. ಮೊಸರಿನ ಮಂಗಮ್ಮ ಕತೆಯನ್ನು ನೋಡಿದರೆ ಈ ಮಾತಿನ ಅರ್ಥವು ತಿಳಿಯುತ್ತದೆ. ಅದರಲ್ಲಿ ಕಥನ ಮತ್ತು ಅದರ ಆಶಯವು ಇದ್ದು ಅದನ್ನು ಕೇಂದ್ರ ಮಾಡಲಾಗಿದೆ. ಅದಕ್ಕೆ ಅನುಗುಣವಾಗಿ ನಿರೂಪಣೆ ಮಾಡಲಾಗುತ್ತದೆ. ಚರಿತ್ರೆಯು ಹಾಗಲ್ಲ. ಅದರ ಈಗಾಗಲೇ ರಚಿತವಾಗಿದೆ. ಅದನ್ನು ಇತಿಹಾಸಕಾರನು ಹೇಳುತ್ತಾನೆ. ಕಥನವನ್ನು ಹೇಳುವವನು ತನಗೆ ಯಾವುದು ಹೆಚ್ಚು ಅನುಕೂಲವಾಗುತ್ತದೆಯೋ ಅದನ್ನು ಮಾತ್ರವೇ ನಿರೂಪಿಸುತ್ತಾನೆ. ಚರಿತ್ರೆಕಾರನು ಕೆಲವು ಸಮಸ್ಯೆಯನ್ನು ತನ್ನ ಮುಂದೆ ಇಟ್ಟುಕೊಳ್ಳಬೇಕಾಗುತ್ತದೆ. ಅದನ್ನು ಅವನು ಒಂದು ಸಮಸ್ಯೆ ಎಂದು ಪರಿಗಣಿಸುತ್ತಾನೆ. ಚರಿತ್ರೆಯಲ್ಲಿ ಕಥನ ಮತ್ತು ಅದರ ಸ್ವರೂಪವನ್ನು ನಾವು ಬೇರೆ ಥರ ನೋಡಬೇಕಾಗುತ್ತದೆ. ಯಾವುದೇ ಒಂದು ಸಂಗತಿಯು ಹೇಗೆ ಆಗಿದೆ, ಅದರ ಅರ್ಥವು ಏನು, ಅದು ಯಾಕೆ ಹಾಗೆ ಆಗಿದೆ, ಅದು ಹೇಗೆ ಮುಕ್ತಾಯವಾಗಿದೆ ಎನ್ನುವುದು ಚರಿತ್ರೆಕಾರನಿಗೆ ಅತ್ಯಂತ ಮುಖ್ಯ. ಅವನಿಗೆ ವಿವರಣೆಯು ಅತ್ಯಂತ ಅಗತ್ಯ. ಚರಿತ್ರೆಯಲ್ಲಿ ಸಂಸ್ಕೃತಿಯನ್ನು ನಾವು ಬೇರೆ ಬೇರೆ ಅರ್ಥದಲ್ಲಿ ನೋಡಿದ್ದೇವೆ. ನಾಗರಿಕತೆಗೆ ಮತ್ತು ಸಂಸ್ಕೃತಿಗೆ ಇರುವ ಸಂಬಂಧವನ್ನು ರೇಮಾಂಡ್ ವಿಲಿಯಂಸ್ ಹೇಳಿದ್ದಾನೆ. ಈವತ್ತು ಸಂಸ್ಕೃತಿಯಲ್ಲಿ ಪ್ರದರ್ಶನ ಮತ್ತು ಅದರ ಸಾಧ್ಯತೆಯು ಬೇರೆಯಾಗಿದೆ ಎನ್ನುವುದೂ ಅವನ ನಿಲುವು.



# ಚರಿತ್ರೆಯಲ್ಲಿ ಜೋಡಣೆಗಳು

ವಾಸ್ತವವಾಗಿ ಚರಿತ್ರೆಯಲ್ಲಿ ಸಂಯೋಜನೆಯು ಅತ್ಯಂತ ಮುಖ್ಯವಾದ ಒಂದು ಪಾತ್ರವನ್ನು ವಹಿಸುತ್ತದೆ. ಅದು ವಿವರಣೆಯ ಪ್ರಶ್ನೆಯೂ ಹೌದು. ಸನ್ನಿವೇಶಕ್ಕೆ ಅನುಸಾರವಾಗಿ ಇದು ಬದಲಾಗುತ್ತದೆ ಇದನ್ನು ಹೀಗೆಯೂ ಹೇಳಬಹುದು– ಚರಿತ್ರೆಯಲ್ಲಿ ಕೆಲವನ್ನು ನಾವು ನೋಡುವಾಗ ಅದರಲ್ಲಿ ದುರಂತ ಮತ್ತು ಅದರ ಛಾಯೆಯು ಇರಲು ಸಾಧ್ಯ. ಅದು ಯಾವುದನ್ನು ಹೇಳುತ್ತಾನೆಯೋ ಅದರ ಸ್ವರೂಪಕ್ಕೆ ಅನುಸಾರವಾಗಿ ಜೋಡಣೆಗಳು ಬೇರೆಯಾಗಬಹುದು. ಚರಿತ್ರೆಯನ್ನು ಹೇಳುವಾಗ ಅದರಲ್ಲಿ ಸುಖಾಂತ ಮತ್ತು ದುಃಖಾಂತ ಎರಡೂ ಇರಲು ಸಾಧ್ಯವಿದೆ. ಒಬ್ಬ ರಾಜನು ಮತ್ತೊಂದು ರಾಜ್ಯಕ್ಕೆ ದಂಡೆತ್ತಿ ಹೋದರೆ ಅದರಲ್ಲಿ ಬರೀ ಹೋರಾಟವು ಮಾತ್ರವೇ ಇರುವುದಿಲ್ಲ. ಅದರ ಜೊತೆಗೆ ಅದರಲ್ಲಿ ಮತ್ತೊಂದು ರಾಜ್ಯದ ದುಃಖದ ಕತೆಯಿರುತ್ತದೆ. ತೆನಾಲಿ ರಾಮಕೃಷ್ಣನ ಕತೆಗಳು ಈವತ್ತು ನಮಗೆ ಒಂದು ವೈನೋದಿಕವಾದ ಸಂಗತಿಯನ್ನು ಹೇಳುತ್ತದೆ. ಇಲ್ಲಿ ನಾರ್ಥ್‌ಪ್ರೈಯನ್ನು ನೆನಪು ಮಾಡಿಕೊಳ್ಳಬೇಕು: ಅವನು ರಮ್ಯ, ದುರಂತ, ವೈನೋದಿಕ, ವ್ಯಂಗ್ಯಗಳನ್ನು ಬೇರೆ ಥರ ಎಂದು ಹೇಳುತ್ತಾನೆ. ಇದರಲ್ಲಿ ನಿರೂಪಣೆ ಎನ್ನುವುದು ಮಹಾಕಾವ್ಯಗಳು ಒಂದು ಹಂತದಲ್ಲಿ ನಮಗೆ ಚರಿತ್ರೆ ಮತ್ತು ಅದರ ಭಿನ್ನವಾದ ರೂಪವನ್ನು ಹೇಳುತ್ತದೆ. ಪಂಪನ ಕಾವ್ಯದಲ್ಲಿ ಅರಿಕೇಸರಿಯನ್ನು ಕುರಿತು ಹೇಳಿದ. ಅರ್ಜುನ ಒಂದು ನೆವನ ಮಾತ್ರವೇ ಆಗಿದ್ದಾನೆ. ಒಂದು ಕ್ರಮವು ಮತ್ತೊಂದು ಕ್ರಮದ ಕಡೆಗೆ ಹೋಗುವುದನ್ನು ಇದು ಹೇಳುತ್ತದೆ. ರಾಜರು ಮತ್ತು ಅವರ ದಿಗ್ವಿಜಯ ಎನ್ನುವುದು ಒಂದು ಪ್ರಾಗ್ರೂಪವೂ ಆಗಿರುವುದು ಸತ್ಯ. ದ್ವಿಗ್ವಿಜಯದ ಕಥನಗಳು ಹಾಸ್ಯವನ್ನು ಹೇಳಲು ಸಾಧ್ಯವೇ ಇಲ್ಲ. ಅದರಲ್ಲಿ ವಿಷಾದವೂ ಇರುತ್ತದೆ. ಯಾವುದೆ ಮಹಾಕಾವ್ಯದಲ್ಲಿ ನಮಗೆ ಮತ್ತೊಂದು ಅಂಶವು ನಮ್ಮ ಗಮನವನ್ನು ಸೆಳೆಯುತ್ತದೆ. ಅದು ಕಾಲವನ್ನು ಅತ್ಯಂತ ವಿಶಾಲವಾಗಿ ಬಳಸುವ ಕ್ರಮ. ಚರಿತ್ರೆಯು ಯಾವತ್ತೂ ಒಂದು ಅರ್ಥದಲ್ಲಿ ಸನ್ನಿವೇಶವನ್ನು

ಹೇಳುತ್ತದೆ. ಆಯ್ಕೆ ಮತ್ತು ರಚನೆಗೆ ಇರುವ ಸಂಬಂಧಗಳನ್ನು ನಾವು ನಿರಾಕರಿಸಲು ಬರುವುದಿಲ್ಲ. ವಾಸ್ತವವಾಗಿ ನಾವು ಯಾವುದನ್ನು ಹೇಗೆ ನಿರೂಪಣೆ ಮಾಡುತ್ತೇವೆಯೋ ಅದಕ್ಕೆ ಅನುಸಾರವಾಗಿ ನಮ್ಮ ಬರಹಗಳು ರೂಪುಗೊಳ್ಳುತ್ತವೆ. ಈಕಾರದಿಂದ ಯಾವುದನ್ನು ನಾವು ಹಾಸ್ಯ ಮತ್ತು ದುರಂತ ಎಂದು ಹೇಳುತ್ತೇವೆಯೋ ಅದರ ಸ್ವರೂಪಗಳನ್ನು ನಾವು ನಿರ್ದಿಷ್ಟವಾದ ಅರ್ಥದಲ್ಲಿ ಬಳಸಬೇಕಾಗುತ್ತದೆ. ಒಂದು ಹಂತದಲ್ಲಿ ಧಾರ್ಮಿಕರು ಸಾಹಿತ್ಯವನ್ನು ವರ್ಗೀಕರಣ ಮಾಡುವಾಗ ಅದರ ಸ್ವರೂಪವನ್ನು ಐತಿಹ್ಯ ಮತ್ತು ಅಭಿಜಾತ ಪರಂಪರೆಯನ್ನು ಬೇರೆ ಮಾಡಿದರು ಎನ್ನುವುದೂ ಅಷ್ಟೇ ಸತ್ಯ. ಪ್ರತಿಯೊಂದು ಸಾಹಿತ್ಯವು ಒಂದು ಹಂತದಲ್ಲಿ ತನ್ನ ಅನನ್ಯತೆಯನ್ನು ತಾನು ಉಳಿಸಿಕೊಳ್ಳುತ್ತದೆ ಚರಿತ್ರೆಯನ್ನು ಆಧಾರ ಮಾಡಿಕೊಂಡ ಕಾವ್ಯವನ್ನು ಐತಿಹ್ಯ ಎಂದು ಕರೆದರು. ಆದರೆ ಯಾವುದು ಭೂಮಿ ಮತ್ತು ಸ್ವರ್ಗಗಳನ್ನು ಒಳಗೊಂಡ ಕಾವ್ಯಗಳನ್ನು ಮಹಾಕಾವ್ಯಗಳು ಎಂದು ಕರೆದರು. ಬಹುತೇಕ ಸಾಹಿತ್ಯದ ವಿದ್ವಾಂಸರು ಸಾಹಿತ್ಯವನ್ನು ನೋಡುವಾಗ ಅದರ ರಚನೆಯನ್ನು ನೋಡುವುದರ ಜೊತೆಗೆ ಅದರ ಆಂತರಿಕವಾದ ಎಳೆಯನ್ನು ಗಮನಿಸುತ್ತಿದ್ದಾರೆ. ಕ್ರಿಶ್ಚಿಯನ್ ಸಾಹಿತ್ಯದಲ್ಲಿ ಐತಿಹ್ಯ ಮತ್ತು ಅಭಿಜಾತ ಎನ್ನುವುದು ಬೇರೆ ಎನ್ನುವ ಕಲ್ಪನೆಯು ಇದೆ. ಪಂಪ ಹೇಳಿದ ಕತೆಯನ್ನು ರಾಜರಿಗೆ ಅನ್ವಯ ಮಾಡುತ್ತೇವೆ. ಅದರ ಜೊತೆಗೆ ಅದರಲ್ಲಿ ಜೀವನದ ಬೇರೆ ಬೇರೆ ಮುಖಗಳೂ ಇವೆ. ಆದರೆ ಅದೇ ರೀತಿಯ ಭಾವನೆಗಳು ನಮಗೆ ಬೇಂದ್ರೆಯವರಲ್ಲಿ ಸಿಗುವುದಿಲ್ಲ. ಬೇಂದ್ರೆಯವರು ಬೇರೆ ರೀತಿಯಲ್ಲಿ ಕಾವ್ಯವನ್ನು ಹೇಳುತ್ತಾರೆ ಇದರಲ್ಲೂ ನಾಯಕ ಮತ್ತು ನಾಯಕಿಯರು ಇದ್ದಾರೆ. ಅದರ ಚರಿತ್ರೆಯು ಬೇರೆ. ಬೇಂದ್ರೆಯವರು ವಿವಿಧ ಕಥನಗಳನ್ನು ಹೆಚ್ಚು ರೊಮಾಂಟಿಕ್ ಆಗಿ ಹೇಳುತ್ತಾರೆ. ನಿಜ ಎನ್ನುವುದು ಇಲ್ಲಿ ಉದಾತ್ತವಾದ ಅರ್ಥವನ್ನು ಪಡೆಯುತ್ತದೆ ಎನ್ನುವುದೂ ನಿಜ. ಚರಿತ್ರೆಯು ಇಲ್ಲಿ ಬೇರೆಯಾಗುತ್ತದೆ. ಬೇಂದ್ರೆಯವರಲ್ಲಿ ಒಂದು ನಾಟಕೀಯತೆಯು ಇದೆ. ಇಲ್ಲಿ ಮತ್ತೊಂದು ಸಂಗತಿಯನ್ನು ಹೇಳಬೇಕು: ತೇಜಸ್ವಿಯವರಲ್ಲಿ ಬರುವ ತಬರನು ಮೂಡಿಗೆರೆಗೆ ಸೇರಿದವನು. ಆದರೆ ಅವನಂಥವರು ಅನೇಕರು ಆಗಿದ್ದಾರೆ. ಅವರಿಗೆ ಸ್ವಾತಂತ್ರ್ಯ ಇತ್ಯಾದಿ ಗೊತ್ತಾಗುವುದಿಲ್ಲ. ಎರಡೂ ಬರಹಗಳು ನಮಗೆ ವಿಭಿನ್ನವಾದ ಅನುಭವವನ್ನು ಹೇಳುತ್ತದೆ. ದುರಂತ ಮತ್ತು ಕಾಮಿಡಿ ಎನ್ನುವುದು ನಮಗೆ ಬೇರೆ ಬೇರೆ ಸೂಚನೆಗಳನ್ನು ಕೊಡುತ್ತವೆ. ರನ್ನನ ಸಾಹಸಭೀಮ ವಿಜಯವನ್ನು ಇಲ್ಲಿ ಉಲ್ಲೇಖಿಸಬೇಕು: ಅದರಲ್ಲಿ ಅತ್ಯಂತ ದಟ್ಟವಾದ ನೋವು ಮತ್ತು ವಿಷಾದವು ಇದೆ. ಒಂದು ಸೋಲು ಮತ್ತು ಅತ್ಯಂತ ತೀವ್ರವಾದ ಒಂದು ದುಃಖವು ಕೌರವನನ್ನು ಆವರಿಸಿದೆ. ಅವನು ನೋವಿನಲ್ಲಿ ಇದ್ದಾನೆ, ಎಲ್ಲವನ್ನು ಕಳೆದು ಕೊಂಡಿದ್ದಾನೆ.

ತನ್ನವರ ಹೆಣ ನೋಡಿದ್ದಾನೆ. ಸೋಲು ಅವನನ್ನು ಹತಾಶೆಗೆ ಗುರಿ ಮಾಡಿದೆ. ರಣರಂಗದಲ್ಲಿ ಏಕಾಂಗಿಯಾಗಿ ಹೊರಟಿದ್ದಾನೆ. ಕಳೆದು ಕೊಂಡವರಿಗೆ ಮಾತ್ರವೇ ಆ ದುಃಖವು ಅರ್ಥವಾಗುತ್ತದೆ. ಆದರೆ ಅದರಲ್ಲಿ ಬರುವ ಕೌರವನು ಮತ್ತೊಂದು ಅರ್ಥದಲ್ಲಿ ವಿಶಿಷ್ಟನಾದ ವ್ಯಕ್ತಿ. ಅವನು ಖಳನಾಯಕ. ಅವನು ಧರ್ಮವನ್ನು ಒಪ್ಪಿಕೊಂಡವನು ಅಲ್ಲ. ನಮಗೆ ಸಾಹಸಭೀಮ ವಿಜಯವನ್ನು ಓದುವಾಗ ನಗು ಬರಲು ಸಾಧ್ಯವೇ ಇಲ್ಲ. ಕುಮಾರವ್ಯಾಸನ ಉತ್ತರನ ಪ್ರಸಂಗವನ್ನು ಓದಿದರೆ ನಮಗೆ ನಗೆಯು ಬಂದೇ ಬರುತ್ತದೆ. ಎರಡರ ಸಂದರ್ಭವು ಬೇರೆ ಎನ್ನುವುದು ನಿಜ. ಆದರೆ ಉತ್ತರನ ಪೌರುಷವು ನಮಗೆ ನಗೆಯುಕ್ಕಿಸುತ್ತದೆ. ಪ್ರಸಂಗವೇ ಹಾಗೆ ಇದೆ. ಕೌರವನು ಬಿದ್ದ ಮನುಷ್ಯ. ಆದರೆ ಉತ್ತರನು ಬಿದ್ದ ಮನುಷ್ಯನಲ್ಲ. ಅವನು ತನ್ನ ಅಸ್ತಿತ್ವವನ್ನು ಬೇರೆ ಥರ ನಿರೂಪಿಸಿದವನೂ ಹೌದು. ಒಂದು ಮನುಷ್ಯನ ಛಲ ಮತ್ತು ಅಹಂಕಾರ ಹಾಗೂ ಅವನತಿಯನ್ನು ಹೇಳುತ್ತದೆ. ಆದರೆ ಮತ್ತೊಂದು ಮನುಷ್ಯನೇ ಹೇಗೆ ನಗೆಪಾಟಲಿಗೆ ಗುರಿಯಾಗುತ್ತಾನೆ ಎನ್ನುವುದನ್ನು ಹೇಳುತ್ತದೆ. ಆದರೆ ಎರಡೂ ಭಿನ್ನವಾದ ಪ್ರಕ್ರಿಯೆಗಳು ಮತ್ತು ಪರಿವರ್ತನೆಯ ಸೂಚನೆಗಳು ಎನ್ನುವುದು ಸತ್ಯ. ಇದನ್ನು ನಾವು ಹಾಸ್ಯ ನಾಟಕಗಳು ಮತ್ತು ದುರಂತ ನಾಟಕಗಳಿಗೂ ಅನ್ವಯವನ್ನು ಮಾಡಬಹುದು. ಸಾಹಿತ್ಯದಲ್ಲಿ ರೊಮ್ಯಾಂಟಿಕ್ ಪರಂಪರೆಯು ಕೂಡಾ ತನ್ನದೇ ಆದ ಒಂದು ಚರಿತ್ರೆಯನ್ನು ರೂಪಿಸಿದೆ. ಅದನ್ನು ಚರಿತ್ರೆಯ ಕುರಿತಾದ ಒಂದು ಪ್ರತಿಕ್ರಿಯೆ ಎಂದೂ ಹೇಳಬಹುದು. ಅದು ಮನುಷ್ಯ ಮತ್ತು ಅವನ ಸತ್ಯವನ್ನು ಹೇಳುತ್ತದೆ. ಸಾಹಿತ್ಯದಲ್ಲಿ ವ್ಯಂಗ್ಯ ಮತ್ತು ದುರಂತಗಳೂ ಕೂಡಾ ಚರಿತ್ರೆಯನ್ನು ಕುರಿತು ಹೇಳಿವೆ. ಸಾಹಿತ್ಯ ಎನ್ನುವುದು ಹೀಗೆ ವಿವಿಧ ರೀತಿಯಲ್ಲಿ ಚರಿತ್ರೆಗೆ ಪ್ರತಿಕ್ರಿಯೆನ್ನು ಕೊಡುತ್ತದೆ. ಅದು ಇರುವುದು ಮಾತ್ರ ಬೇರೆ ಬೇರೆ ರೀತಿಯಲ್ಲಿ ಎನ್ನುವುದು ಸ್ಪಷ್ಟ. ಸಮಾಜವು ವಿಕಾಸವಾಗುತ್ತಾ ಹೋದಂತೆ ಸಾಹಿತ್ಯವು ಚರಿತ್ರೆಗೆ ಪ್ರತಿಕ್ರಿಯೆ ಕೊಡುವ ವಿಧಾನವೂ ಬದಲಾಗುತ್ತದೆ. ಚರಿತ್ರೆಯು ಬದಲಾಗುತ್ತದೆ. ಅದರ ಜೊತೆಗೆ ಸಾಹಿತ್ಯವನ್ನು ಕುರಿತು ನಾವು ನೋಡುವ ಕ್ರಮಗಳೂ ಬದಲಾಗುತ್ತವೆ. ಚರಿತ್ರೆಯಲ್ಲಿ ವಿವಿಧ ರೀತಿಯ ಜೋಡಣೆಗಳು ಇರುತ್ತವೆ. ಅದನ್ನು ಕೇವಲ ಒಂದು ಭಾಗವು ಮಾತ್ರ ಎಂದು ಹೇಳುವಂತೆ ಇಲ್ಲ. ಯಾವುದನ್ನು ಚರಿತ್ರೆಯಲ್ಲಿ ಒಂದು ನಿರ್ದಿಷ್ಟವಾದ ಘಟಕ ಎಂದು ಹೇಳುತ್ತೇವೆಯೋ ಅದರ ರೂಪಕ್ಕೆ ಹಿಂದೆ ಮತ್ತು ಮುಂದೆ ಎನ್ನುವುದು ಇರುತ್ತದೆ. ಅಷ್ಟೇ ಅಲ್ಲ ಅದರ ಜೊತೆಗೆ ಚರಿತ್ರೆಯಲ್ಲಿ ನಮಗೆ ಯಾವುದು ಕಾಣುತ್ತದೆಯೋ ಅದರ ರೂಪಕ್ಕೂ ಅದರ ಹಿಂದೆ ಯಾವುದು ಇದೆಯೋ ಅದಕ್ಕೂ ಒಂದು ನಿರ್ಣಾಯಕವಾದ ಸಂವಹನವು

ಇರುತ್ತದೆ. ಮಾಹಿತಿ ಮತ್ತು ಅದರ ಲಭ್ಯತೆ ಎನ್ನುವುದು ಒಂದು ಅಂಕದ ನಾಟಕವಲ್ಲ. ಅದು ಅನೇಕ ರೀತಿಯಲ್ಲಿ ಇರಲು ಸಾಧ್ಯವಿದೆ. ಆದರೆ ಇಲ್ಲಿ ಮತ್ತೊಂದು ವಿಚಾರವನ್ನು ನಾವು ಕಾಣಬೇಕಾಗುತ್ತದೆ. ಚರಿತ್ರೆ ಎನ್ನುವುದು ಅನೇಕ ನೆಯ್ಗೆಗಳನ್ನು ಹೊಂದಿರುತ್ತವೆ. ಅದನ್ನು ಹೇಳುವಾಗ ನಮಗೆ ನಮ್ಮದೇ ಆದ ಒಂದು ಆಲೋಚನೆಯ ಕ್ರಮವೂ ಇರುತ್ತದೆ. ಲೆವಿಸ್ಟ್ರಾಸ್ ಇದನ್ನು ಹೇಳುವಾಗ ನಮಗೆ ಯಾವ ಮಾದರಿಯ ಜ್ಞಾನವು ಇರುತ್ತದೆ ಮತ್ತು ಅದರ ಮೂಲಕ ನಾವು ಯಾವುದನ್ನು ಹೇಳುತ್ತೇವೆ ಎನ್ನುವುದು ಅತ್ಯಂತ ಮುಖ್ಯ ಎಂದು ಭಾವಿಸುತ್ತಾನೆ. ಘಟನೆಗಳು ರಚನೆಯಾಗುತ್ತವೆ. ಆದ್ದರಿಂದ ಅದರಲ್ಲಿ ಕೆಲವು ಮಾದರಿಯ ಹೊಂದಾಣಿಕೆಗಳು ಇರುತ್ತವೆ. ಸಾವಯವ ಸಂಬಂಧವೂ ಇರುತ್ತವೆ. ಅವನು ಮತ್ತೊಂದು ವಿಷಯವನ್ನು ಹೇಳುತ್ತಾನೆ: ಎಲ್ಲಾ ವಿಜ್ಞಾನಗಳು ಒಂದು ಹಂತದಲ್ಲಿ ಸಂವಾದಿಯಾಗಿರುತ್ತವೆ. ಒಬ್ಬ ವ್ಯಕ್ತಿಯಿಂದ ಇನ್ನೊಬ್ಬ ವ್ಯಕ್ತಿಗೆ ಬರುವಾಗ ಇದರ ಸ್ವರೂಪವು ಬೇರೆಯಾಗುತ್ತವೆ. ಆದ್ದರಿಂದ ಈವತ್ತು ನಾವು ಚರಿತ್ರೆಯನ್ನು ನೋಡುವಾಗ ನಮಗೆ ಐತಿಹ್ಯ ಮತ್ತು ಪುರಾಣಗಳೂ ಒಂದು ಹಂತದಲ್ಲಿ ಕೆಲಸವನ್ನು ಮಾಡುತ್ತವೆ ಎಂದು ಅವನ ನಂಬಿಕೆ. ಯಾವುದೇ ಪುರಾಣ ಮತ್ತು ಐತಿಹ್ಯದಲ್ಲಿ ಆಲೋಚನೆ ಮತ್ತು ಜೀವನದ ಕ್ರಮಗಳು ಇರುತ್ತವೆ. ಅವುಗಳ ಆಂತರಿಕ ಸಂಬಂಧವನ್ನು ನಾವು ಇಲ್ಲಿ ಯೋಚನೆ ಮಾಡಬೇಕು ಎನ್ನುವುದು ಲೆವಿಸ್ಟ್ರಾಸ್ ಹೇಳುವ ನಿಲುವು. ಅವುಗಳಲ್ಲಿ ಒಂದು ನಿರ್ದಿಷ್ಟವಾದ ಒಂದು ಕಲ್ಪನೆಯು ಇರುತ್ತದೆ. ಅದರ ಜೊತೆಗೆ ಅವು ನಿರ್ದಿಷ್ಟವಾದ ಒಂದು ನಿರೂಪಣೆಯನ್ನು ಹೊಂದಿರುತ್ತವೆ. ವಾಸ್ತವವಾಗಿ ಇದೆ ನಮಗೆ ಹೆಚ್ಚು ನೆರವನ್ನು ನೀಡುತ್ತವೆ.

ಲೆವಿಸ್ಟ್ರಾಸ್ ನಿರೂಪಣೆ ಎನ್ನುವುದು ಹೇಗೆ ಇರುತ್ತದೆ ಮತ್ತು ಅದರ ಅಗತ್ಯವು ಏನು ಎಂದು ಹೇಳುತ್ತಾನೆ. ಐತಿಹ್ಯ ಮತ್ತು ಪುರಾಣಗಳಲ್ಲಿ ನಮಗೆ ನಿರೂಪಣೆಯಂತೂ ಅತ್ಯಂತ ಅಗತ್ಯವಾಗಿರುತ್ತದೆ. ಅದು ಕತೆಗೆ ಅತ್ಯಂತ ಮುಖ್ಯ. ಅದನ್ನು ಕತೆಯು ಅತ್ಯಂತ ಕನಿಷ್ಟವಾದ ಒಂದು ಘಟಕ ಎಂದು ಹೇಳಿದರೂ ಸರಿಯಾಗುತ್ತದೆ. ನಿರೂಪಣೆಯೇ ರಚನೆ ಮತ್ತು ಅದರ ಹೊಂದಾಣಿಕೆಗೆ ಹೆಚ್ಚು ಸಹಾಯವನ್ನು ಮಾಡುತ್ತದೆ. ಆದರೆ ಕತೆಯನ್ನು ಹೇಳುವುದು ಅಂದರೆ ಅದರಲ್ಲಿ ಸಹಜವಾದ ಒಂದು ಸಂಗತಿಯು ಇರುತ್ತದೆ ಎನ್ನುವುದು ಇಲ್ಲಿ ಗಮನಾರ್ಹವಾಗಿದೆ. ಅದನ್ನು ನಾವು ಹೀಗೆ ಹೇಳಬಹುದು: ಕತೆಯನ್ನು ಹೇಳುವುದು ಅಂದರೆ ಅದು ಪರಿವರ್ತನೆಯನ್ನು ಮಾಡುವುದೂ ಹೌದು. ಐತಿಹ್ಯವು ಚರಿತ್ರೆಯನ್ನು ಹೇಳುವುದು ಮಾತ್ರವೇ ಅಲ್ಲ, ಅದು ಚರಿತ್ರೆಗಾಗಿ ಇದೆ ಎಂದು ಎನ್ನುವುದರಲ್ಲಿ ಅನುಮಾನವು ಇಲ್ಲ. ಆದ್ದರಿಂದ ಈವತ್ತು ನಾವು ಐತಿಹ್ಯವನ್ನು ಓದುವಾಗ ಅದನ್ನು ಚರಿತ್ರೆಯ

ಆಕರವಾಗಿಯೂ ನೋಡಬೇಕು ಎನ್ನುವುದು ಒಂದು ಅಂಶವಾದರೆ ಅದು ಚರಿತ್ರೆಯನ್ನು ಹೇಗೆ ಪರಿವರ್ತನೆಯನ್ನು ಮಾಡಿದೆ ಎನ್ನುವುದು ಮತ್ತೊಂದು ಅಂಶವಾಗಿದೆ. ಪುರಾಣ ಮತ್ತು ಐತಿಹ್ಯಗಳು ನಿರ್ದಿಷ್ಟವಾದ ಉದ್ದೇಶವನ್ನು ಹೊಂದಿರುತ್ತವೆ. ಅದರ ಜೊತೆಗೆ ಅವು ಭಾಷೆಯಲ್ಲಿ ಒಂದು ಪ್ರಾತಿನಿಧಿಕತೆಯನ್ನು ಹೊಂದಿರುತ್ತವೆ. ಅವು ಯಾವ ಸತ್ಯವನ್ನು ಹೇಳುತ್ತವೆ ಎನ್ನುವುದು ಮಾತ್ರವೇ ಮುಖ್ಯ. ಆದ್ದರಿಂದಲೇ ಚಾರಿತ್ರಿಕ ಪ್ರಜ್ಞೆ ಮತ್ತು ತಾತ್ವಿಕ ಎನ್ನುವುದಕ್ಕೆ ಒಂದು ಸಂಬಂಧವು ಇದೆ. ಚರಿತ್ರೆಯ ಪ್ರಜ್ಞೆ ಮತ್ತು ಐತಿಹ್ಯದ ಕಲ್ಪನೆಗೆ ಇರುವ ಸಂಬಂಧವನ್ನು ಲೆವಿಸ್ಟ್ರಾಸ್ ವಿವರಿಸುತ್ತಾನೆ. ಅದರ ಸ್ವರೂಪವು ಒಂದು ನಿರ್ದಿಷ್ಟವಾದ ಸಂಕಥನವಾಗಿದೆ ಎನ್ನುವುದು ಅವನ ನಿಲುವು. ಚರಿತ್ರೆಯ ನಿರೂಪಣೆಯಲ್ಲಿ ಗದ್ಯದ ಸಂಕಥನವನ್ನು ನೋಡಬಹುದು ಎನ್ನುವುದೂ ಅವನ ಅರಿವಿನಲ್ಲಿ ಇದೆ. ಐತಿಹ್ಯಗಳನ್ನು ಆಧರಿಸಿದ ಕಥನ ಕಾವ್ಯಗಳು ಹೇಗೆ ಇವೆ ಎಂದು ನೋಡಬೇಕು. ಅದಕ್ಕೂ ಗದ್ಯದಲ್ಲಿ ಹೇಳುವ ಇತಿಹಾಸಕ್ಕೂ ಸಂವಹನದಲ್ಲಿ ವ್ಯತ್ಯಾಸವಿದೆ.

ಗದ್ಯ ಮತ್ತು ಪದ್ಯ ಎರಡೂ ಒಂದಲ್ಲ ಒಂದು ಅರ್ಥದಲ್ಲಿ ಮನುಷ್ಯರ ನಡುವಣ ಸಂಕಥನಗಳೇ ಆಗಿವೆ. ನಾವು ಯಾವ ಪದಗಳನ್ನು ಮತ್ತು ಯಾವುದನ್ನು ಹೇಳಲು ಹೊರಟಿದ್ದೇವೆಯೋ ಅದರ ರೂಪವು ನಿರ್ಧಾರವಾಗುವುದು ಇದರ ಮೂಲಕವೇ ಎನ್ನುವುದು ಸ್ಪಷ್ಟ. ಈ ದೃಷ್ಟಿಯಿಂದ ನಮ್ಮ ಸಂಕಥನಗಳಿಗೆ ಅದರದೇ ಆದ ಒಂದು ಅನನ್ಯತೆಯು ಇರುತ್ತದೆ. ಗದ್ಯ ಮತ್ತು ಪದ್ಯದ ಸಂಕಥನಗಳು ಹೇಗೆ ಬೇರೆ ಇರುತ್ತವೆ ಎನ್ನುವುದೂ ಎಲ್ಲರಿಗೂ ಗೊತ್ತು. ಗದ್ಯವು ನೀಡುವ ಸಂದೇಶಕ್ಕೆ ವಿಶಿಷ್ಟವಾದ ಆಯಾಮವೂ ಇರುತ್ತದೆ. ವಾಸ್ತವ ಮತ್ತು ಅದರ ನಿರೂಪಣೆಗೆ ಒಂದು ಆಯಾಮವು ಇರುತ್ತದೆ. ಅದೇ ಭಾಷೆಯನ್ನು ನಾವು ಪದ್ಯದಲ್ಲಿ ಬಳಸುವುದಿಲ್ಲ. ವಾಸ್ತವ ಮತ್ತು ಅದರ ಸ್ವರೂಪವು ಒಂದು ಥರ ಇರುತ್ತದೆ. ಆದರೆ ಪದ್ಯ ಮತ್ತು ಅದರ ನಿರೂಪಣೆಯು ಮತ್ತೊಂದು ಥರ ಇರುತ್ತದೆ. ಕಾವ್ಯ ಮತ್ತು ಅದರ ಅಂಶಕ್ಕೆ ಒಂದು ಆಯಾಮವು ಇರುತ್ತದೆ. ಆದರೆ ಇವುಗಳು ಸಂಸ್ಕೃತಿಗೆ ಬದ್ಧವಾಗಿರುತ್ತವೆ. ಗದ್ಯದ ವಸ್ತುನಿಷ್ಠತೆ ಮತ್ತು ಪದ್ಯದ ವಿಷಯನಿಷ್ಠತೆ ಎರಡೂ ಈ ವಿಚಾರಕ್ಕೆ ಅನ್ವಯವಾಗುತ್ತವೆ. ಘಟನೆಯನ್ನು ಕತೆಯಾಗಿಸುವುದು ಮತ್ತು ಕತೆಯನ್ನು ಘಟನೆಯಂತೆ ನೋಡುವುದರಲ್ಲಿ ಸಮಸ್ಯೆಯು ಇದೆ. ಚರಿತ್ರೆಯನ್ನು ನಾವು ಯಾವ ಭಾಷೆಯಲ್ಲಿ ಹೇಳುತ್ತೇವೆ ಎನ್ನುವುದು ಮುಖ್ಯ. ಅದನ್ನು ವಿವರಿಸುವುದು ಮಾತ್ರ ಅತ್ಯಂತ ಇಲ್ಲಿ ಗಮನಿಸಬೇಕಾದ ವಿಚಾರ.

ಮಾಹಿತಿ ಮತ್ತು ಅದರ ವಿವರಣೆ ಎನ್ನುವುದು ಹೇಗೆ ಇರುತ್ತದೆ ಎಂದೂ ನೋಡಬೇಕಿದೆ. ಚರಿತ್ರೆಯ ಅಧ್ಯಯನದ ದೃಷ್ಟಿಯಿಂದ ಮಾಹಿತಿ ಎಂದರೆ ಅದು ಒಂದು ಬಗೆಯ ಸಂದೇಶವಾಗಿರುತ್ತದೆ. ಈ ಸಂದೇಶವನ್ನು ನಾವು ಈವತ್ತು ಡಾಟಾ ಸಂಗ್ರಹ ಎಂದು ಸಂಶೋಧನೆಯಲ್ಲಿ ಹೇಳುತ್ತೇವೆ. ಅದನ್ನು ನಾವು ಅನ್ವಯ ಮಾಡುತ್ತೇವೆ. ಚಾರಿತ್ರಿಕ ಸಂಕಥನಗಳಲ್ಲಿ ಇದು ಅತ್ಯಂತ ಮಹತ್ವದ್ದು. ಆದ್ದರಿಂದ ಇದರಲ್ಲಿ ಒಂದು ವಿವರಣೆಯು ಇರುತ್ತದೆ. ಅದರ ಸ್ವಭಾವ ಮತ್ತು ಅದರ ಸೂಚನೆಗಳು ಬೇರೆಯಾಗುತ್ತವೆ ಎನ್ನುವುದನ್ನು ಹೊರತುಪಡಿಸಿದರೆ ಮತ್ತೆ ಅದರಲ್ಲಿ ಬೇರೆ ಅರ್ಥವು ಇರುವುದಿಲ್ಲ. ಇಲ್ಲಿ ಒಂದು ಅಂಶವನ್ನು ನಾವು ಹೇಳಬಹುದು: ಯಾವುದನ್ನು ರೊಮಾಂಟಿಕ್, ದುರಂತ ನಾಟಕಗಳು, ಹಾಸ್ಯ ನಾಟಕಗಳು, ಮಹಾಕಾವ್ಯಗಳು ಎಂದು ಹೇಳುತ್ತೇವೆಯೋ ಅವೆಲ್ಲಾ ಒಂದಲ್ಲಾ ಒಂದು ಅರ್ಥದಲ್ಲಿ ಪ್ರಾರಂಭ, ಮಧ್ಯ ಮತ್ತು ಮುಕ್ತಾಯವನ್ನು ಹೊಂದಿರುತ್ತವೆ. ಅವುಗಳು ಒಂದು ನಿರ್ದಿಷ್ಟವಾದ ಅಂಶಗಳನ್ನು ಹೇಳುತ್ತವೆ. ಅಷ್ಟೇ ಅಲ್ಲ ಇವುಗಳು ಮತ್ತೊಂದು ದೃಷ್ಟಿಯಿಂದ ಹೇಳಬೇಕೆಂದರೆ ಅವು ಪ್ರಾಕ್ತನ ರೂಪಗಳೂ ಹೌದು.

ಫ್ರಾಯ್ಡ್ ಒಂದು ಮಾತನ್ನು ಹೇಳುತ್ತಾನೆ: ಯಾವುದೇ ಕಾವ್ಯ, ಕತೆಗಳು, ಅಥವಾ ಬೇರೆ ಮಾದರಿಯ ಬರಹಗಳು ಪ್ರಜ್ಞಾ ಪೂರ್ವಕವಾದ ಪ್ರಕ್ರಿಯೆಗಳು ಆಗಿರುತ್ತವೆ. ಅವುಗಳು ಆಲೋಚನೆ ಮತ್ತು ಅದರ ಚೌಕಟ್ಟನ್ನು ಹೇಳುತ್ತವೆ. ಪೂರ್ವ ಆಲೋಚನೆ ಮತ್ತು ಅದರ ಪ್ರಾತಿನಿಧಿಕತೆಯು ಇದರಲ್ಲಿ ಹೆಚ್ಚು ಮುಖ್ಯ. ಈ ಪೂರ್ವ ಆಲೋಚನೆ ಎನ್ನುವುದು ಅತ್ಯಂತ ಮುಖ್ಯವಾಗಿದೆ. ಅದನ್ನು ಮಾರ್ಕ್ಸ ಮತ್ತು ಹೆಗೆಲ್ ಹೇಳುತ್ತಾರೆ. ಕಾದಂಬರಿಯಲ್ಲಿ ನಿರೂಪಕನು ತನ್ನ ಕ್ರಿಯಾಶೀಲತೆಯನ್ನು ತಾನು ಹೇಳುವ ಕಥನದ ಮೂಲಕ ತೀರಿಸಿಕೊಳ್ಳುತ್ತಾನೆ. ಅದು ಅವನ ಕ್ರಿಯೆ ಮಾತ್ರವೇ ಅಲ್ಲ, ಅದರ ಮೂಲಕ ತಾನು ಯಾವುದನ್ನು ಹೇಳಬೇಕೆಂದು ಕೊಂಡಿದ್ದಾನೆಯೋ ಅದರ ವಸ್ತುವನ್ನು ಅವನು ತಾನೇ ನಿರ್ಧಾರ ಮಾಡಿಕೊಂಡಿರುತ್ತಾನೆ. 'ಭಾರತೀಪುರ' ವಸ್ತುವನ್ನು ಅನಂತಮೂರ್ತಿಯವರು ನಿರ್ಧಾರ ಮಾಡಿದ್ದಾರೆಯೇ ಹೊರತು ಬೇರೆಯವರು ಅಲ್ಲ ಎನ್ನುವುದು ಸ್ಪಷ್ಟ. ಅವರಿಗೆ ಆ ಕಲ್ಪನೆಯು ಇತ್ತು. ಅದರ ಜೊತೆಗೆ ಅವರು ತನಗೆ ಏನು ಬೇಕೋ ಅದನ್ನು ನಿರೂಪಿಸಿದರು. 'ಭಾರತೀಪುರ'ದಲ್ಲಿ ಎಲ್ಲವೂ ವಾಸ್ತವ ಅಲ್ಲ. ಅದರಲ್ಲಿ ಕೆಲವು ಕಲ್ಪಿತ.

ಯಾವುದೇ ಒಂದು ಘಟನೆಯು ಇಲ್ಲದೆ ಹೋದರೆ ಆಗ ಅದರಲ್ಲಿ ಅನ್ವಯದ ಪ್ರಶ್ನೆಯು ಬರುವುದಿಲ್ಲ. ಈ ಅರ್ಥದಲ್ಲಿ ಘಟನೆ ಮತ್ತು ಅದರ ಅನ್ವಯವು ಜೊತೆಗೆ ಹೋಗುತ್ತವೆ. ಅದರಲ್ಲಿ ಒಂದು ಘಟನೆ. ಮತ್ತೊಂದು

ಅನ್ವಯ. ಅನ್ವಯ ಎನ್ನುವುದು ನಮಗೆ ನಿರ್ದಿಷ್ಟವಾದ್ದು ಮತ್ತು ಅದರಲ್ಲಿ ಚರಿತ್ರೆಯು ಸೇರುತ್ತದೆ. ಅದಕ್ಕೆ ಅರ್ಥವು ಇರುತ್ತದೆ. ಕಲಾತ್ಮಕತೆ ಮತ್ತು ಅದರ ಸ್ವರೂಪವನ್ನು ನಾವು ಈ ದೃಷ್ಟಿಯಿಂದ ನೋಡಬೇಕಾಗುತ್ತದೆ. ಚರಿತ್ರೆ ಮತ್ತು ಅದರ ಕಥನಗಳು ಕೂಡಾ ಭಾಷೆಯಲ್ಲಿ ವ್ಯಕ್ತವಾಗುತ್ತವೆ. ಭಾಷೆ ಎನ್ನುವುದು ಚರಿತ್ರೆ ಮತ್ತು ಅದರ ಕಥನಗಳಲ್ಲಿ ಒಂದು ಸಂಹಿತೆಯು ಮಾತ್ರ. ಆ ಸಂಹಿತೆಯನ್ನು ಇಟ್ಟುಕೊಂಡು ಇತಿಹಾಸಕಾರನು ತನ್ನ ವಿಶ್ಲೇಷಣೆಯನ್ನು ಮಾಡುತ್ತಾನೆ. ಆದರೆ ಚಾರಿತ್ರಿಕ ಸಂಕಥನಗಳು ಮತ್ತೊಂದು ದೃಷ್ಟಿಕೋನದಿಂದ ಪ್ರತಿಮಾತ್ಮಕವಾಗಿರುತ್ತದೆ. ಅದರಲ್ಲಿ ಕಥನ ಮತ್ತು ಪ್ರತೀಕ. ಘಟನೆ ಮತ್ತು ಅದರ ರೂಪಗಳು ಇಲ್ಲಿ ಮುಖ್ಯ. ಇದನ್ನು ನಾವು ಋಣಾತ್ಮಕವಾಗಿ ಅಥವಾ ಧನಾತ್ಮಕವಾಗಿ ನೋಡಲು ಸಾಧ್ಯವಿದೆ. ಹೀಗೆ ನೋಡಲು ನಮಗೆ ಸಹಾಯವನ್ನು ಮಾಡುವುದು ನಮ್ಮ ಜ್ಞಾನವು ಮಾತ್ರ. ನಮಗೆ ಚರಿತ್ರೆ ಮತ್ತು ಕಥನದ ಕುರಿತು ಎಷ್ಟು ಜ್ಞಾನವು ಇದೆಯೋ ಅಷ್ಟು ಮಾತ್ರವೇ ಅಗತ್ಯ. ನಾವು ಯಾವುದನ್ನು ಹೇಗೆ ಅನ್ವಯ ಮಾಡುತ್ತೇವೆ ಎನ್ನುವುದೂ ನಮ್ಮ ತಾತ್ವಿಕವಾದ ನಿಲುವನ್ನು ಹೇಳುತ್ತದೆ.

■

# ಭೂತಕಾಲದ ಪ್ರಾತಿನಿಧಿಕತೆ ಮತ್ತು ಕಥನಗಳು

ಯಾವುದು ನಿಜವಾಗಿಯೂ ಆಗಿದೆಯೋ ಅದರ ಸ್ಥಳ ಮತ್ತು ಕಾಲವನ್ನು ಆಧರಿಸಿಕೊಂಡು ಇರುತ್ತವೆ. ಕಥನದ ಘಟನೆಗಳು ಮತ್ತು ಚರಿತ್ರೆಯ ಘಟನೆಗಳು ಒಂದೇ ರೀತಿಯಲ್ಲಿ ಇರುತ್ತವೆ ಎಂದು ಹೇಳಲು ಬರುವುದಿಲ್ಲ. ಆದರೆ ಕತೆಯನ್ನು, ಕಾದಂಬರಿಯನ್ನು, ನಾಟಕವನ್ನು ಬರೆಯುವವನು ಸ್ಥಳ, ಕಾಲ ಮತ್ತು ಕಲ್ಪನೆಯನ್ನು ಆಧರಿಸಿಕೊಂಡು ಬರೆಯುತ್ತಾನೆ. ಘಟನೆಯು ಕತೆಯಲ್ಲಿ ಬರುವಾಗ ಒಂದು ನಿರ್ದಿಷ್ಟವಾದ ಪ್ರಾತಿನಿಧಿಕತೆಯನ್ನು ಹೊಂದಿರುತ್ತದೆ. ಕತೆಯು ನಿತ್ಯದ ಹೋಲಿಕೆಯನ್ನು ಹೊಂದಿದ್ದರೂ ಅದರ ರೂಪವು ಅಂತಿಮವಾಗಿ ಕಲ್ಪನೆಯನ್ನು ಹೇಳುತ್ತದೆ. ಕತೆಯನ್ನು ಹೇಳುವವರು ಮತ್ತು ಇತಿಹಾಸಕಾರರು ಬೇರೆ ಬೇರೆ ವಿಷಯಗಳನ್ನು ಆಯ್ಕೆ ಮಾಡಿಕೊಂಡು ನಿರೂಪಣೆ ಮಾಡುತ್ತಾರೆ. ಆದರೆ ನಿರ್ದಿಷ್ಟವಾದ ಸಂಕಥನವನ್ನು ರೂಪಿಸುತ್ತಾರೆ. ಯಾವ ರೂಪದಲ್ಲಿ ಅದನ್ನು ಹೇಳುತ್ತಾರೆ ಎನ್ನುವುದು ಮಾತ್ರವೇ ಮುಖ್ಯ. ಎಷ್ಟೋ ಸರ್ತಿ ನಾವು ಕತೆಯನ್ನು ಮತ್ತು ಚರಿತ್ರೆಯನ್ನು ಬೇರೆ ಮಾಡಲಾರೆವು. ನಿಜವನ್ನು ನಾವು ಹೇಗೆ ಹೇಳುತ್ತೇವೆ ಎನ್ನುವುದು ಮಾತ್ರವೇ ಮುಖ್ಯ. ಚಿಕವೀರ ರಾಜೇಂದ್ರ, ದುರ್ಗಾಸ್ತಮಾನ, ಗಾಂಧಿ ಬಂದ ಕಾದಂಬರಿಗಳಲ್ಲಿ ವಸ್ತುವಿನ ಭಿನ್ನತೆಗಳು ಇವೆ. ಆದರೆ ಅದರ ಕಾರಣಕ್ಕೆ ಸತ್ಯವನ್ನು ಹೇಳುವುದಿಲ್ಲ ಎಂದು ಅರ್ಥವಲ್ಲ. ಇದನ್ನು ಒಬ್ಬ ಇತಿಹಾಸಕಾರನೂ ಹೇಳುತ್ತಾನೆ. ಕಾದಂಬರಿಕಾರನು ಕಥನವನ್ನು ಹೇಳುವುದು ಬೇರೆ ಕ್ರಮದಲ್ಲಿ. ಅದೇ ಸಂಗತಿಯನ್ನು ಇತಿಹಾಸಕಾರನು ಬೇರೆ ಥರ ಹೇಳಬಹುದು. ಆದರೆ ಇಬ್ಬರೂ ವಾಸ್ತವವನ್ನು ಆಧರಿಸಿಕೊಂಡು ಇರುತ್ತಾರೆ. ಕಾದಂಬರಿಕಾರನು ತನ್ನ ಕಾದಂಬರಿಯನ್ನು ಪರೋಕ್ಷವಾಗಿ ಹೇಳುತ್ತಾನೆ. ಅದರಲ್ಲಿ ಒಂದು ತಾರ್ಕಿಕವಾದ ವಾಸ್ತವ ಇರುತ್ತದೆ. ಮತ್ತೊಂದು ತಾರ್ಕಿಕವಾದ ವಾಸ್ತವವಲ್ಲ. ಇನ್ನೊಂದು ಬರವಣಿಗೆಯನ್ನು ಆಧರಿಸಿದ ವಾಸ್ತವ. ವಾಸ್ತವ ಮತ್ತು ಅದರ ಸಾಮ್ಯತೆಗಳು ಇಲ್ಲಿ ಪ್ರಧಾನ. ಪ್ರತಿಯೊಂದು ಇತಿಹಾಸವೂ ಒಂದಲ್ಲ ಒಂದು ಅರ್ಥದಲ್ಲಿ ವಾಸ್ತವ

ಮತ್ತು ಅದರ ಪ್ರಾತಿನಿಧಿಕತೆಯನ್ನು ಹೇಳುತ್ತದೆ. ಆದರೆ ಕತೆಯು ಹಾಗೆ ಇಲ್ಲ. ಕತೆಯಲ್ಲಿ ಬರಹ ಎನ್ನುವುದೂ ಒಂದು ಅತ್ಯಂತ ಮುಖ್ಯವಾದ ಮಾಧ್ಯಮವಾಗಿರುತ್ತದೆ. ಇದರ ಪ್ರತಿಮಾತ್ಮಕವಾದ ಸಂಯೋಜನೆಯು ಬೇರೆ ಥರ ಇರುತ್ತದೆ. ಕಾದಂಬರಿಯಂತೂ ಬರಹವನ್ನು ಆಶ್ರಯಿಸಿದೆ. ಅದರ ಮೂಲಕ ಅದು ಚರಿತ್ರೆಯನ್ನು ಹೇಳುತ್ತದೆ. ಚರಿತ್ರೆ ಎನ್ನುವುದು ಸತ್ಯವನ್ನು ಹುಡುಕುವುದೂ ಸತ್ಯ. ನಿಜ ಎನ್ನುವುದು ಯಾವತ್ತೂ ನಮಗೆ ಒಂದು ಕಲ್ಪನೆಯು ಆಗುವುದು ಸಾಧ್ಯವೇ ಇಲ್ಲ. ಹದಿನೆಂಟನೆಯ ಶತಮಾನದಲ್ಲಿ ಒಮ್ಮೆ ಫ್ರೆಂಚ್ ಭಾಷೆಯಲ್ಲಿ ಈ ಬಗೆಯ ಚರ್ಚೆಯು ಬಮದಿರುವುದು ನಿಜ. ಕಥನ ಮತ್ತು ಸಾಹಿತ್ಯವನ್ನು ಅದರಲ್ಲಿ ಚರ್ಚೆಯಾಗಿರುವುದು ಸತ್ಯ. ಅದರಲ್ಲಿ ಚರಿತ್ರೆಗೂ ಸತ್ಯಕ್ಕೂ ಕಾವ್ಯಕ್ಕೂ ಕಲ್ಪನೆಗೂ ಇರುವ ಸಂಬಂಧವನ್ನು ಚರ್ಚೆಮಾಡಲಾಗಿತ್ತು. ಕಥಣ ಮತ್ತು ಕಲ್ಪನೆಗಳು ಹೇಗೆ ಇರುತ್ತವೆ ಎನ್ನುವುದೂ ಅತ್ಯಂತ ಮುಖ್ಯವಾದ ಒಂದು ಸಂಗತಿಯೆಂದೂ ಆಗ ವಿದ್ವಾಂಸರು ಚರ್ಚೆಯನ್ನು ಮಾಡಿದ್ದರು. ಕಥನ ಮತ್ತು ಅದರ ನಿರೂಪಣೆಯಲ್ಲಿ ತಂತ್ರಗಳು ಚರಿತ್ರೆಯಲ್ಲಿ ಇರುವುದಿಲ್ಲ. ಪ್ರಾತಿನಿಧಿಕತೆಗೆ ಇರುವ ವಿಭಿನ್ನವಾದ ಆಯಾಮವನ್ನು ನಾವು ಇಲ್ಲಿ ಗಮನಿಸಬೇಕಾಗುತ್ತದೆ. ಒಂದು ನಿಜವಾದ ಘಟನೆ ಮತ್ತು ಅದರ ನಿರೂಪಣೆಯನ್ನು ನಾವು ಹೇಗೆ ಪ್ರಾತಿನಿಧಿಕ ಮಾಡುತ್ತೇವೆ ಎನ್ನುವುದೂ ಒಂದು ಪ್ರಶ್ನೆ. ಚರಿತ್ರೆಯನ್ನು ನಾವು ನಿರೂಪಣೆ ಮಾಡುವಾಗ ಅದರ ಸಂವಹನವು ಅತ್ಯಂತ ಮುಖ್ಯ. ಒಂದು ನಿಜವಾದ ಘಟನೆಯನ್ನು ಇಟ್ಟುಕೊಂಡು ನಾವು ಚರಿತ್ರೆಯ ನಿರೂಪಣೆಯನ್ನು ಮಾಡುತ್ತೇವೆ. ಒಂದು ನಿಜವಾದ ಘಟನೆಯು ಆಗಿದೆ. ಅದನ್ನು ನಾವು ಬರಹದಲ್ಲಿ ಹೇಳುತ್ತೇವೆ. ಅದು ಒಂದು ಬಗೆಯಲ್ಲಿ ನಿರ್ದಿಷ್ಟವಾದ ಕೌಶಲ. ಅದು ಚರಿತ್ರೆಯ ಮಟ್ಟಿಗೆ ವೈಜ್ಞಾನಿಕವಾಗಬೇಕಾಗುತ್ತದೆ. ಅದು ಬೇರೆ ಸಂಗತಿ.

ಸತ್ಯ ಮತ್ತು ತಪ್ಪುಗಳು ಹೇಗೆ ಇರುತ್ತವೆ ಎನ್ನುವುದನ್ನು ನಿರ್ಧಾರ ಮಾಡಲು ನಮಗೆ ಅವಕಾಶ ಮತ್ತು ಆಧಾರಗಳೇ ಬೇಕಾಗುತ್ತದೆ. ಅದು ಕೇವಲ ವಸ್ತು ಮತ್ತು ಘಟನೆ ಹಾಗೂ ಕಲ್ಪನೆಗೆ ಸಂಬಂಧಪಟ್ಟ ವಿಚಾರವಲ್ಲ. ಚರಿತ್ರೆಯನ್ನು ಒಂದು ವಸ್ತುವಾಗಿ ಮತ್ತು ಅದನ್ನು ಒಂದು ಸತ್ಯವಾಗಿ ಗಣಿಸುವುದಕ್ಕೆ ಯಾವುದು ಬರಹದಲ್ಲಿ ಪ್ರಾತಿನಿಧಿಕವಾಗಿದೆ ಎನ್ನುವುದು ಅತ್ಯಂತ ಮುಖ್ಯ. ನಾವು ಯಾವುದನ್ನು ಬಳಸುತ್ತೇವೆ ಮತ್ತು ಅದನ್ನು ಹೇಗೆ ನಿರೂಪಣೆ ಮಾಡುತ್ತೇವೆ ಎನ್ನುವುದೂ ಅತ್ಯಂತ ಮುಖ್ಯ. ಒಮ್ಮೊಮ್ಮೆ ನಾವು ಒಂದು ನಿಜವಾದ ಘಟನೆಯನ್ನು ಹೇಳುವಾಗ ಅದರಲ್ಲಿ ಬೇರೆ ಅಂಶಗಳೂ ಸೇರುತ್ತವೆ. ಆದ್ದರಿಂದ ಅದರ ನಿರೂಪಣೆಯು ಕತೆಯ ಥರ ಆಗುತ್ತದೆ. ನಾವು ಒಂದು ನಿರ್ದಿಷ್ಟವಾದ ಸಂಗತಿಯನ್ನು ಹೇಳುವಾಗ

ಅದರಲ್ಲಿ ರೂಪಕ ಮತ್ತು ಇತರ ಸಂಗತಿಗಳು ಬಂದರೆ ಸಹಜವಾಗಿಯೇ ಅದರಲ್ಲಿ ಕಥನ ಗುಣವು ಬರುತ್ತದೆ. ನಿಜ ಮತ್ತು ಅದರ ಸಂಯೋಜನೆ ಎನ್ನುವುದು ಈ ದೃಷ್ಟಿಯಿಂದ ಭಿನ್ನವಾದ ಒಂದು ನೆಲೆಯನ್ನು ಪಡೆಯುತ್ತದೆ. ಒಂದು ಚೌಕಟ್ಟಿನಲ್ಲಿ ಬಂದರೆ ಅದು ಕತೆಯು ಆಗುತ್ತದೆ. ಅದೇ ವಿಷಯವು ಮತ್ತೊಂದು ರೀತಿಯಲ್ಲಿ ಬಂದರೆ ಆಗ ಅದು ಚರಿತ್ರೆಯು ಆಗುತ್ತದೆ. ಇದು ವ್ಯತ್ಯಾಸ. ಹೀಗಾಗಿ ವಸ್ತು ಮತ್ತು ಅದರ ಸತ್ಯ ಎನ್ನುವುದು ಹೇಗೆ ಭಿನ್ನವಾದ ಒಂದು ಸ್ವರೂಪವನ್ನು ಒಳಗೊಳ್ಳುತ್ತದೆ ಎನ್ನುವುದು ಇಲ್ಲಿ ಮುಖ್ಯ. ಇದು ಸತ್ಯ ಮತ್ತು ಅದರ ಕತೆ ಎನ್ನುವುದು ಇಲ್ಲಿ ಅತ್ಯಂತ ಸೂಕ್ಷ್ಮವಾದ ಒಂದು ವ್ಯತ್ಯಾಸವನ್ನು ಹೊಂದಿರುತ್ತದೆ.

ಹತ್ತೊಂಬತ್ತನೆಯ ಶತಮಾನದಲ್ಲಿ ಇನ್ನೊಂದು ಅತ್ಯಂತ ಮುಖ್ಯವಾದ ಚರ್ಚೆಯು ಮುಂದೆ ಬಂದಿತು. ಚರಿತ್ರೆ ಮತ್ತು ಅದರ ನಿರೂಪಣೆಯಲ್ಲಿ ಬಂದ ವ್ಯತ್ಯಾಸ. ಕಥನ ಮತ್ತು ಅದರ ಬದಲಿಗೆ ಚರಿತ್ರೆಯು ಹೇಗೆ ಬರುತ್ತದೆ ಎಂದು ವಾಗ್ವಾದಗಳು ಬಂದವು. ನಿಜವು ಹೇಗೆ ಒಂದು ಸಂವಹನದ ಸಾಧ್ಯತೆಯು ಆಗುತ್ತದೆ ಎನ್ನುವುದೂ ಇಲ್ಲಿ ಪ್ರಧಾನವಾದ ವಿಷಯ. ಚರಿತ್ರೆಯಲ್ಲಿ ಯಾವುದು ನಮಗೆ ಹೊಸ ಸಾಧ್ಯತೆಯು ಆಗಬಹುದು ಎಂದು ಇತಿಹಾಸಕಾರರು ಯೋಚನೆಯನ್ನು ಮಾಡಿದರು. ವಸ್ತು ಮತ್ತು ವಾಸ್ತವ ಎನ್ನುವುದು ಹೀಗೆ ಒಂದು ಹೊಸದಾದ ವ್ಯಾಖ್ಯೆಗೆ ಸಿಕ್ಕಿತು. ಹತ್ತೊಂಬತ್ತನೆಯ ಇತಿಹಾಸಕಾರರು ವಾಸ್ತವ ಮತ್ತು ಕಥನದ ನಡುವೆ ಇರುವ ಅತ್ಯಂತ ಸರಳವಾದ ಒಂದು ಸರಳವಾದ ಗೆರೆಯನ್ನು ಅಳಿಸುವ ಯತ್ನವನ್ನು ಮಾಡಿದ್ದು ನಿಜ.

ಇದರಿಂದ ಐತಿಹ್ಯ ಮತ್ತು ಅದರ ನಿಜವಾದ ರೂಪ ಹಾಗೂ ಅದರ ಆಶಯವನ್ನು ಚರ್ಚೆ ಮಾಡಿದರು. ಐತಿಹ್ಯ ಮತ್ತು ಅದರ ಪುನರ್ ಓದು ಎನ್ನುವುದು ನಮಗೆ ಅಗತ್ಯವಿದೆ. ಅದನ್ನು ಈಗ ಹೊಸದಾಗಿ ಮತ್ತೆ ಹೇಗೆ ಅನ್ವಯ ಮಾಡಬೇಕು ಎನ್ನುವುದು ಈ ಚರ್ಚೆಯ ಪ್ರಮುಖ ಆಶಯವೂ ಆಯಿತು. ಇದರಲ್ಲಿ ಇನ್ನೊಂದು ಅಂಶವನ್ನು ನಾವು ಗಣನೆಗೆ ತೆಗೆದುಕೊಳ್ಳಬೇಕು: ಈ ಬಗೆಯ ಚರ್ಚೆಯನ್ನು ಬರೀ ಎಡ ಪಂಥೀಯರು ಮಾತ್ರವೇ ಮಾಡಲಿಲ್ಲ. ಐತಿಹ್ಯ ಎನ್ನುವುದು ವಾಸ್ತವವನ್ನು ನೇರವಾಗಿ ಹೇಳುವುದಿಲ್ಲ. ಅದರಲ್ಲಿ ವಾಸ್ತವದ ಅರ್ಥವು ಹುದುಗಿ ಹೋಗಿರುತ್ತದೆ. ಆದ್ದರಿಂದ ಐತಿಹ್ಯ ಮತ್ತು ಅದರ ಭಂಜನೆ ಎನ್ನುವುದು ಯಾಕೆ ಅಗತ್ಯ ಎಂದು ಇತಿಹಾಸಕಾರು ಹೇಳಿದರು. ಇದನ್ನು ನಿರೂಪಣೆ ಮಾಡಲು ನಮಗೆ ಬೇರೆ ಬೇರೆ ಪರಿಕರಗಳೂ ಇದ್ದವು. ಅದು ಬೇರೆ ಪ್ರಶ್ನೆ. ಕಥನ ಮತ್ತು ಅದರ ಭಂಜನೆ ಎನ್ನುವುದು ಹೇಗೆ ಮುಖ್ಯ ಎಂದೂ ಅನೇಕ ಚರಿತ್ರೆಕಾರರು ಮತ್ತು ವಿಮರ್ಶಕರು ಹೇಳಿದರು.

ಐತಿಹ್ಯವೂ ಒಂದು ಅರ್ಥದಲ್ಲಿ ಕಥನದ ಒಂದು ರೂಪ. ಇದನ್ನು ಮತ್ತು ಕತೆಯನ್ನು ಒಂದು ಮಾಡುವುದು ಅತ್ಯಂತ ಕಷ್ಟ. ಇವುಗಳಿಗೆ ವ್ಯತ್ಯಾಸವಿದೆ. ಹತ್ತೊಂಬತ್ತನೆಯ ಶತಮಾನದಲ್ಲಿ ವಿಜ್ಞಾನವು ಅತ್ಯಂತ ಮುಂದೆ ಬಂದುದರಿಂದ ಕತೆಯನ್ನು ಮತ್ತು ಐತಿಹ್ಯವನ್ನು ನಾವು ಬೇರೆ ಮಾಡಲು ಪ್ರಯತ್ನ ಮಾಡಿದ್ದು ನಿಜ. ಇದು ವಾಸ್ತವವಾದಿ ಕಥನ ಮತ್ತು ಐತಿಹ್ಯದ ನಡುವೆಗಳಲ್ಲಿ ಇರುವ ಅತ್ಯಂತ ಪ್ರಧಾನವಾದ ಒಂದು ವ್ಯತ್ಯಾಸವೂ ಹೌದು. ಆದರೆ ಇಲ್ಲಿ ಇದನ್ನು ಹೇಳುವಾಗ ಒಂದು ಮುಖ್ಯವಾದ ಪ್ರಶ್ನೆಯು ಬಂದಿತು. ಕತೆಗಳನ್ನು ಮತ್ತು ಕಾದಂಬರಿಗಳನ್ನು ಹೇಳಲು ನಮಗೆ ಒಬ್ಬ ನಿರೂಪಕನು ಇರುತ್ತಾನೆ. ಅವನು ಕತೆಯನ್ನು ಹೇಳುತ್ತಾನೆ. ಆದರೆ ಚರಿತ್ರೆಯ ಘಟನೆಯು ನಡೆಯುವಾಗ ಅದರಲ್ಲಿ ಒಬ್ಬ ನಿರೂಪಕನು ಇರುವುದಿಲ್ಲ. ಘಟನೆಯಾದರೆ ಅನಂತರ ಒಬ್ಬ ನಿರೂಪಕನು ಬರುತ್ತಾನೆ. ಹಾಗೆ ನೋಡಿದರೆ ನಮಗೆ ಚರಿತ್ರೆಯಲ್ಲಿ ವಿವಿಧ ಸಂಕಥನಗಳು ಇರುತ್ತವೆ. ಅವುಗಳು ಒಂದೇ ಬಗೆಯಲ್ಲಿ ಇರುವುದಿಲ್ಲ. ರೊಮಾಂಟಿಕ್ ಮನೋಭಾವದ ಇತಿಹಾಸಕಾರರು ಮತ್ತು ವಾಸ್ತವವಾದಿ ಇತಿಹಾಸಕಾರರು ಹಾಗೂ ಸಂಕೇತ ನಿಷ್ಠ ಚರಿತ್ರೆಕಾರರಿಗೆ ಬಹಳ ವ್ಯತ್ಯಾಸವೂ ಇದೆ. ಸಂಪ್ರದಾಯವಾದಿ ಇತಿಹಾಸಕಾರರು ಒಂದು ವಸ್ತುವನ್ನು ನೋಡುವುದಕ್ಕೂ ಆಧುನಿಕತಾವಾದಿ ಇತಿಹಾಸಕಾರರು ವಸ್ತುವನ್ನು ನೋಡುವುದಕ್ಕೂ ತುಂಬಾ ವ್ಯತ್ಯಾಸವಿದೆ. ಚರಿತ್ರೆಯನ್ನು ನಾವು ಕಲ್ಪಿತ ಎಂದು ಹೇಳುವಾಗ ಅದರಲ್ಲಿ ತಾತ್ವಿಕತೆಗೆ ಎಷ್ಟು ಶಕ್ತಿಯು ಇದೆ ಎನ್ನುವುದು ಅತ್ಯಂತ ಅಗತ್ಯ. ಅನೇಕ ಸಂದರ್ಭದಲ್ಲಿ ಚರಿತ್ರೆ ಮತ್ತು ಅದರ ಕಲ್ಪನೆಗೆ ವಸ್ತು ಮತ್ತು ಸತ್ಯಗಳನ್ನು ನಾವು ಕಾಪಾಡುವುದು ಅತ್ಯಂತ ಅನಿವಾರ್ಯ. ಅದು ಒಂದು ಕೌಶಲವೂ ಆಗಿರುತ್ತದೆ. ಅಷ್ಟೇ ಅಲ್ಲ ಅದಕ್ಕೆ ನಿರ್ದಿಷ್ಟವಾದ ಜ್ಞಾನವೂ ಬೇಕಾಗುತ್ತದೆ.

ಯಾವುದು ಕಳೆದು ಹೋಗಿದೆಯೋ ಅದರ ಪ್ರಾತಿನಿಧಿಕತೆಯು ಕೂಡಾ ಅಷ್ಟೇ ಮುಖ್ಯ. ಕೆಲವು ಸಂಗತಿಗಳು ನಮಗೆ ಪ್ರಾತಿನಿಧಿಕವಾಗಿ ಸಿಗುವುದಿಲ್ಲ. ಅದರಲ್ಲಿ ನಮಗೆ ಸಮಸ್ಯೆಯು ಇದೆ. ಯಾವುದು ಚರಿತ್ರೆಯಲ್ಲಿ ನಿಜವಾದ ಸಂಗತಿಯು ಆಗಿದೆಯೋ ಅದರ ರೂಪವನ್ನು ನೋಡುವಾಗ ನಮಗೆ ಇನ್ನೊಂದು ಚಿತ್ರವು ಬರುತ್ತದೆ. ಅದು ಚದುರಿ ಹೋದ ಅನೇಕ ಘಟನೆಗಳು. ಚದುರಿದ ಅನೇಕ ಸಂಗತಿಗಳು ನಮಗೆ ಜೊತೆಗೆ ಸಿಗುವುದೂ ಇಲ್ಲ. ಹೀಗೆ ಯಾವುದು ಚದುರಿ ಹೋಗಿದೆಯೋ ಅದನ್ನು ಒಂದು ಸಮಗ್ರತೆಯ ಭಾಗವಾಗಿ ನೋಡುವುದು ಅತ್ಯಂತ ಕಷ್ಟ.

■

# ನವ್ಯ ಸಾಹಿತ್ಯ ಮತ್ತು ಅದರ ತಾತ್ವಿಕತೆಗಳು

ಕನ್ನಡದಲ್ಲಿ ನವ್ಯ ಸಾಹಿತ್ಯವು ಬಂದಾಗ ಅದರ ಮೊದಲಿಗೆ ವಿರೋಧಿಸಿದ್ದು ನವೋದಯದ ಕಾವ್ಯವನ್ನು. ಅದಕ್ಕೆ ಒಂದು ಮುಖ್ಯವಾದ ಕಾರಣವೆಂದರೆ ನವೋದಯವು ಭಾವುಕತೆಯನ್ನು ಹೇಳುತ್ತದೆ ಎಂದು ಮಾತ್ರವೇ ಕಾರಣವಾಗಿತ್ತು. ಅದರ ಜೊತೆಗೆ ಅಡಿಗರು ಹೊಸಗಾಳಿ ಮತ್ತು ಹೊಸತನವನ್ನು ಹೇಳಿದರು. ಅವರಿಗೆ ಉತ್ಸಾಹ ಮತ್ತು ವೀರಾವೇಶ ಅಷ್ಟಾಗಿ ಹಿಡಿಸಲಿಲ್ಲ. ಇದರ ನಡುವೆ ಇನ್ನೊಂದು ಅಂಶವು ಅತ್ಯಂತ ಮುಖ್ಯವಾಗಿತ್ತು. ಕಾರಂತರು, ಕುವೆಂಪು, ಮಿರ್ಜಿ, ರಾವ್ ಬಹಾದ್ದೂರ್ ಮುಂತಾದವರು ವಾಸ್ತವವಾದವನ್ನು ಹೇಳುತ್ತಿದ್ದರು.

ಪಶ್ಚಿಮದ ಆಧುನಿಕತೆಯು ಹೇಗೆ ವಾಸ್ತವವನ್ನು ವಿರೋಧಿಸಿತೋ ಅದೇ ರೀತಿಯಲ್ಲಿ ಭಾರತದಲ್ಲಿ ನವ್ಯ ಲೇಖಕರು ವಾಸ್ತವವನ್ನು ಒಪ್ಪಲಿಲ್ಲ. ಇದು ತಾತ್ವಿಕವಾದ ಒಂದು ಪ್ರಶ್ನೆಯೂ ಹೌದು. ನವ್ಯರು ಅತ್ಯಂತ ಮುಖ್ಯವಾಗಿ ಹೇಳಿದ್ದು ಸಾಹಿತ್ಯ ಮತ್ತು ಆಂತರಿಕವಾದ ಒಂದು ಸೌಂದರ್ಯವನ್ನು ಕುರಿತು. ಆಧುನಿಕ ಯುಗ ಮತ್ತು ಅದರ ಸಂಸ್ಕೃತಿಯ ಪ್ರಶ್ನೆಗಳನ್ನು ನವ್ಯದ ಲೇಖಕರು ನೋಡಿದ ಕ್ರಮವು ಬೇರೆ. ಅದನ್ನೇ ನವೋದಯದವರು ಹೇಳಿದ ಕ್ರಮವು ಬೇರೆ. ಮನುಷ್ಯ ಮತ್ತು ಅವನ ಖಾಸಗಿಯಾದ ವ್ಯಕ್ತಿತ್ವ ಎನ್ನುವುದು ನವ್ಯರಿಗೆ ಹೆಚ್ಚು ಮುಖ್ಯವಾಗುತ್ತದೆ. ಆದ್ದರಿಂದ ಅವರು ಜನಪ್ರಿಯ ಮತ್ತು ಬೌದ್ಧಿಕ ಎನ್ನುವುದನ್ನು ಬೇರೆ ಮಾಡುತ್ತಾರೆ. ಹಾಗೆ ನೋಡಿದರೆ ಆಧುನಿಕ ಮತ್ತು ಸಾಂಪ್ರದಾಯಿಕ ಎನ್ನುವುದು ನಮಗೆ ಶೈಲಿಯ ಪ್ರಶ್ನೆಯು ಅಲ್ಲ. ಅದರ ಜೊತೆಗೆ ಅದರಲ್ಲಿ ಜೀವನಕ್ರಮದ ಪ್ರಶ್ನೆಯು ಸೇರಿಕೊಂಡಿದೆ. ಅಡಿಗರು ಇದನ್ನೇ ಭೂತ, ವರ್ತಮಾನ ಹಾಗೂ ಭವಿಷ್ಯತ್‌ಕಾಲ ಎಂದು ಹೇಳುತ್ತಾರೆ. ಆದರೆ ಇಲ್ಲಿ ನಮಗೆ ಮತ್ತೊಂದು ಸಮಸ್ಯೆಯು ಇದೆ. ನವ್ಯರು ಜನಪ್ರಿಯ ಮತ್ತು ಸಮೂಹ ಎನ್ನುವುದನ್ನು ಬೇರೆ ಥರ ನಿರೂಪಣೆ ಮಾಡಿದ್ದಾರೆ. ಯಾವುದು ಸಮೂಹದ ಸಂಸ್ಕೃತಿಯು ಇದೆಯೋ ಅದರ ಬಗ್ಗೆ

ಅವರಿಗೆ ಅಷ್ಟು ಸಹಮತವು ಇಲ್ಲ. ಇದರಲ್ಲಿ ನಾವು ಯಾವ ನಿಲುವನ್ನು ತೆಗೆದುಕೊಳ್ಳುತ್ತೇವೆ ಎನ್ನುದು ಅತ್ಯಂತ ಮುಖ್ಯ. ಗಿರಿಯವರ ಗತಿಸ್ಥಿತಿ ಮತ್ತು ಸತ್ಯಕಾಮರ ಕುದುರೆ ಮೊಟ್ಟೆ ಕಾದಂಬರಿಗಳು ಹೇಳುವುದು ಬೌದ್ಧಿಕ ಏಕಾಂತತೆಯನ್ನು ಕುದುರೆ ಮೊಟ್ಟೆ ಕಾದಂಬರಿಯನ್ನು ಮತ್ತು ಕಾರಂತರ ಮರಳಿಮಣ್ಣಿಗೆ ಕಾದಂಬರಿಯನ್ನು ಒಟ್ಟಿಗೆ ನೋಡಿದರೆ ನಮಗೆ ಕಾರಂತರನ್ನು ಹೆಚ್ಚು ಓದಬೇಕು ಎಂದು ಅನಿಸುತ್ತದೆ. ಅದರಲ್ಲಿ ಸಂಕೇತವಿಲ್ಲ. ಏಕಾಕಿತನವೂ ಇಲ್ಲ. ಎರಡರ ಬೌದ್ಧಿಕ ರೂಪಗಳು ಬೇರೆಯಾಗುತ್ತವೆ. ಬೆಂಜಮಿನ್ ಮಾನಸಿಕವಾದ ರೌಕಿತನವನ್ನು ಕುರಿತು ಹೇಳುತ್ತಾನೆ. ಅದರಲ್ಲಿ ಅವನು ಚರಿತ್ರೆಯು ಹೇಗೆ ಪ್ರಭಾವಶಾಲಿಯಾಗಿದೆ ಎಂದೂ ಗುರುತಿಸುತ್ತಾನೆ. ಇದರ ಕುರಿತು ಹೇಳಿಕೊಳ್ಳುವಾಗ ಖಿನ್ನತೆ, ಉದ್ಯೋಗದ ಒತ್ತಡಗಳು, ಅನ್ಯತೆಯ ಪ್ರಶ್ನೆ ಮುಂತಾದವುಗಳಿಗೆ ಉತ್ತರವು ಸಿಕ್ಕದೇ ಹೋದಾಗ ನಾವು ಭಕ್ತಿಗೆ ಅಥವಾ ಧರ್ಮಕ್ಕೆ ಮೊರೆಹೋಗುವುದು ಅತ್ಯಂತ ಅನಿವಾರ್ಯವೂ ಹೌದು. ಯಾವುದು ನಮಗೆ ಆಧುನಿಕ ಎಂದು ಅನಿಸುತ್ತದೆಯೋ ಅದರಲ್ಲಿಯೂ ನಮಗೆ ಬೇರೆ ಬೇರೆ ವಿಧದ ವ್ಯಕ್ತಿಗಳು ಸಿಗುತ್ತಾರೆ. ಅವುಗಳ್ಳಿ ಅಸ್ತಿತ್ವವಾದ, ಭಯ, ಆತಂಕ ಮುಂತಾದವುಗಳೂ ಇವೆ. ಅದರಲ್ಲಿ ಒಂದು ಚಾರಿತ್ರಿಕವಾದ ಒಂದು ವ್ಯಂಗ್ಯವೂ ಇದೆ. ಮತ್ತೊಂದು ವಿಚಾರವನ್ನು ನಾವು ಇಲ್ಲಿ ಹೇಳಬೇಕು: ಬೆಂಜಮಿನ್ ಪೂರ್ಣತೆ ಎಂದು ಹೇಳುವಾಗ ಅದರಲ್ಲಿ ಒಂದು ನಿರ್ದಿಷ್ಟವಾದ ಅರ್ಥವೂ ಇದೆ. ಕುವೆಂಪು ಹೇಳಿದ ಪೂರ್ಣ ದೃಷ್ಟಿಯನ್ನು ಇಲ್ಲಿ ನೆನಪುಮಾಡಿಕೊಳ್ಳುವುದು ಸೂಕ್ತ. ಪೂರ್ಣ ಎನ್ನುವುದು ಒಂದು ಬಗೆಯಲ್ಲಿ ನಮ್ಮ ಸಾಧನೆಯೂ ಹೌದು.

– 2 –

ಮತ್ತೆ ಒಂದು ಪ್ರಶ್ನೆಯನ್ನು ನಾವು ಇಲ್ಲಿ ಕೈಗೆತ್ತಿಕೊಳ್ಳಬಹುದು: ಪಂಪನ ಎರಡೂ ಕಾವ್ಯಗಳಲ್ಲಿ ನಾಯಕರು ಇದ್ದಾರೆ. ಅವರಿಗೆ ಒಂದು ಪ್ರಾತಿನಿಧಿಕವಾದ ಅಸ್ತಿತ್ವವೂ ಇದೆ. ಭರತನು ಒಂದು ಜನಾಂಗವನ್ನು ಪ್ರತಿನಿಧಿಸುತ್ತಾನೆ. ಒಂದು ಕಾಲದ ಒಂದು ವಿಶಿಷ್ಟವಾದ ಸನ್ನಿವೇಶದ ಆಯಾಮವನ್ನು ಪಂಪನು ನಿರೂಪಿಸುತ್ತಾನೆ. ಅದರ ಜೊತೆಗೆ ಅವನು ನಿರ್ದಿಷ್ಟವಾದ ಮೌಲ್ಯವನ್ನು ಪ್ರತಿಪಾದಿಸುತ್ತಾನೆ. ಆದರೆ ಇಲ್ಲಿ ನಾವು ಮತ್ತೆ ಒಂದು ವಿಚಾರವನ್ನು ಹೇಳುವುದು ಅತ್ಯಂತ ಸೂಕ್ತ; ಹಳೆಯ ಕಾವ್ಯಗಳಲ್ಲಿ ನಾಯಕ, ಖಳನಾಯಕ ಮತ್ತು ಅವನ ಸಾಹಸ ಹಾಗೂ ನಿಜವಾದ ಸಮಸ್ಯೆಗಳು ವ್ಯಕ್ತವಾಗುತ್ತವೆ. ಪಂಪನು ಹತ್ತನೆಯ ಶತಮಾನದ ವಾಸ್ತವವನ್ನು ಹೇಳುತ್ತಾನೆ. ಕುಮಾರವ್ಯಾಸನ ಕಡೆಗೆ ಬರುವಾಗ

ಅದರ ರೂಪವು ಬದಲಾಗುತ್ತದೆ. ಕುಮಾರವ್ಯಾಸನು ನೀತಿ ಮತ್ತು ರಾಜಕಾರಣದ ದ್ವಂದ್ವವನ್ನು ನಿರೂಪಿಸುತ್ತಾನೆ. ಹಾಗೆ ನೋಡಿದರೆ ಆಧುನಿಕ ಯುಗದ ನಮ್ಮ ಜೀವನ ಮತ್ತು ಅದರ ಕ್ರಮವು ಬದಲಾಗಿದೆ. ಅದರ ಅರ್ಥವೂ ಪಲ್ಲಟವಾಗಿದೆ. ನಮ್ಮ ಅಸ್ತಿತ್ವವು ಒಂದು ಸ್ವಲ್ಪ ಸಮಸ್ಯಾತ್ಮಕವೂ ಆಗಿದೆ. ದೇಸಾಯಿಯರ ವಿಕ್ಷೇಪ ಕಾದಂಬರಿಯನ್ನು ನಾವು ಇಲ್ಲಿ ನೆನಪುಮಾಡಿಕೊಳ್ಳಬಹುದು. ಈವತ್ತು ನಮ್ಮ ಯಾವ ಆಲೋಚನೆಯ ಕ್ರಮವು ನಮ್ಮನ್ನು ರೂಪಿಸುತ್ತದೆ ಎಂದು ಹೇಳಲು ಆಗುತ್ತಿಲ್ಲ. ನಮ್ಮ ನೆನಪು ಮತ್ತು ನಮ್ಮ ಪರಂಪರೆ ಹಾಗೂ ನಮ್ಮ ಜೀವನದ ಕ್ರಮಕ್ಕೆ ಇರುವ ಸಂಬಂಧವನ್ನು ಬೆಂಜಮಿನ್ ಹೇಳುತ್ತಾನೆ. ಇದನ್ನು ಫ್ರಾಯ್ಡ್ ಸುಪ್ತವಾದ ನಮ್ಮ ಪ್ರಜ್ಞೆ, ಅದರ ನೆನಪು, ಹಾಗೂ ಅದರ ಸ್ವಯಂ ಕ್ರೋಢೀಕರಣವು ಹೇಗೆ ಇರುತ್ತದೆ. ಎಂದು ಪ್ರತಿಪಾದಿಸುತ್ತಾನೆ. ಆದರೆ ಬೆಂಜಮಿನ್ ನಮ್ಮ ಅನುಭವ ಎನ್ನುವುದು ನಮ್ಮ ಸಾಮಾಜಿಕ ನಿಯಮವನ್ನು ಅವಲಂಬಿಸುತ್ತದೆ ಎಂದು ಭಾವಿಸುತ್ತಾನೆ. ಬೆಂಜಮಿನ್ ಆಲೋಚನೆ, ಮತ್ತು ಸಂವೇದನೆಗೆ ಯಾವ ಬಗೆಯ ಸಂಬಂಧವು ಇದೆ ಎಂದು ಹೇಳುವಾಗ ಅನುಭವ ಎನ್ನುವುದು ಒಂದು ಸಂಸ್ಕೃತಿಯ ಮೂಲವನ್ನು ಹೊಂದಿರುತ್ತದೆ ಎಂದು ಅವನು ಭಾವಿಸುತ್ತಾನೆ. ಲಂಕೇಶ್ ಮತ್ತು ಅನಂತಮೂರ್ತಿ ಇಬ್ಬರೂ ನವ್ಯರೇ ಆದರೆ ಇಬ್ಬರೂ ಸಮಾಜವನ್ನು ನೋಡುವ ಕ್ರಮಗಳು ಬೇರೆ. ಅನಂತಮೂರ್ತಿಯವರು ಧರ್ಮ, ವ್ಯಕ್ತಿತ್ವ ಹಾಗೂ ಆಚರಣೆಗಳ ಪ್ರಶ್ನೆಗಳನ್ನು ಎತ್ತುತ್ತಾರೆ. ಆದರೆ ಇದು ಲಂಕೇಶ್ ಅವರ ಬರಹಕ್ಕೆ ಅಷ್ಟು ಮುಖ್ಯವಾಗುವುದೂ ಇಲ್ಲ. ಇಬ್ಬರ ಆಲೋಚನೆ ಮತ್ತು ಅದರ ಸ್ವಭಾವಗಳು ಬೇರೆ. ಆದರೆ ಲಂಕೇಶರಿಗೆ ಯಾವುದು ನೈತಿಕ ಎಂದು ಅನಿಸಿದಯೋ ಅದರ ತೀರ್ಮಾನವು ಅಷ್ಟು ಮುಖ್ಯವಲ್ಲ.ನವ್ಯಕ್ಕೆ ಬಂದಾಗ ಬುದ್ಧಿಜೀವಿಗಳು ಮತ್ತು ಅವರ ಸ್ಥಾನಮಾನವು ಬದಲಾಗಿತ್ತು. ಅವರ ಬರಹಗಳು ಮತ್ತು ಅವರ ನಿರೂಪಣೆಗಳು ನಮಗೆ ಬೇರೆ ವಿಚಾರಗಳನ್ನು ಹೇಳುತ್ತವೆ. ಬರಹದ ಮೂಲಕ ನಾವು ಮಾಡುವ ಒಂದು ಸಂವಹನವು ತನ್ನದೇ ಆದ ಒಂದು ವಿಶಿಷ್ಟತೆಯನ್ನು ಹೇಳುತ್ತದೆ ಎನ್ನುವುದು ಸತ್ಯ. ನಮ್ಮ ನಿರೂಪಣೆಯು ನಮ್ಮ ಸಂಸ್ಕೃತಿಯ ಒಂದು ಭಾಗವೂ ಆಗಿರುತ್ತದೆ. ಅದು ನಮ್ಮ ಜೀವನದ ಒಂದು ಭಾಗವೂ ಹೌದು. ಕಾರಂತರು ಮತ್ತು ರಾವ್ ಬಹಾದ್ದರರ ಕಾದಂಬರಿಗಳು ಒಂದು ಬಗೆಯ ಜೀವನದ ಕ್ರಮವನ್ನು ಹೇಳಿದರೆ ಗತಿಸ್ಥಿತಿಯು ಮತ್ತೊಂದು ಬಗೆಯ ಜೀವನದ ಕ್ರಮವನ್ನು ಹೇಳುತ್ತದೆ. ನಾವು ನಮಗೆ ಇರುವ ಭಾಷೆಯ ಮೂಲಕ ಅನೇಕವನ್ನು ಹೇಳುತ್ತೇವೆ. ಅದು ನಮಗೆ ನಮ್ಮ ಸಾಂಸ್ಕೃತಿಕವಾದ ಅನನ್ಯತೆಯೂ ಆಗಿದೆ. ನಿರೂಪಣೆ ಎನ್ನುವುದು ಒಂದು ಬಗೆಯಲ್ಲಿ ಒಂದು ನಿರ್ದಿಷ್ಟವಾದ ಸಂಹಿತೆಯೂ ಆಗಿರುತ್ತದೆ. ಸಾವು ಯಾವುದನ್ನು

ಹೇಗೆ ನಿರೂಪಣೆ ಮಾಡುತ್ತೇವೆ ಎನ್ನುವುದು ನಮ್ಮ ಸಾಮರ್ಥ್ಯಕ್ಕೆ ಸಂಬಂಧಪಟ್ಟ ಸಂಗತಿಯೂ ಹೌದು. ಆಧುನಿಕತಾವಾದ ಮತ್ತು ಸಮೂಹ ಸಂಸ್ಕೃತಿಗೆ ಒಂದು ರಾಚನಿಕ ಎನ್ನಬಹುದಾದ ಅಂಶಗಳೂ ಇವೆ. ಆಧುನಿಕತೆಗೆ ಮತ್ತು ಸಮೂಹಕ್ಕೆ ಯಾವ ಸಂಬಂಧವು ಇದೆ ಎಂದು ನಾವು ಮತ್ತೆ ಯೋಚನೆಯನ್ನು ಮಾಡಬೇಕಾದ ಅಗತ್ಯವೂ ಇದೆ. ಆಧುನಿಕ ತಂತ್ರಜ್ಞಾನವು ಹೇಗೆ ನಮ್ಮ ಸಮಾಜವನ್ನು ಆವರಿಸಿಕೊಳ್ಳುತ್ತದೆ ಎಂದು ಪ್ರತ್ಯೇಕವಾಗಿ ಹೇಳಬೇಕಾಗಿಲ್ಲ. ಸಮೂಹ ಸಂಸ್ಕೃತಿಗೆ ಒಂದು ಸನ್ನಿವೇಶವೂ ಇದೆ. ಅದರ ಜೊತೆಗೆ ಕಿರ್ಕೆಗಾರ್ಡ್ ಒಂದು ಮಾತನ್ನು ಹೇಳುತ್ತಾನೆ. ಪುನರಾವರ್ತನೆ ಎನ್ನುವುದು ಹೇಗೆ ಇರುತ್ತದೆ ಎನ್ನುವುದು ಅವನ ಅತ್ಯಂತ ಮುಖ್ಯವಾದ ನಿಲುವು. ಪುನರಾವರ್ತನೆ ಮತ್ತು ನೆನಪಿಸಿಕೊಳ್ಳುವುದು ಹೇಗೆ ಚಲನೆಯೂ ಹೌದು ಎಂದು ಅವನು ವಿವರಿಸುತ್ತಾನೆ. ಆದರೆ ಅವನು ಪುನರಾವರ್ತನೆ ಮತ್ತು ನೆನಪುಗಳನ್ನು ಬೇರೆ ಮಾಡುತ್ತಾನೆ. ನೆನಪು ಎನ್ನುವುದು ನೋವು. ಪುನರಾವರ್ತನೆಯು ಅಂಥಾ ನೋವನ್ನು ತರುವುದಿಲ್ಲ. ಆದರ್ಶ ಮತ್ತು ವಾಸ್ತವವು ಪರಸ್ಪರ ಸಂಧಿಸಿದಾಗ ಪುನರಾವರ್ತನೆ ಕಾಣಿಸುತ್ತದೆ. ಇದರಲ್ಲಿ ಅನೇಕ ರೀತಿಯ ವೈರುದ್ಧ್ಯಗಳು ಇರುತ್ತವೆ. ಆದರ್ಶ ಮತ್ತು ವಾಸ್ತವದ ನಡುವೆ ಒಂದು ಘರ್ಷಣೆಯು ಇದೆ ಎನ್ನುವುದನ್ನು ಅವನು ಒಪ್ಪುತ್ತಾನೆ. ಅವನು ಯಾವುದನ್ನು ಪುನಾರವರ್ತನೆ ಎಂದು ಹೇಳುತ್ತಾನೆಯೋ ಅದು ಅತ್ಯಂತ ಸರಳವಾಗಿ ನಡೆಯುವ ಒಂದು ಪ್ರಕ್ರಿಯೆ ಎಂದು ಭಾವಿಸಬೇಕಾದ ಅಗತ್ಯವಿಲ್ಲ. ನಾನು ಇರಬೇಕು, ನಾನು ಇರಬಾರದು ಅಥವಾ ನಾನು ಎರಡೂ ಆಗಿರಬಾರದು ಎನ್ನುವುದು ಅವನ ತಿಳುವಳಿಕೆಯು ಹೌದು. ಕಿರ್ಕೆಗಾರ್ಡ್‌ನಲ್ಲಿ ಇದು ಅತ್ಯಂತ ಮುಖ್ಯವಾದ ಒಂದು ಪರಿಕಲ್ಪನೆಯು ಆಗಿರುವುದು ನಿಜ. ಇದರ ಮತ್ತೊಂದು ವಿಸ್ತರಣೆಯುನ್ನು ನಾವು ಆಧುನುಕೋತ್ತರವಾದದಲ್ಲಿ ಕಾಣುತ್ತೇವೆ. ರಚನೋತ್ತರವಾದವು ಕೂಡಾ ಇದನ್ನು ವಿಸ್ತರಿಸುತ್ತದೆ. ಆದರೆ ಜೀನ್ ಬುಡಿಯಲಾರ್ಡ್ ಒಂದು ವಿಷಯದ ಕಡೆಗೆ ನಮ್ಮ ಗಮನವನ್ನು ಸೆಳೆಯುತ್ತಾನೆ. ಮೂಲವಿಲ್ಲದ ಪ್ರತಿಗಳು ಎನ್ನುವುದು ಅವನ ಪರಿಕಲ್ಪನೆಯೂ ಹೌದು. ಒಂದನ್ನು ಹೋಲುವ ಮತ್ತೊಂದು ಎನ್ನುವುದು ಬುಡಿಲಾರ್ಡನ ವಾದ. ಇದನ್ನು ಅವನು ಬೇರೆ ಅರ್ಥದಲ್ಲಿಯೂ ಬಳಸಿದ್ದಾನೆ. ಅವನು ಯಥಾ ನಕಲು ಎನ್ನುವುದನ್ನು ಒಪ್ಪುವುದಿಲ್ಲ. ನಮಗೆ ಅನೇಕ ವೈರುದ್ಧ್ಯಗಳು ಹೇಗೆ ಇರುತ್ತವೆ ಎನ್ನುವುದು ಅವನಿಗೆ ಅತ್ಯಂತ ಮುಖ್ಯ. ನಾವು ಉತ್ಪಾದಿಸುವ ಅನೇಕ ವಸ್ತುಗಳ ಕಚ್ಚಾ ಸಾಮಾಗ್ರಿಗಳು ಈವತ್ತು ಮೂಲವು ಇಲ್ಲದೆ ಬೇರೆ ಥರ ಇರುತ್ತದೆ. ಗಿರಾಕಿ ಕೇಂದ್ರಿತವಾದ ಬಂಡವಾಳವಾದವು ಹೇಗೆ ವಸ್ತುಗಳನ್ನು ಉತ್ಪಾದನೆ ಮಾಡುತ್ತದೆ

ಎಂದು ಅವನು ಹೇಳುತ್ತಾನೆ. ಕಚ್ಚ ಸಾಮಾಗ್ರಿ ಎನ್ನುವುದು ಅನೇಕ ಸನ್ನಿವೇಶದಲ್ಲಿ ಪ್ರಾಥಮಿಕ ಉತ್ಪಾದನೆಯ ರೀತಿಯಲ್ಲಿ ಇರುತ್ತದೆ. ಅದನ್ನು ದೊಡ್ಡ ಬಂಡವಾಳವಾದವು ತನಗೆ ಬೇಕಾದ ರೀತಿಯಲ್ಲಿ ಬಳಸುತ್ತದೆ. ಅವನು ಅದನ್ನು ಸಿಮಿಲಾಕ್ರಮ್ ಎಂದು ಹೇಳುತ್ತಾನೆ. ನಾವು ಈವತ್ತು ಕನ್ನಡಿಯಂತೆ ಯಾವುದನ್ನೋ ಒಂದನ್ನು ಪ್ರತಿಫಲಿಸುತ್ತದೆ ಎಂದು ಹೇಳಲು ಬರುವುದಿಲ್ಲ. ಈವತ್ತು ಯಾವುದೇ ಭೂಪಟ ಎನ್ನುವುದು ಇಲ್ಲ. ಭೂಪಟದ ಮಾರ್ಜಿನ್ ಎನ್ನುವುದನ್ನು ನಾವು ದಾಟಿದ್ದೇವೆ. ಯಾವುದು ಮೂಲವಾಗಿದೆ ಮತ್ತು ಯಾವುದು ನಕಲಾಗಿದೆ ಎಂದು ಈವತ್ತು ಊಹಿಸುವುದು ಅತ್ಯಂತ ಕಷ್ಟ. ಇದನ್ನು ಇನ್ನೊಂದು ಥರ ಕೇಳವಬಹುದು: ಯಾವುದು ಹೆಚ್ಚು ಅಥೆಂಟಿಕ್ ಮತ್ತು ಯಾವುದು ಅನ್ ಅಥೆಂಟಿಕ್? ಈವತ್ತು ಯಾವುದೇ ಜನಾಂಗವು ಕೂಡಾ ಅತ್ಯಂತ ಪವಿತ್ರವಾಗಿದೆ ಎಂದು ಹೇಳಲು ಸಾಧ್ಯವೇ ಇಲ್ಲ. ಅದರ ಜೊತೆಗೆ ಯಾವುದು ಈವತ್ತು ವಿಶ್ವಾತ್ಮಕವಾದ ಸತ್ಯ? ಈ ಪ್ರಶ್ನೆಯು ನಮ್ಮ ಮುಂದೆ ಇದೆ. ಇಲ್ಲಿ ಇನ್ನೊಂದು ಅಂಶವನ್ನು ನಾವು ಗಮನಿಸಬೇಕು: ಆಧುನಿಕ ಜಗತ್ತಿನಲ್ಲಿ ನಮ್ಮ ಮುಖಗಳು ಯಾಕೆ ಇಷ್ಟು ಬಾಡಿಹೋಗಿವೆ? ಅದರ ಜೊತೆಗೆ ನಾವು ಯಾಕೆ ಈವತ್ತು ಇಷ್ಟೊಂದು ಭ್ರಮೆಯನ್ನು ಇಷ್ಟ ಪಡುತ್ತೇವೆ? ಡಿಸ್ನಿಲ್ಯಾಂಡ್ ಇದಕ್ಕೆ ಒಂದು ಉದಾಹರಣೆಯು ಆಗಿದೆ. ನಮಗೆ ಈವತ್ತು ಒಂದು ಕೃತಕವಾದ ವಾತಾವರಣವನ್ನು ಸೃಷ್ಟಿಮಾಡಿಕೊಡಲಾಗಿದೆ. ಅದನ್ನು ನಾವು ನಿಜ ಎಂದು ನಂಬುವಂತೆ ಆಗಿದೆ. ಬುಡಿಲಿಯಾರ್ಡ್ ಮತ್ತೆ ಬೇರೆ ವಿಚಾರಗಳನ್ನು ಹೆಚ್ಚು ವಿಸ್ತಾರ ಮಾಡಿದ್ದಾನೆ. ಸಿನಿಮಾ ಮತ್ತು ಅದರ ಅವಕಾಶಗಳು ಈವತ್ತು ಬೇರೆಯಾಗಿವೆ. ಅದರ ಜೊತೆಗೆ ಈವತ್ತು ಸಂವಹನದ ಮಾಧ್ಯಮವು ಭಿನ್ನವಾಗಿವೆ. ಮುಖಾಮುಖಿ ಎನ್ನುವುದು ಹೇಗೆ ಬೇರೆಯಾಗಿದೆ ಎಂದು ಅವನು ನಿರೂಪಿಸುತ್ತಾನೆ. ನಾವು ಯಾವ ವಸ್ತುವನ್ನು ಹೇಗೆ ಖರೀದಿ ಮಾಡುತ್ತೇವೆ ಎನ್ನುವುದನ್ನು ಹೇಳುವಾಗ ಅವನು ಜಾಹೀರಾತು ಮತ್ತು ಅದರ ಪರಿಣಾಮವನ್ನು ಹೇಳುತ್ತಾನೆ. ಸಮಾಜದಲ್ಲಿ ಈವತ್ತು ಎಲ್ಲಾ ರೀತಿಯ ಯಂತ್ರಗಳು ಇವೆ. ಅವುಗಳು ಬೇರೆ ಬೇರೆ ರೀತಿಯ ಉತ್ಪಾದನೆಗಳನ್ನು ಮಾಡುತ್ತವೆ. ಅದರಲ್ಲಿ ಒಂದು ಮಾದರಿಯೆನ್ನುವುದು ಇಲ್ಲ. ಅವನು ಮತ್ತೊಂದು ಪ್ರಸ್ತಾವನೆಯನ್ನು ನಮ್ಮ ಮುಂದೆ ಇಟ್ಟಿದ್ದಾನೆ. ಈವತ್ತು ಯಾವುದು ನಮ್ಮ ಮುಂದೆ ಗಿರಾಕಿ ಕೇಂದ್ರಿತವಾದ ಸಂಸ್ಕೃತಿಯೆನ್ನುವುದು ಇದೆಯೋ ಅದರಲ್ಲಿ ಅನೇಕ ಸಂಗತಿಗಳು ಇವೆ. ಅದರಲ್ಲಿ ಸಂಸ್ಕೃತಿಗೆ ಸಂಬಂಧ ಪಟ್ಟ ಸಂಗತಿಗಳು ಇವೆ ಎನ್ನುವುದು ಅವನ ಮಾತು. ಕಲೆಯು ಯಾವತ್ತೂ ಮಾರಾಟದ ಸೊತ್ತು ಆದಾಗ ಅದರ ಅರ್ಥವು ಬೇರೆಯಾಗುತ್ತದೆ. ಜನರು ಮತ್ತು ಅವರ ಅಭಿರುಚಿಯು ವಸ್ತುವನ್ನು

ಉತ್ಪಾದಿಸಲು ಬೇಕಾದ ಪರಿಸರವನ್ನು ಸೃಷ್ಟಿ ಮಾಡುತ್ತದೆ. ಯಾವುದೋ ಒಂದು ನಿರ್ದಿಷ್ಟವಾದ ಸನ್ನಿವೇಶವು ಒಂದು ಉತ್ಪಾದನೆಗೆ ಬೇಕಾದ ಅಗತ್ಯವನ್ನು ಸೂಚಿಸುತ್ತದೆ. ಅನೇಕ ಸಂದರ್ಭದಲ್ಲಿ ಸಂಸ್ಕೃತಿ ಎನ್ನುವ ಪದವು ನಮಗೆ ಸೀಮಿತವಾದ ಅರ್ಥವನ್ನು ಮಾತ್ರವೇ ಸೂಚಿಸುತ್ತದೆ. ಸಂಸ್ಕೃತಿಯನ್ನು ಮಾನವಶಾಸ್ತ್ರವು ನೋಡುವುದು ಒಂದು ಥರ. ಅದರ ಹಿಂದೆ ಇರುವ ತಾತ್ವಿಕತೆಯು ಒಂದು ಬಗೆಯಲ್ಲಿ ಇರುತ್ತದೆ. ಮನೆ ಮತ್ತು ಅದರ ವಿನ್ಯಾಸವು ಈವತ್ತು ಹೇಗೆ ಇದೆ ಎಂದು ವಿವರಿಸುವಾಗ ಅವನೇ ಹೇಳುತ್ತಾನೆ: ಆಧುನಿಕ ಮನೆಗಳಲ್ಲಿ ಪಿತೃಕೇಂದ್ರಿತ ಮತ್ತು ಬೂರ್ಜ್ವಾ ಸಂಸ್ಕೃತಿಯು ಇವತ್ತು ಎದ್ದು ಕಾಣಿಸುತ್ತದೆ. ಸಂಸ್ಕೃತಿ ಮತ್ತು ಅದರ ಪ್ರಶ್ನೆಗಳು ಈವತ್ತು ಹೇಗೆ ಇದೆ ಎಂದರೆ ಒಬ್ಬೊಬ್ಬರು ಒದೊಂದು ಥರ ವ್ಯಾಖ್ಯಾನವನ್ನು ಮಾಡುತ್ತಾರೆ. ಅಭಿರುಚಿ ಮತ್ತು ಸಂಸ್ಕೃತಿಗೆ ಸಂಬಂಧವನ್ನು ಕಲ್ಪಿಸಲಾಗಿದೆ. ಮತ್ತೆ ಕೆಲವರು ಸಂಸ್ಕೃತಿಯೆಂದರೆ ಅದು ನಿಸರ್ಗದ ಕೊಡುಗೆ ಎಂದು ಹೇಳುತ್ತಾರೆ. ವೈಜ್ಞಾನಿಕವಾದಗಳು ಸಂಸ್ಕೃತಿಯು ಶಿಕ್ಷಣ ಮತ್ತು ವಿಜ್ಞಾನದ ಸಂಬಂಧವನ್ನು ಹೇಳುತ್ತದೆ. ಆಧುನಿಕ ಸರ್ವೆಗಳು ಮತ್ತೊಂದು ವಿವರಣೆಯನ್ನು ಕೊಡುತ್ತವೆ. ಸಾಹಿತ್ಯ ಮತ್ತು ಚಿತ್ರಕಲೆಗಳು ಸಂಸ್ಕೃತಿಯನ್ನು ಬರಹ ಮತ್ತು ಸಂಗೀತ, ಚಿತ್ರಗಳನ್ನು ಒಂದು ಮಾನದಂಡವಾಗಿ ಇಟ್ಟುಕೊಂಡಿವೆ. ಮತ್ತೆ ಅನೇಕರು ಪಠ್ಯೇತರ ಚಟುವಟಿಕೆಯನ್ನು ಸಂಸ್ಕೃತಿಯೆಂದು ಹೇಳುವವರು ಇದ್ದಾರೆ. ಆದರೆ ನಾವು ತುಂಬಾ ತೀವ್ರವಾಗಿ ನೋಡಬೇಕಾದ್ದು ವರ್ಗ ಮತ್ತು ಸಂಸ್ಕೃತಿಗೆ ಇರುವ ಸಂಬಂಧವನ್ನು. ಮತ್ತೊಂದು ಅರ್ಥದಲ್ಲಿ ಸಂಸ್ಕೃತಿ ಎನ್ನುವುದು ನಮಗೆ ಮತ್ತೊಂದು ಸೂಚನೆಯನ್ನು ಕೊಡುತ್ತದೆ. ಯಾವುದು ನಮಗೆ ಅತ್ಯಂತ ಸಭ್ಯ ಎಂದು ಅನಿಸುತ್ತದೆಯೋ ಅದನ್ನು ನಾವು ಸಂಸ್ಕೃತಿಯೆಂದು ಹೇಳುತ್ತೇವೆ. ನಾಗರಿಕ ಜಗತ್ತು ಸಂಸ್ಕೃತಿಯನ್ನು ಮತ್ತು ನಾಗರಿಕತೆಯನ್ನು ಜೊತೆಗೆ ಸಮೀಕರಿಸುತ್ತದೆ. ಆದರೆ ನಮಗೆ ಯಾವುದೇ ಅರಿವು ಇಲ್ಲದಂತೆ ನಾವು ಹಾಕಿಕೊಳ್ಳುವ ಬಟ್ಟೆಗಳು ನಮ್ಮ ವರ್ಗವನ್ನು ಹೇಳುತ್ತವೆ. ಅದರಲ್ಲಿಯೂ ನಮಗೆ ವರ್ಗಗಳು ಮತ್ತು ಅದರ ತಾರತಮ್ಯಗಳು ಇವೆ, ನಾವು ಸೇವಿಸುವ ಆಹಾರಗಳು ನಮ್ಮ ಅಭಿರುಚಿಯನ್ನು ಮಾತ್ರವೇ ಹೇಳುವುದಿಲ್ಲ, ಅದರ ಜೊತೆಗೆ ಅವುಗಳು ನಮ್ಮ ತಾರತಮ್ಯವನ್ನು ನಿರೂಪಿಸುತ್ತದೆ. ಸಂಸ್ಕೃತಿಯನ್ನು ಒಂದು ವರ್ಗಕ್ಕೆ ಮೀಸಲು ಎಂದು ಹೇಳಿದ್ದರಿಂದ ಈವತ್ತು ನಮಗೆ ಒಂದು ಸಮಸ್ಯೆಯು ಆಗಿದೆ.ಅದನ್ನು ಒಂದು ಸಮಾಜದ ಗಣ್ಯರಿಗೆ ಮಾತ್ರವೇ ಮೀಸಲು ಎಂದು ಹೇಳಲಾಯಿತು. ಉನ್ನತ ವರ್ಗ ಮತ್ತು ಅವರ ಸಂಸ್ಕೃತಿಯು ಅನುಕರಣ ಯೋಗ್ಯ ಎಂದು ಭಾವಿಸಿದರು. ಅದರ ಜೊತೆಗೆ ಸಂಸ್ಕೃತಿಯು ಹೊಸದಾದ ಒಂದು ವ್ಯಾಕ್ಯೆ ಎಂದು

ಹದಿನೇಳನೆಯ ಶತಮಾನದ ತರುವಾಯ ಅನೇಕರು ಭಾವಿಸಿದರು. ಸಂಸ್ಕೃತಿಯೆಂದರೆ ಅದು ಕಲೆಗೆ ಮಾತ್ರವೇ ಅನ್ವಯವಾಗುತ್ತದೆ ಎಂದು ಭಾವಿಸಿದ್ದು ನಿಜ. ಅದು ಎಷ್ಟು ಮುಂದುವರಿಯಿತು ಎಂದರೆ ತರಗತಿಯನ್ನು ಅದನ್ನು ಕಲಿಕೆಯ ಭಾಗ ಎಂದು ತಿಳಿದುಕೊಂಡು ಅದನ್ನು ಸಿಲೆಬಸ್‌ನಲ್ಲಿ ಕೂಡಾ ತಂದರು. ಸಂಸ್ಕೃತಿಯನ್ನು ಅಧ್ಯಯನ ಮಾಡುವುದು ಅಂದರೆ ಅದನ್ನು ಬೌದ್ಧಿಕವಾಗಿ ನೋಡುವುದೂ ಹೌದು. ಅದರ ಜೊತೆಗೆ ಅದು ನಮಗೆ ಅನುಭವಕ್ಕೆ ಹೇಗೆ ದಕ್ಕುತ್ತದೆಯೋ ಆದರ ರೀತಿಯಲ್ಲಿ ವ್ಯಾಖ್ಯೆಯನ್ನು ಮಾಡುವುದು ಎಂದು ತಿಳಿದರು. ಸಂಸ್ಕೃತಿ ಮತ್ತು ಅದರ ಅಧ್ಯಯನ ಎನ್ನುವುದು ಅತ್ಯಂತ ಸೂಕ್ಷ್ಮವಾದ ಒಂದು ಹಂತಕ್ಕೆ ಹೋಗಿದ್ದು ಸತ್ಯ. ಭಾಷೆ ಮತ್ತು ಅದರ ಸೂಕ್ಷ್ಮತೆ ಎನ್ನುವುದು ಹೇಗೆ ಇರುತ್ತದೆ ಎಂದರೆ ಅದು ಕೆಲವು ವರ್ಗೀಕರಣವನ್ನು ಮಾಡುತ್ತದೆ. ಇದರಿಂದ ನೋಟ ಮತ್ತು ಜ್ಞಾನಕ್ಕೆ ಒಂದು ಸಂಬಂಧವೂ ಸಾಧ್ಯವಾಯಿತು. ನಮಗೆ ಇಲ್ಲಿ ಇನ್ನೊಂದು ಅತ್ಯಂತ ಸೂಕ್ಷ್ಮವಾದ ಸಂಗತಿಯು ಇದೆ. ನಾವು ಈವತ್ತು ಸಂಸ್ಕೃತಿಯನ್ನು ಮತ್ತು ಸಭ್ಯತೆ, ಮನೆ, ಜೀವನದ ಕ್ರಮ ಮುಂತಾದವುಗಳಿಗೆ ಅನ್ವಯ ಮಾಡುತ್ತೇವೆ. ಇದು ಈವತ್ತು ಸಂಸ್ಕೃತಿಯನ್ನು ಮತ್ತು ಕಲೆಗೆ ಅನ್ವಯವನ್ನು ಮಾಡುವುದರಿಂದ ಯಾರಿಗೆ ಅದರ ನಿಜವಾದ ಒಳಗುಟ್ಟು ಅರ್ಥವಾಗುತ್ತದೆಯೋ ಅವರಿಗೆ ಹೆಚ್ಚು ಮಾನ್ಯತೆಯು ದೊರೆಯುತ್ತದೆ. ಹಾಗೆ ನೋಡಿದರೆ ನಾವು ಈವತ್ತು ಹೇಳುತ್ತಿರುವ ಅಭಿರುಚಿ ಎನ್ನುವ ಪ್ರಶ್ನೆಯು ಸಮಾಜ ಮತ್ತು ಮನಸ್ಸನ್ನು ಸೂಚಿಸುತ್ತದೆ. ಹಾಗೆಯೇ ಇದು ಯಜಮಾನಿಕೆ ಮತ್ತು ಅದು ರೂಪಿಸುವ ಚಟುವಟಿಕೆಗೆ ಸಂಬಂಧ ಪಟ್ಟು ಇದೆ ಎನ್ನುವುದು ಖಚಿತ. ಪ್ರಭುತ್ವವು ನಮಗೆ ಶಿಕ್ಷಣವನ್ನು ಕೊಡುತ್ತದೆ. ಅದರ ಜೊತೆಗೆ ನಾವು ಹೇಗೆ ಇರಬೇಕು ಎಂದು ಸೂಚಿಸುತ್ತದೆ. ನಾವು ಹೆಚ್ಚು ಸುಸಂಸ್ಕೃತವಾಗಿ ಇರಬೇಕು ಎಂದು ಅದು ಬಯಸುತ್ತದೆ. ಆದರೆ ಸಂಸ್ಕೃತಿಯೆನ್ನುವದು ಒಂದು ಚಲನೆ. ಅದಕ್ಕೂ ಕೆಲವು ನಿರ್ದಿಷ್ಟವಾದ ಕೆಲವು ಕೌಶಲ ಮತ್ತು ಅಭ್ಯಾಸಗಳು ಇರುತ್ತವೆ. ಅದು ಸ್ವಯಂಪ್ರತಿಪಾದನೆಯನ್ನು ಮಾಡುತ್ತದೆ. ಶಿಕ್ಷಣವು ನಮ್ಮಲ್ಲಿ ಕೆಲವು ಪರಿವರ್ತನೆಯನ್ನು ತರುವುದು ಸತ್ಯ. ನಮ್ಮ ಜ್ಞಾನ ಮತ್ತು ಅದರ ಸ್ವರೂಪಕ್ಕೂ ಸಂಸ್ಕೃತಿಗೂ ಒಂದು ಸಂಬಂಧವು ಇದೆ. ಹಾಗೆ ನೋಡಿದರೆ ಒಂದು ಸಮಾಜದಲ್ಲಿ ಅನೇಕ ಗುಂಪುಗಳ ನಡುವೆ ಒಂದು ನಿರ್ದಿಷ್ಟವಾದ ಸಂಬಂಧವು ಇರುತ್ತದೆ. ಭಿನ್ನತೆಯು ಇರುತ್ತದೆ ಅದರ ಜೊತೆಗೆ ಅದರಲ್ಲಿ ಸಹಕಾರ ಮತ್ತು ಸಂಬಂಧವೂ ಇರುತ್ತದೆ. ಹೀಗೆ ಇರುವಾಗ ನಾವು ಸಂಸ್ಕೃತಿಯನ್ನು ಕುರಿತು ಹೇಳುತ್ತೇವೆ. ಅದರ ಜೊತೆಗೆ ಸಾಂಸ್ಕೃತಿಕ ಬಂಡವಾಳ ಮತ್ತು ಮಾರುಕಟ್ಟೆಗೆ ಒಂದು ಸಂಬಂಧವು

ರೂಪುಗೊಳ್ಳುತ್ತವೆ. ಸಂಸ್ಕೃತಿ ಮತ್ತು ಅದರ ಚರ್ಚೆಯು ಒಂದು ಆಟವನ್ನು ಇದ್ದಂತೆ. ಆದರೆ ಅದು ನಿಜವಾದ ಒಂದು ಆಟ. ಅದರಲ್ಲಿ ಕೆಲವರು ರಕ್ಷಣೆಯನ್ನು ಪಡೆಯುತ್ತಾರೆ. ಆದ್ದರಿಂದ ಅನೇಕ ಲೇಖಕರು ಸಂಸ್ಕೃತಿಯ ಆಳದಲ್ಲಿ ಇರುವ ಸತ್ಯವನ್ನು ಅರ್ಥ ಮಾಡಿಕೊಳ್ಳುವುದಿಲ್ಲ. ಉತ್ಪಾದನೆ ಎನ್ನುವುದಕ್ಕೆ ಒಂದು ಸಂಸ್ಕೃತಿಯು ಇರುತ್ತದೆ. ಸಮಾಜದ ಉತ್ಪಾದನೆ ಮತ್ತು ಸಾಂಸ್ಕೃತಿಕವಾದ ಉತ್ಪಾದನೆ ಎನ್ನುವುದು ನಿಜವಾದ ಸಮಸ್ಯೆ. ನಾವು ಯಾವ ತಾತ್ವಿಕತೆಯನ್ನು ಹೊಂದಿದ್ದೇವೆಯೋ ಅದಕ್ಕೆ ಅನುಸಾರವಾಗಿ ಇದನ್ನು ನೋಡುತ್ತೇವೆ. ಬಲಪಂಥೀಯರು ಸಂಪ್ರದಾಯವನ್ನು ಮಾತ್ರವೇ ಸಂಸ್ಕೃತಿಯೆಂದು ತೀರ್ಮಾನ ಮಾಡುತ್ತಾರೆ. ಎಡಪಂಥದವರು ಸಂಸ್ಕೃತಿಯನ್ನು ನೋಡುವುದಕ್ಕೂ ಬಲದಪಂಥದವರು ಸಂಸ್ಕೃತಿಯನ್ನು ಗ್ರಹಿಸುವುದಕ್ಕೂ ಅನೇಕ ವ್ಯತ್ಯಾಸವಿದೆ. ವಿಜ್ಞಾನವನ್ನು ಬಲಪಂಥದವರು ಒಪ್ಪುವುದಿಲ್ಲ. ಒಂದು ಅಂಕಿ ಅಂಶದ ಪ್ರಕಾರ ಯಾರು ಯಾವ ರೀತಿಯ ಬಟ್ಟೆಯನ್ನು ಧರಿಸುತ್ತಾರೆ, ಯಾರು ಸಾಂಸ್ಕೃತಿಕ ಉತ್ಪಾದನೆಯನ್ನು ಕೊಂಡುಕೊಳ್ಳುತ್ತಾರೆ ಎಂದು ನೋಡಿದರೆ ಅದರಲ್ಲಿ ಸುಶಿಕ್ಷಿತರು ಮತ್ತು ಮೇಲು ಮಧ್ಯಮವರ್ಗದವರು ಹೆಚ್ಚು ಸಂಖ್ಯೆಯಲ್ಲಿ ಇದ್ದರು. ಅದರ ಜೊತೆಗೆ ಅವರ ಅಭಿರುಚಿಯು ಬೇರೆಯಾಗಿತ್ತು. ಅವರ ಸಾಮಾಜಿಕ ಮೂಲವೂ ಭಿನ್ನವಾಗಿತ್ತು. ಸಾಮಾಜಿಕ ಮೂಲ ಎಂದರೆ ಇಲ್ಲಿ ಯಾರು ಸುಶಿಕ್ಷಿತರು ತಮ್ಮ ಬಟ್ಟೆ ಮತ್ತು ಅದರ ಬಗೆಗೆ ಹೆಚ್ಚು ಗಮನವನ್ನು ಕೊಟ್ಟವರು. ಹಾಗಿದ್ದರೂ ಅವರ ಸ್ವಂತ ಸಂಪಾದನೆಗಿಂತ ಹೆಚ್ಚಾಗಿ ಅವರ ತಂದೆಯನ್ನು ಅವಲಂಬಿಸಿದ್ದರು.ಅವರ ಅಯ್ಕೆಯು ಬೇರೆ. ಒಂದು ಉದಾಹರಣೆಯನ್ನು ಕೊಡಬೇಕಿದ್ದರೆ ಅತ್ಯಂತ ಸಾಮಾನ್ಯವಾದ ಬಟ್ಟೆಯನ್ನು ಕೊಂಡುಕೊಳ್ಳುವುದು ಸ್ಥಾನಮಾನದ ದೃಷ್ಟಿಯಿಂದ ಕಡಿಮೆ ಎಂದು ಅನೇಕರು ತಿಳಿಯುತ್ತಾರೆ. ಇದು ಕೂಡಾ ಸಂಸ್ಕೃತಿಯ ವ್ಯಾಖ್ಯೆಯ ಮೇಲೆ ಪ್ರಭಾವವನ್ನು ಬೀರುವುದರ ಮೂಲಕ ಕೆಲವನ್ನು ಹೆಚ್ಚು ಅಧಿಕೃತ ಎಂದು ಮಾನ್ಯ ಮಾಡಲಾಗುತ್ತದೆ. ಆಗ ಉಳಿದ ಸಂಗತಿಗಳು ಅನಧಿಕೃತ ಎಂದಾಗುತ್ತದೆ. ಅದರ ಜೊತೆಗೆ ಶಾಲೆಗಳು ಕೂಡಾ ಕೆಲವು ಸಂಹಿತೆಗಳನ್ನು ಹೇಳುತ್ತವೆ. ತಂತ್ರಗಳನ್ನು ರೂಪಿಸುತ್ತವೆ. ಶಿಕ್ಷಣ ಮತ್ತು ಅದರ ಪ್ರದರ್ಶನಕ್ಕೆ ಒಂದು ಸಂಬಂಧವು ಇದೆ.ಅವರ ನಡೆ ಮತ್ತು ನುಡಿಗಳನ್ನು ಅತ್ಯಂತ ಸಭ್ಯ ಎಂದು ಕರೆಯುತ್ತೇವೆ. ನಾವು ಮತ್ತೊಂದು ವರ್ಗೀಕರಣವನ್ನು ಮಾಡಿದ್ದೇವೆ. ಚಿತ್ರವನ್ನು ಬರೆಯುವುದು, ಸಂಗೀತವನ್ನು ಹೇಳುವುದು, ಕತೆಯನ್ನು ಬರೆಯುವುದು, ಆಟವಾಡುವುದು ನಮಗೆ ಶೈಕ್ಷಣಿಕವಾದ ಸಂಗತಿಯಾಗಿದೆ ಎಂದು ಅನಿಸುವುದಿಲ್ಲ. ಇದರಲ್ಲಿಯೂ ತಾರತಮ್ಯವಿದೆ. ಒಂದು ವರ್ಗವು ಒಂದನ್ನು

ಒಪ್ಪುತ್ತದೆ. ಮತ್ತೊಂದು ವರ್ಗವು ಮತ್ತೊಂದು ಸಂಗತಿಯನ್ನು ಅಂಗೀಕರಿಸುತ್ತದೆ. ನಾಟಕದಲ್ಲಿ ಪಾತ್ರವನ್ನು ಮಾಡುವುದು ಒಂದು ಉತ್ಪಾದಕವಾದ ಶಕ್ತಿಯು ಅಲ್ಲವೆಂದು ಅನೇಕರು ಭಾವಿಸುತ್ತಾರೆ. ಲಘು ಸಂಗೀತ ಮತ್ತು ಜನಪ್ರಿಯವಾದ ಸಂಗೀತ, ಶಾಸ್ತ್ರೀಯ ಸಂಗೀತ ಎಂದು ನಾವು ವ್ಯತ್ಯಾಸವನ್ನು ಮಾಡುತ್ತೇವೆ. ಹೀಗೆ ಮಾಡುವಾಗ ಲಘು ಸಂಗೀತವನ್ನು ಕೇಳುವುದು ಮತ್ತು ಶಾಸ್ತ್ರೀಯ ಸಂಗೀತವನ್ನು ಕೇಳುವುದು ಬೇರೆ ಬೇರೆ ಮಾದರಿಯ ಪ್ರಕ್ರಿಯೆ ಎಂದು ನಾವು ಅರ್ಥ ಮಾಡಿಕೊಳ್ಳುವುದು ಅತ್ಯಂತ ಸೂಕ್ತ. ಅದರಲ್ಲಿಯೂ ಚಿತ್ರವನ್ನು ಖರೀದಿ ಮಾಡುವ ಒಂದು ವರ್ಗವು ಇದೆ. ಶ್ರೀಮಂತರು ಚಿತ್ರವನ್ನು ಖರೀದಿ ಮಾಡಿ ಅದನ್ನು ತಮ್ಮ ಮನೆಯ ಗೋಡೆಯಲ್ಲಿ ನೇತು ಹಾಕುತ್ತಾರೆ. ಅದನ್ನು ಘನತೆ ಎಂದು ತಿಳಿಯುತ್ತಾರೆ. ಅದನ್ನು ನಾವು ಅತ್ಯಂತ ಶಿಷ್ಟವಾದ ಒಂದು ಅಭಿರುಚಿ ಎಂದು ಭಾವಿಸುತ್ತೇವೆ. ಇದರ ಅರ್ಥವು ಇಷ್ಟೆ: ಆಯ್ಕೆ ಎನ್ನುವುದು ಈವತ್ತು ಬರೀ ಗಿರಾಕಿಯನ್ನು ಮಾತ್ರವೇ ಅವಲಂಬಿಸಿಲ್ಲ. ಅದರ ಜೊತೆಗೆ ಯಾವುದು ಪ್ರಕಾರಗಳು, ಯಾವುದು ಜನರಿಗೆ ಹೆಚ್ಚು ಇಷ್ಟವಾಗುತ್ತದೆ ಇತ್ಯಾದಿ ಮಾನದಂಡಗಳು ನಮ್ಮ ಮುಂದೆ ಇವೆ. ಆದ್ದರಿಂದ ಅವರವರ ಅಭಿರುಚಿ ಮತ್ತು ಅವರ ನೆಲೆಗಳು ಬರೀ ಒಂದು ಸಂಗತಿಯು ಅಲ್ಲ, ಅದರ ಜೊತೆಗೆ ಬೇರೆ ವಿಷಯಗಳೂ ಸೇರಿಕೊಂಡಿವೆ.



# ಸಾಂಸ್ಕೃತಿಕ ಸಭ್ಯತೆಯು ಪ್ರಶ್ನೆ

ನಮಗೆ ಈ ಸಭ್ಯತೆ ಮತ್ತು ಅದರ ನಿರೂಪಣೆಯ ಪ್ರಶ್ನೆಯು ಈವತ್ತು ಬೇರೆ ಅರ್ಥಗಳನ್ನು ಹೊಂದಿರುವುದು ನಿಜ. ಸಭ್ಯತೆ ಎನ್ನುವುದು ನಮಗೆ ನಮ್ಮ ಶಾಲಾಜೀವನವನ್ನು ಒಂದು ಮಾನದಂಡವಾಗಿ ಇಟ್ಟುಕೊಂಡಿದೆ. ಸಾಂಸ್ಕೃತಿಕವಾಗಿ ಎರಡು ಪ್ರಕ್ರಿಯೆಗಳು ನಡೆಯುತ್ತವೆ. ಒಂದು ಅವಲಂಬಿತನ. ಆದರೆ ಮತ್ತೊಂದು ಮತ್ತು ಅವಲಂಬನೆಯು ಇಲ್ಲದ ಕ್ರಮಗಳು. ಸಾಂಸ್ಕೃತಿಕವಾದ ಬಂಡವಾಳವಾದವು ಅನೇಕವನ್ನು ತನ್ನ ಹಿಡಿತದಲ್ಲಿ ಇಟ್ಟುಕೊಳ್ಳುತ್ತದೆ. ಇದರ ಪರಿಣಾಮವಾಗಿ ಅನೇಕರು ಇದನ್ನು ಅವಲಂಬಿಸುವ ಪರಿಸ್ಥಿತಿಯು ಬರುತ್ತದೆ. ಹಾಗೆ ನೋಡಿದರೆ ಮನಸ್ಸು ಮತ್ತು ದೇಹದ ನಿಲುವುಗಳನ್ನು ಬೇರೆ ಯಾವುದೋ ನಿಲುವುಗಳು ನಮ್ಮನ್ನು ನಿಯಂತ್ರಣ ಮಾಡುವುದು ಸತ್ಯ. ಸಾಂಸ್ಕೃತಿಕ ಬಂಡವಾಳವಾದವು ಸಾಂಸ್ಥಿಕ, ವಸ್ತು ನಿಷ್ಟ ಮತ್ತು ಸಾಕಾರ ರೂಪದಲ್ಲಿ ಇರುತ್ತದೆ. ಅಷ್ಟೇ ಅಲ್ಲ ಅವಲಂಬನೆ ಮತ್ತು ನಿರಾವಲಂಬನೆ ಎನ್ನುವುದು ಬೇರೆ ಬೇರೆ ಥರ ಇರಲು ಸಾಧ್ಯವಿದೆ.ಅದು ಆರ್ಥಿಕವಾದ ಬಂಡವಾಳದ ಜೊತೆಗೆ ಸಂಬಂಧವನ್ನು ಇಟ್ಟುಕೊಂಡಿರುತ್ತದೆ. ನಾವು ಯಾವುದನ್ನು ಅವಲಂಬಿಸುತ್ತೇವೆ ಎನ್ನುವುದು ಅತ್ಯಂತ ಮುಖ್ಯ. ಬಂಡವಾಳ, ಅಭ್ಯಾಸ ಮತ್ತು ಅವುಗಳ ಜೊತೆಗೆ ನಾವು ಇರಿಸಿಕೊಳ್ಳುವ ಸಂಬಂಧಗಳು ಅತ್ಯಂತ ಮುಖ್ಯ. ಅನೇಕ ಸಮಾಜಶಾಸ್ತ್ರಜ್ಞರು ಒಂದು ಸ್ಥಿರತೆಯನ್ನು ಮಾತ್ರವೇ ಕಾಣುತ್ತಾರೆ. ಆದ್ದರಿಂದ ಅವರ ನಿಲುವುಗಳು ಒಂದು ಸ್ಥಗಿತವಾದ ದೃಷ್ಟಿಕೋನವನ್ನು ಹೊಂದಿರುತ್ತದೆ. ನಮ್ಮ ಸಾಮಾಜಿಕ ಅಧ್ಯಯನಗಳು ಈ ಬಗೆಯ ನಿಲುವನ್ನು ತಳೆಯುತ್ತವೆ. ಅದರ ಗಡಿಯನ್ನು ಅವು ದಾಟುವುದಿಲ್ಲ. ಸಮಾಜವೆಂದರೆ ಅದು ಸ್ಥಿರವಾದ ಒಂದು ರೂಪವಲ್ಲ. ಅದು ಬದಲಾಗುತ್ತದೆ. ಅದರ ಜೊತೆಗೆ ಅದರ ಮೌಲ್ಯಗಳು ಬದಲಾಗುತ್ತದೆ. ಯಾವುದು ನಮಗೆ ಅತ್ಯಂತ ಉನ್ನತವಾದ ಒಂದು ವರ್ಗ ಎಂದು ಭಾವಿಸುತ್ತೇವೆಯೋ ಅದರ ರಚನೆಯಾಗುವುದು ಬೇರೆ ಬೇರೆ ಕಾರಣಗಳಿಂದ. ಆದ್ದರಿಂದ ಸಮಾಜ ಮತ್ತು ಅದರ ಸಂಬಂಧಗಳ ನಿರ್ವಹಣೆಯಲ್ಲಿ

ಇದು ಅತ್ಯಂತ ಪ್ರಧಾನವಾದ ಒಂದು ಪಾತ್ರವನ್ನು ವಹಿಸುತ್ತದೆ. ಇಲ್ಲಿ ಇನ್ನೊಂದು ಅಂಶವನ್ನು ಗಮನಿಸಬೇಕು: ಅವಲಂಬಿತ ವರ್ಗ ಎನ್ನುವುದು ಯಾವತ್ತೂ ಇನ್ನೊಂದನ್ನು ಅನುಸರಿಸುತ್ತದೆ. ಉದಾಹರಣೆಗೆ ಒಂದು ವರ್ಗವು ಶ್ರೇಷ್ಠ ಎಂದು ಅನಿಸಿದರೆ ಅದನ್ನು ಅವಲಂಬಿತ ವರ್ಗವು ಅನುಸರಿಸುತ್ತದೆ. ಅವಲಂಬಿತ ವರ್ಗದಲ್ಲಿ ಆ ಮನೋಸ್ಥಿತಿಯು ಇರುತ್ತದೆ. ಎಲ್ಲಿ ವಾಸವನ್ನು ಮಾಡುತ್ತದೆ. ಯಾರನ್ನು ಅವಲಂಬಿಸುತ್ತದೆ. ಎನ್ನುವುದು ಪ್ರದಾನ ಸ್ಥಳ ಮತ್ತು ಅವಕಾಶವು ಏನು ಎನ್ನುವುದು ಮುಖ್ಯ. ಶ್ರೇಷ್ಠವಾದ್ದು ತನಗೆ ಬೇಕಾದ್ದನ್ನು ಖರೀದಿ ಮಾಡುತ್ತದೆ. ಅಷ್ಟೇ ಅಲ್ಲ ಇಲ್ಲಿ ಅದರ ಹವ್ಯಾಸವು ಉಳಿದ ವರ್ಗಕ್ಕಿಂತ ಬೇರೆಯಾಗಿರುತ್ತದೆ. ಸಂಗೀತ ಮತ್ತು ಅದರ ಆಸ್ವಾದನೆ, ಚಿತ್ರಕಲೆಯನ್ನು ವೀಕ್ಷಣೆ ಮಾಡುವುದು, ಜಾಲಿ ಟ್ರಿಪ್ ಎನ್ನುವುದು ಇದರಲ್ಲಿ ಮುಖ್ಯವಾಗುತ್ತದೆ. ಸಂಗೀತ ಮತ್ತು ಅದರ ಆಧ್ಯಾತ್ಮಿಕತೆಗೆ ಇದರಲ್ಲಿ ಹೆಚ್ಚು ಪ್ರಾಶಸ್ತ್ಯವು ಇದೆ. ಆದರೆ ಕೇಳುವುದು ಎನ್ನುವುದೇ ಮತ್ತೊಂದು ಬಗೆಯಲ್ಲಿ ಭಿನ್ನವಾದ ಒಂದು ಪ್ರಕ್ರಿಯೆ. ಅದರಲ್ಲಿ ಜಾತಿಯ ಹಂಗು ಇಲ್ಲ. ಅತ್ಯಂತ ಒಳ್ಳೆಯ ಹಾಡು ನಮಗೆ ಒಂದು ಬಿಡುಗಡೆಯನ್ನು ಕೊಡುತ್ತದೆ ಎನ್ನುವುದು ನಿಜ. ಸಾಮಾಜಿಕ ಜೀವನದಲ್ಲಿ ಅದಕ್ಕೆ ಒಂದು ಜಾಗವು ಇದೆ.

ಸಾಮಾಜಿಕ ಜೀವನದಲ್ಲಿ ಕೆಲವನ್ನು ವಿಭಾಗ ಮಾಡುವಾಗ ಅದಕ್ಕೆ ಕೆಲವು ಆದರ್ಶದ ಹೆಸರನ್ನು ಕೊಡಲಾಗಿದೆ. ಹಳೆಯದು ಮತ್ತು ಹೊಸದು ಎನ್ನುವುದು ಈ ವರ್ಗವನ್ನು ಸೂಚಿಸುತ್ತದೆ. ಅದರ ಜ್ಞಾನ ಮಾದರಿಗಳು ಕೂಡಾ ಅತ್ಯಂತ ಮುಖ್ಯವಾದ ನೆಲೆಯನ್ನು ಹೇಳುತ್ತವೆ. ವಾದ್ಯ ಮತ್ತು ಅದರ ಪರಿಕರಗಳನ್ನು ಬಳಸುವ ಕ್ರಮದಲ್ಲಿಯೂ ಇದೇ ಪ್ರಶ್ನೆಗಳು ಇವೆ. ಹೊಸದಾದ ಸಂಗೀತದ ಪರಿಕರವನ್ನು ಬಳಸುವವರು ಒಂದು ಥರ ಇರುತ್ತಾರೆ. ಆದರೆ ಹಳೆಯ ವಾದ್ಯಗಳನ್ನು ಬಳಸುವವರು ಮತ್ತೊಂದು ಥರ ಇರುತ್ತಾರೆ. ಹಾಗೆ ನೋಡಿದರೆ ನಾವು ಉತ್ಪಾದನೆಯನ್ನು ಮಾಡುವುದು ಮತ್ತು ಅದನ್ನು ಹಂಚುವುದು ಎನ್ನುವುದಕ್ಕೆ ಒಂದು ನಿರ್ದಿಷ್ಟವಾದ ಅರ್ಥವೂ ಇದೆ. ಅದಕ್ಕೆ ಗುಣ ಲಕ್ಷಣಗಳೂ ಇರುತ್ತವೆ. ಉತ್ಪಾದನೆ ಮತ್ತು ವಿವಿಧ ಮಾರುಕಟ್ಟೆಯು ನಮಗೆ ಅಂದರೆ ಗಿರಾಕಿಗಳಾದ ನಮಗೆ ವಿವಿಧ ಅವಕಾಶಗಳನ್ನು ಕೊಡುತ್ತವೆ. ಅದನ್ನು ಒಂದು ಸಾಮಾಜಿಕವಾದ ಅವಕಾಶ ಎಂದೂ ಹೇಳಬಹುದು. ಆದರೆ ಇದನ್ನು ನಾವು ಯಾವ ಅರ್ಥದಲ್ಲಿಯೂ ಹೇಳಬಹುದು. ಸಾಹಿತ್ಯ, ಸಂಗೀತ ಮತ್ತು ಇತರ ಸಂಗತಿಗಳನ್ನು ನಾವು ಹೇಗೆ ಗ್ರಹಿಸುತ್ತೇವೆ ಎನ್ನುವುದು ಮಾತ್ರವೇ ಅತ್ಯಂತ ಮುಖ್ಯ. ಪ್ರಾತಿನಿಧಿಕ ಯಾವುದು ಎನ್ನುವುದು ಮಾತ್ರವೇ ಪ್ರಶ್ನೆ. ನಾವು ಕ್ರೀಡಾಪಟುಗಳಾದರೆ ನಮ್ಮ ದೇಹ ಮತ್ತು ಅದರ ದೃಢತೆಯು ಹೆಚ್ಚು ಮುಖ್ಯ. ಎಂದು ಭಾವಿಸುತ್ತೇವೆ ಅಷ್ಟೇ ಅಲ್ಲ ನಮ್ಮ

ಕ್ರೀಡೆಗಳಲ್ಲಿ ಯಾವುದನ್ನು ಹೇಗೆ ಪ್ರಾತಿನಿಧಿಕ ಮಾಡುತ್ತೇವೆ ಎನ್ನುವುದು ಮಾತ್ರವೇ ಮುಖ್ಯ. ಬಾಡಿ ಬಿಲ್ಡಿಂಗ್ ಎನ್ನುವುದರಲ್ಲಿ ನಮಗೆ ನಮ್ಮ ದೇಹ ಮತ್ತು ಅದರ ಖಂಡಗಳು ಅತ್ಯಂತ ಮುಖ್ಯ. ಅದೇ ರೀತಿಯಲ್ಲಿ ನಾವು ಅನೇಕವನ್ನು ಒಂದು ಪ್ರಾತಿನಿಧಿಕವಾದ ರೂಪವೆಂದು ಅಂಗೀಕರಿಸಿದ್ದೇವೆ. ಇದು ನಮ್ಮ ಅಭಿರುಚಿಯನ್ನು ಹೇಳುತ್ತದೆ. ಅದರ ಜೊತೆಗೆ ಇದು ನಮಗೆ ನಿರ್ದಿಷ್ಟವಾದ ಕೆಲವು ಸೂಚನೆಗಳನ್ನು ಕೊಡುತ್ತವೆ. ಇದಕ್ಕೆ ಪೂರಕವಾಗಿ ಮತ್ತೊಂದು ಅಂಶವನ್ನು ಇಲ್ಲಿ ಹೇಳಬೇಕು: ನಾವು ಅಲಸಂಡೆ, ಜೋಳ, ರಾಗಿ, ಭತ್ತ ಮುಂತಾದವುಗಳನ್ನು ಬೆಳೆಯುತ್ತೇವೆ. ಅದರಲ್ಲಿ ಅನೇಕ ವಿಧಗಳು ಇವೆ. ರಾಗಿಯನ್ನು ಮತ್ತು ಅನ್ನವನ್ನು, ಚಪಾತಿಯನ್ನು ಊಟ ಮಾಡುವವರು ಒಂದು ವರ್ಗ. ಆದರೆ ಫಿಜ್ಜಾ, ಬರ್ಗರ್ ತಿನ್ನುವವರು ಮತ್ತೊಂದು ವರ್ಗ. ಆದರೆ ಇಲ್ಲಿ ಚಪಾತಿ ಮತ್ತು ರಾಗಿ ಇವುಗಳಿಗೆ ವ್ಯತ್ಯಾಸವಿದೆ. ಪಲಾವ್, ಬಿರಿಯಾನಿ ತಿನ್ನುವವರನ್ನು ನಾವು ಅತ್ಯಂತ ಶ್ರೇಷ್ಠ ವರ್ಗದ ಜನರು ಎಂದು ಹೇಳುತ್ತೇವೆ. ಇವುಗಳು ಕೂಡಾ ಪ್ರಾತಿನಿಧಿಕವಾಗಿರುತ್ತದೆ. ಆದ್ದರಿಂದ ಇವುಗಳು ನಮಗೆ ಅತ್ಯಂತ ಮುಖ್ಯವಾದ ಸಂಕೇತವನ್ನು ರವಾನೆ ಮಾಡುತ್ತದೆ. ಈ ಮೊದಲು ಹೇಳಿದ ಒಂದು ಸಂಗತಿಯನ್ನು ಇಲ್ಲಿ ಮತ್ತೆ ಹೇಳಬೇಕು: ಅದು ಅವಲಂಬಿತ ವರ್ಗಕ್ಕೆ ಸಂಬಂಧ ಪಟ್ಟದ್ದು. ಮೇಲುವರ್ಗ ಮತ್ತು ಅದರ ಅಭಿರುಚಿಯು ಕೂಡಾ ರೈತರನ್ನು ಅವಲಂಬಿಸಿಕೊಂಡು ಇದೆ. ನಾವು ಶ್ರೇಷ್ಠರಾಗುವುದು ಯಾರಿಂದ ಎನ್ನುವುದೂ ಇಲ್ಲಿ ಉಲ್ಲೇಖನೀಯ.

ಪುನರುಜ್ಜೀವನದ ಅನಂತರ ಅನೇಕ ವಿಚಾರಗಳು ಬದಲಾದ್ದು ನಮಗೆ ತಿಳಿದಿದೆ. ಅದರ ಅನಂತರ ನಮ್ಮ ಜ್ಞಾನ ಮತ್ತು ಅದರ ರೂಪಗಳಲ್ಲಿ ಅನೇಕ ವ್ಯತ್ಯಾಸಗಳು ಆದವು. ಸಾಂಸ್ಕೃತಿಕವಾದ ಉತ್ಪಾದನೆಯ ಅರ್ಥ ಮತ್ತು ಅದರ ಸ್ವರೂಪಗಳು ಬೇರೆಯಾದವು. ಶ್ರೇಷ್ಠರು ಮತ್ತು ಅವರ ಅಭಿರುಚಿಗಳು ಎನ್ನುವುದಕ್ಕೆ ಬೇರೆ ಸ್ವರೂಪವು ಬಂದಿತು. ಶೈಕ್ಷಣಿಕ ಶ್ರೇಷ್ಠತೆ ಮತ್ತು ಸಾಮಾಜಿಕ ಶ್ರೇಷ್ಠತೆಗೆ ಬೇರೆ ಅರ್ಥವು ಇದೆ. ಇದು ಅತ್ಯಂತ ಸಾಮಾನ್ಯವಾದ ಸಂಸ್ಕೃತಿಗಿಂತ ಬೇರೆಯಾದ್ದು ಎಂದು ಭಾವಿಸಿದ್ದು ಇದರ ಒಂದು ದ್ಯೋತಕ ಮಾತ್ರ. ಯಾವಾಗ ನಾವು ಸಾಮಾನ್ಯರ ಸಂಸ್ಕೃತಿಯೆಂದು ನಾವು ಗುರುತಿಸಲು ಹೊರಟೆವೋ ಆಗ ಅದರ ಸಮಸ್ಯೆಗಳು ಬೇರೆಯಾದವು. ಅದು ಮನುಷ್ಯನ ಕ್ರಿಯಾಶೀಲತೆಯ ಮೇಲೆ ಪ್ರಭಾವವನ್ನು ಬೀರಿತು. ಒಂದು ಹಂತದಲ್ಲಿ ಕಲಾವಿದರು, ಅತ್ಯಂತ ಹೆಚ್ಚು ಶಿಕ್ಷಣವನ್ನು ಪಡೆದವರು, ಶ್ರೀಮಂತರು ಸಾಮಾನ್ಯರನ್ನು ಮತ್ತು ಕೈಗಾರಿಕೆಯಲ್ಲಿ ದುಡಿಯುವವರನ್ನು ಬೇರೆ ಇಟ್ಟರು ಎನ್ನುವುದೂ ಒಂದು ಚಾರಿತ್ರಿಕವಾದ ಸತ್ಯವಾಗಿದೆ. ಅತ್ಯಂತ ಸಾಂಪ್ರದಾಯಿಕವಾದ ವರ್ಗವು ಮನುಷ್ಯರನ್ನು ಬೇರೆ ಮಾಡಿಕೊಂಡು ನೋಡಿತು.

ಇದಕ್ಕೆ ಒಂದು ಉದಾಹರಣೆಯನ್ನು ಕೊಡಬಹುದು: ಆಗ ಪೊಟೊಗ್ರಾಫಿಯು ಬಂತು. ಅದರ ಬಗ್ಗೆ ಅನೇಕರು ಅನೇಕ ರೀತಿಯ ಪ್ರತಿಕ್ರಿಯೆಯನ್ನು ಕೊಟ್ಟರು. ಫೊಟೊಗ್ರಾಫರ್‌ಗಳನ್ನು ಕೆಲವರು ನಿಮಗೆ ಮಾಡಲು ಬೇರೆ ಏನೂ ಕೆಲಸ ಇಲ್ಲವಾ ಎಂದು ಪ್ರಶ್ನೆ ಮಾಡಿದ್ದು ಸತ್ಯ. ಸೌಂದರ್ಯಶಾಸ್ತ್ರದಲ್ಲಿಯೂ ಕೆಲವು ಯಜಮಾನಿಕೆಗಳು ಹೀಗೆ ಪ್ರಾರಂಭವಾದವು. ಅದು ನಿಯಮಬದ್ಧವಾದರೆ ಅದನ್ನು ಅಂಗೀಕರಿಸಲಾಯಿತು. ಒಂದು ಪ್ರಶ್ನೆಯು ಇದೆ: ಸೌಂದರ್ಯಶಾಸ್ತ್ರವನ್ನು ಅದರ ಸ್ವರೂಪವನ್ನು ನಿಗದಿ ಮಾಡುವವರು ಯಾರು ಎನ್ನುವುದು ನಮ್ಮ ಮುಂದೆ ಇರುವ ಅತ್ಯಂತ ಮುಖ್ಯವಾದ ಪ್ರಶ್ನೆ. ಅದಕ್ಕೆ ನಿಜವಾಗಿಯೂ ಒಂದು ಮಾನದಂಡವು ಇದೆಯೇ? ಅತ್ಯಂತ ಸುಂದರವಾಗಿ ಯಾವುದು ನಮಗೆ ಕಾಣುತ್ತದೆಯೋ ಅದರ ವಿಶ್ಲೇಷಣೆಯು ಮಾತ್ರವೇ ಸೌಂದರ್ಯಶಾಸ್ತ್ರ ಎಂದು ಅನೇಕರು ಭಾವಿಸಿದ್ದಾರೆ. ಅದು ಸುಂದರವಾಗಿದೆ ಆದ್ದರಿಂದ ಅದನ್ನು ನಾನು ಇಷ್ಟ ಪಡುತ್ತೇನೆ ಎಂದು ಹೇಳುವುದು ಸೌಂದರ್ಯಶಾಸ್ತ್ರದ ಒಂದು ನಿಲುವು. ಆದು ನಮಗೆ ಇಷ್ಟವಾಗುವುದು ನಮಗೆ ನಮ್ಮ ಸಂವೇದನೆಯ ಕಾರಣದಿಂದಲೇ ಅಥವಾ ಅದು ನಮಗೆ ಒಂದು ನಿರ್ದಿಷ್ಟವಾದ ಕಾರಣದಿಂದ ಇಷ್ಟವಾಯಿತೇ ಎಂದು ಹೇಳುವುದು ಅತ್ಯಂತ ಕಷ್ಟ. ಇಷ್ಟ ಎನ್ನುವುದು ಕಾರಣವನ್ನು ಹೊಂದಿದ್ದರೆ ಅದನ್ನು ನಾವು ಹೇಗೆ ವ್ಯಾಖ್ಯಾನ ಮಾಡುತ್ತೇವೆ ಎನ್ನುವುದು ಅತ್ಯಂತ ಮುಖ್ಯವಾದ ಪ್ರಶ್ನೆ. ಅತ್ಯಂತ ಸುಂದರವಾಗಿರುವ ಹುಡುಗಿಯು ನಮಗೆ ಪೊಟೋದಲ್ಲಿ ಅತ್ಯಂತ ಸುಂದರವಾಗಿ ಕಾಣುತ್ತಾಳೆ. ಸುಂದರ ಎಂದು ಹೇಳುವಾಗ ಅದರ ಕ್ರಿಯೆ ಮತ್ತು ಅದರ ಸ್ವರೂಪವನ್ನು ಮಾತ್ರವೇ ಗುರುತಿಸುತ್ತೇವೆ. ಅದನ್ನು ಒಂದು ನಿಯಮ ಮಾಡಲಾಗಿದೆ. ಮಲ್ಲಿಗೆಯು ಗುಲಾಬಿಗಿಂತ ಹೆಚ್ಚು ಸುಂದರವಾಗಿದೆ ಎಂದು ಹೇಳುವಾಗ ಅದರ ಸ್ವರೂಪವನ್ನು ನಾವು ಹೇಗೆ ನಿರ್ಧಾರ ಮಾಡುತ್ತೇವೆ? ಆದರೆ ಗುಲಾಬಿಯನ್ನು ಇಷ್ಟಪಡುವವನು ಮಲ್ಲಿಗೆಯ ಕುರಿತು ಏನು ಹೇಳುತ್ತಾನೆ ಎಂದು ಗಮನಿಸಬೇಕು. ನಮ್ಮ ತೀರ್ಮಾನಗಳು ಯಾವತ್ತು ನಮ್ಮ ದೃಷ್ಟಿಕೋನವನ್ನು ಮಾತ್ರವೇ ಹೇಳುತ್ತವೆ. ಫೊಟೋ ನಮಗೆ ಈವತ್ತು ಒಂದು ಮಾಧ್ಯಮ ಎನ್ನುವುದು ನಿಜ. ಆದರೆ ಪೋಟೋಗಳಲ್ಲಿ ಅನೇಕ ವಿಧಗಳು ಇವೆ. ಯಾಲಾದರೂ ಒಂದು ಅರೆಬೆತ್ತಲೆ ಪೋಟೋವನ್ನು ನೋಡಿ ಚೆನ್ನಾಗಿದೆ ಎಂದು ಹೇಳಿದರೆ ಅದರ ಅರ್ಥವು ಬೇರೆ ಥರ ಇರುತ್ತದೆ. ಅದು ನೈತಿಕತೆಗೆ ಸಂಬಂಧಪಟ್ಟದ್ದೇ ಅಥವಾ ಅದು ಸೌಂದರ್ಯಕ್ಕೆ ಸಂಬಂಧಪಟ್ಟದ್ದೇ ಎಂದು ಹೇಳುವುದು ಅತ್ಯಂತ ಕಷ್ಟ. ಆದ್ದರಿಂದ ಈವತ್ತು ನಾವು ಯಾವುದನ್ನು ಸೌಂದರ್ಯ ಎಂದು ಹೇಳುತ್ತೇವೆಯೋ ಅದರ ಅರ್ಥವನ್ನು ನಾವು ಕಾಲ ಕಾಲಕ್ಕೆ ಬೇರೆ ಮಾಡುತ್ತೇವೆ. ಸೌಂದರ್ಯ ಮತ್ತು

ಅದರ ಸ್ವರೂಪವನ್ನು ನಾವು ತೀರ್ಮಾನ ಮಾಡುವಾಗ ಅದರಲ್ಲಿ ಅಭಿರುಚಿಗಳು ಮಾತ್ರವೇ ಅತ್ಯಂತ ಪ್ರಧಾನವಾದ ಒಂದು ಪಾತ್ರವನ್ನು ವಹಿಸುತ್ತದೆ. ಕಾಂಟ್ ಹೇಳಿರುವ ಮಾತುಗಳು ಇಲ್ಲಿ ಉಲ್ಲೇಖನೀಯ: ಅಭಿರುಚಿ ಎನ್ನುವುದು ನಮಗೆ ತಲುಪುವುದು ನಮ್ಮ ಭಾವನೆಗಳನ್ನು ಆಧರಿಸಿಕೊಂಡು ಮಾತ್ರ ನಮಗೆ ಅತ್ಯಂತ ಅರ್ಥ ಪೂರ್ಣವಾದ್ದು ಮಾತ್ರವೇ ಸುಂದರವಾಗಿರುತ್ತದೆ ಎಂದು ಅರ್ಥವಲ್ಲ. ಅದು ಬರೀ ಆಸಕ್ತಿಯನ್ನು ಮಾತ್ರವೇ ನಮಗೆ ಸೂಚಿಸುವುದಿಲ್ಲ. ಉದ್ದೇಶ, ಅರ್ಥ ಪೂರ್ಣತೆ ಮತ್ತು ಅದರ ಸ್ವರೂಪಗಳು ನಮಗೆ ಮುಖ್ಯ ಎಂದು ಹೇಳುವಾಗ ಅದರಲ್ಲಿ ಯಾವ ಅಂಶವು ಇದೆ ಎನ್ನುವುದು ಮಾತ್ರವೇ ಮುಖ್ಯ. ಯಾವುದನ್ನು ನಾವು ಅರ್ಥ ಮಾಡಿಕೊಳ್ಳುತ್ತೇವೆ ಎನ್ನುವುದು ಸೌಂದರ್ಯಕ್ಕೆ ಕಾರಣವು ಆಗುವುದಿಲ್ಲ. ಸೂಚಕ ಮತ್ತು ಸೂಚಿತರ ನಡುವೆ ಒಂದು ಸಂಬಂಧವೂ ಇದೆ. ಇಲ್ಲಿ ಇನ್ನೊಂದು ಅಂಶವನ್ನು ನಾವು ಗಮನಿಸಬೇಕು: ಲೇಖಕ ತನ್ನ ಶಕ್ತಿಯನ್ನು, ತನ್ನ ಕೌಶಲವನ್ನು ಮತ್ತು ತನ್ನ ನಿಲುವನ್ನು ತನ್ನದೇ ಆದ ರೂಪದಲ್ಲಿ ಹೇಳುತ್ತಾನೆ. ಅದು ಅವನಿಗೆ ಹೆಚ್ಚು ಅಗತ್ಯವಾಗಿರುತ್ತದೆ. ಅದರೆ ನಮಗೆ ಇರುವ ಮತ್ತೊಂದು ಸಮಸ್ಯೆಯನ್ನು ಇಲ್ಲಿ ಹೇಳಬೇಕು: ಅತ್ಯಂತ ಅಮೂರ್ತವಾದ ಒಂದು ಚಿತ್ರವು ನಮಗೆ ಖುಶಿಯನ್ನು ಕೊಡಬಹುದು. ಆದರೆ ಅದು ನಮಗೆ ಅರ್ಥವಾಗುತ್ತದೆ ಎಂದು ಅರ್ಥವಲ್ಲ. ನಗುವಿನಲ್ಲಿ ಇರುವ ಒಂದು ಮಗುವಿನ ಪೋಟೋ, ಒಂದು ಪುಟ್ಟ ನಾಯಿಮರಿ ನಮಗೆ ವಿವಿಧ ಅನುಭವ ನೀಡಬಹುದು. ಒಂದು ವೇಳೆ ನಾವು ಅತ್ಯಂತ ಸಣ್ಣದನ್ನು ಮತ್ತು ಕನಿಷ್ಟವಾದ್ದನ್ನು ನಾವು ಇಷ್ಟ ಪಟ್ಟರೆ ಅದನ್ನು ಅತ್ಯಂತ ಅನಾಗರಿಕ ಎಂದು ಹೇಳುತ್ತೇವೆ. ಅದು ಸಭ್ಯವಾದ ಒಂದು ಅಭಿರುಚಿಯಲ್ಲ ಎನ್ನುವುದು ನಮ್ಮ ನಂಬಿಕೆ.



# ಸೌಂದರ್ಯಶಾಸ್ತ್ರ, ನೀತಿಶಾಸ್ತ್ರ ಮತ್ತು ಸೌಂದರ್ಯವನ್ನು ನಿರೂಪಿಸುವ ಕ್ರಮಗಳು

ಸಾಹಿತ್ಯ ಮತ್ತು ಇತರ ಕಲೆಗಳಲ್ಲಿ ನಮಗೆ ಇರುವ ಅತ್ಯಂತ ಮುಖ್ಯವಾದ ಒಂದು ಅಂಶವೆಂದರೆ ಯಾವುದನ್ನು ಹೆಚ್ಚು ಅಧಿಕೃತ ಮಾಡಬೇಕು ಎನ್ನುವುದು ಮಾತ್ರವೇ. ಅದನ್ನು ನಾವು ಯಾವುದೇ ಮಾನಂದಂಡದಲ್ಲಿ ನೋಡಿದರೂ ನಮಗೆ ಇದು ಹೆಚ್ಚು ಮುಖ್ಯ ಎಂದು ಅನಿಸುತ್ತದೆ. ಮೊದಲನೆಯದಾಗಿ ಅದಕ್ಕೆ ಒಂದು ಪ್ರದರ್ಶನಾತ್ಮಕವಾದ ಗುಣವು ಇರಬೇಕು ಎಂದು ಬಯಸುತ್ತೇವೆ. ನಮ್ಮ ನಿತ್ಯದ ಜೀವನದಲ್ಲಿಯೂ ಅದಕ್ಕೆ ಒಂದು ಸ್ಥಾನವು ಇದೆ. ಅದರ ಜೊತೆಗೆ ಸೌಂದರ್ಯ ಮತ್ತು ಅದರ ನೆಲೆಗಳನ್ನು ವಿವರಿಸುವಾಗ ನಾವು ಮಾನದಂಡವನ್ನು ಇಟ್ಟುಕೊಳ್ಳುತ್ತೇವೆ. ಸುಂದರವಾದ ಒಂದು ಚಪ್ಪಲಿ, ಸುಂದರವಾದ ಅಂಗಿ, ಸುಂದರವಾದ ಮನೆ ಎಂದು ನಾವು ಹೇಳುವಾಗ ಅದಕ್ಕೆ ಒಂದು ಮಾನದಂಡವೂ ಇದೆ. ನಾವು ಇಷ್ಟ ಪಟ್ಟರೂ; ಅದನ್ನು ನಾವು ಇಷ್ಟ ಪಡದೇ ಇದ್ದರೂ ನಮಗೆ ಇದು ಅತ್ಯಂತ ಸಹಜವಾಗಿ ಬರುತ್ತದೆ. ಆದರೆ ಇದರಲ್ಲಿ ನೀತಿಯು ಮುಖ್ಯವಾಗುತ್ತದೆಯೇ ಅಥವಾ ಇದರಲ್ಲಿ ಸ್ವಂತಿಕೆಯು ಮುಖ್ಯವೇ ಅಥವಾ ಇದರಲ್ಲಿ ಜ್ಞಾನವು ಅತ್ಯಂತ ಅಗತ್ಯವೇ ಮುಂತಾದ ಪ್ರಶ್ನೆಗಳು ಇದ್ದೇ ಇವೆ. ಆದರೆ ಒಂದು ವಿಚಾರವು ಅತ್ಯಂತ ಮುಖ್ಯ. ಯಾರೇ ಆಗಲಿ ಬರೆಯುವುದು, ಸಂಗೀತವನ್ನು ಹೇಳುವುದು, ಚಿತ್ರವನ್ನು ಬರೆಯುವುದು ಮುಂತಾದ ವಿಚಾರಗಳು ಪ್ರಜ್ಞೆಯನ್ನು ಕೇಂದ್ರ ಮಾಡಿಕೊಂಡು ಇರುತ್ತವೆ. ಎರಡನೆಯದಾಗಿ ಯಾವುದೇ ಕ್ರಿಯೆಗಳು ಮನುಷ್ಯನ ಅಗತ್ಯವನ್ನು ಆಧರಿಸಿಕೊಂಡು ಇರುತ್ತವೆ. ಮನುಷ್ಯನು ತನ್ನ ಅಗತ್ಯಕ್ಕೆ ಅನುಸಾರವಾಗಿಯೇ ಅನೇಕವನ್ನು ಮಾಡಿಕೊಂಡಿದ್ದಾನೆ. ಶುದ್ಧವಾದ ಒಂದು ಸೌಂದರ್ಯ ಎನ್ನುವುದು ಹೇಗೆ ಇರುತ್ತದೆ ಎನ್ನುವುದು ಅತ್ಯಂತ ಮುಖ್ಯವಾದ ಒಂದು ತಾತ್ವಿಕವಾದ ಪ್ರಶ್ನೆ. ಒಂದು ಉದಾಹರಣೆಯನ್ನು ನಾವು ನೋಡಬಹುದು.

ತೋಟದಲ್ಲಿ ಕೆಲಸವನ್ನು ಮಾಡುವ ಒಬ್ಬ ವ್ಯಕ್ತಿಯು ಕೈಗಳು ಅತ್ಯಂತ ಕೋಮಲವಾಗಿ ಇರಲು ಸಾಧ್ಯವಿಲ್ಲ. ಕೆಲಸವನ್ನು ಮಾಡಿ ಅವನ ಅಂಗೈಯು ಗಡುಸಾಗಿ ಕಾಣಬಹುದು. ಆದರೆ ಅದು ಕೋಮಲವಲ್ಲ ಎಂದು ಹೇಳಿದರೆ ಅದರಲ್ಲಿ ಯಾವ ಅರ್ಥವೂ ಇರುವುದಿಲ್ಲ. ಜನ್ನನ ಯಶೋಧರ ಚರಿತ್ರೆಯನ್ನು ನಾವು ಇಲ್ಲಿ ನೆನಪು ಮಾಡಿಕೊಳ್ಳಬಹುದು: ಪೊಲ್ಲಮೆಯೆ ಲೇಸು ನಲ್ಲರ ಮೈಯೊಳ್. ಇದರ ಜೊತೆಗೆ ಯಾವುದನ್ನು ನಾವು ನೈತಿಕ ಎಂದು ಹೇಳುತ್ತೇವೆಯೋ ಅದರ ಸ್ವರೂಪಗಳು ಒಂದು ವರ್ಗದಲ್ಲಿ ಒಂದು ಥರ ಇರುತ್ತದೆ. ಮತ್ತೊಂದು ವರ್ಗದಲ್ಲಿ ಮತ್ತೊಂದು ಥರ ಇರುತ್ತದೆ. ಸಮಾಜ ಮತ್ತು ಅದರ ಶ್ರೇಣೀಕರಣಗಳು ಹೇಗೆ ಕೆಲಸವನ್ನು ಮಾಡುತ್ತವೆ ಎನ್ನುವುದಕ್ಕೆ ಅನೇಕ ದೃಷ್ಟಾಂತಗಳು ಇವೆ. ಅದು ಬೇರೆ ಪ್ರಶ್ನೆ. ವಾಸ್ತವವಾಗಿ ಇದರಲ್ಲಿ ಬರುವ ಪ್ರಶ್ನೆಗಳನ್ನು ನಾವು ಈವತ್ತು ಬೇರೆ ಥರ ನೋಡಲು ಸಾಧ್ಯವಾಗುತ್ತದೆ. ಸಮಾಜದಲ್ಲಿ ಇರುವ ಬೇರೆ ಬೇರೆ ವರ್ಗಗಳು ಮತ್ತು ಅವುಗಳ ವಾಸ್ತವಗಳು ನಮಗೆ ಈವತ್ತು ಸೂಚನೆಗಳನ್ನು ಕೊಡುತ್ತವೆ. ಆದ್ದರಿಂದ ಕಲೆಯನ್ನು ನೋಡುವಾಗ ನಾವು ಯಾವುದನ್ನು ಹೆಚ್ಚು ಪ್ರಾತಿನಿಧಿಕ ಮಾಡುತ್ತೇವೆ ಎನ್ನುವುದು ಅಷ್ಟೇ ಮುಖ್ಯ. ಅತ್ಯಂತ ಮೇಲಿನ ವರ್ಗವು ಸುಖ ಮತ್ತು ಆನಂದವನ್ನು ಪಡೆಯಲು ಬೇರೆ ಮಾರ್ಗವನ್ನು ಹೊಂದಿರುತ್ತದೆ. ಆದರೆ ಅದನ್ನು ತೀರ ಕೆಳವರ್ಗವು ಅನುಸರಿಸುವುದು ಸಾಧ್ಯವಾಗದ ವಿಚಾರ. ಸೌಂದರ್ಯವನ್ನು ನೋಡುವುದು ಮತ್ತು ಅದನ್ನು ಸ್ವೀಕಾರ ಮಾಡುವುದು ತನ್ನ ಅಭಿರುಚಿಯನ್ನು ಸೂಚಿಸಲು ಮಾತ್ರವೇ. ಒಂದು ವರ್ಗವು ಕೆಲವನ್ನು ಮಾತ್ರವೇ ಮಾನ್ಯ ಮಾಡುತ್ತದೆ. ಸಾಂಸ್ಕೃತಿಕ ಅನುಭವವು ಬದಲಾಗುತ್ತವೆ. ಅದರ ಜೊತೆಗೆ ಕೆಲವನ್ನು ಸಾಂಸ್ಕೃತಿಕ ಅನುಭವ ಎಂದು ಹೇಳಲಾಗುತ್ತದೆ. ಪರೋಕ್ಷವಾಗಿ ಅದನ್ನು ಒಂದು ಅನ್ವಯಿಕವಾದ ಮಾದರಿಯಾಗಿ ರೂಪಿಸಲಾಗಿದೆ. ಅದನ್ನು ನಮ್ಮ ಪ್ರಜ್ಞೆಯ ಭಾಗವಾಗಿ ಇರುವಂತೆ ಹೇರಲಾಗುತ್ತದೆ. ಇದರ ಮೇಲೆ ಹೆಚ್ಚು ಪ್ರಭಾವವನ್ನು ಬೀರುವುದು ಪಠ್ಯ ಕ್ರಮಗಳು. ಆದರೆ ನಾವು ಇಲ್ಲಿ ಕೇಳಬೇಕಾದ ಮತ್ತೊಂದು ಪ್ರಶ್ನೆಯು ಇದೆ. ಅದನ್ನು ಹೀಗೆ ಹೇಳಬಹುದು: ಯಾವುದನ್ನು ಪಠ್ಯಕ್ರಮಗಳು ಚೆನ್ನಾಗಿದೆ ಎಂದು ಹೇಳುತ್ತವೆಯೋ ಸ್ಥಾನಾಂತರ ಮಾಡಿದರೆ ಏನಾಗುತ್ತದೆ? ಸೌಂದರ್ಯದ ಅಂಶಗಳು ಕುಗ್ಗುತ್ತವೆಯೇ ಎಂದು ಕೇಳಿದರೆ ಹಾಗೆ ಆಗುವ ಯಾವ ಸಾಧ್ಯತೆಗಳು ಕಡಿಮೆ. ಯಾಕೆಂದರೆ ಒಂದು ವರ್ಗಕ್ಕೆ ಮೀಸಲಾದ ಸೌಂದರ್ಯ ಎನ್ನುವುದು ಇಲ್ಲ.

■

# ಸೌಂದರ್ಯದ ಸ್ಥಾನಾಂತರಗಳು

ಸಾಹಿತ್ಯ ಮತ್ತು ಕಲೆಯ ಪ್ರಶ್ನೆಯಲ್ಲಿ ಅತ್ಯಂತ ಮುಖ್ಯವಾದ್ದು ಯಾವುದು ಚೆನ್ನಾಗಿದೆ ಮತ್ತು ಯಾವುದು ಚೆನ್ನಾಗಿಲ್ಲ ಎನ್ನುವ ನಿರೂಪಣೆಯಲ್ಲಿ. ಸಾಹಿತ್ಯದ ಚರ್ಚೆಯಲ್ಲಿ ಅನೇಕವನ್ನು ನಮಗೆ ಹೇರಲಾಗುತ್ತದೆ. ಯಾವುದನ್ನು ನಮಗೆ ಹೇರಲಾಗುತ್ತದೆಯೋ ಅದನ್ನು ಮಾತ್ರವೇ ಅತ್ಯಂತ ಮುಖ್ಯವೆಂದು ಪರಿಗಣಿಸುತ್ತೇವೆ. ಆದ್ದರಿಂದ ಕೆಲವು ಅಧಿಕೃತವಾಗುತ್ತದೆ. ಮಾನ್ಯತೆಯು ಯಾವುದಕ್ಕೆ ಸಿಗುತ್ತದೆಯೋ ಅದರ ಚಹರೆಗಳು ಒಂದು ರೀತಿಯ ಕೆಲಸವನ್ನು ಮಾಡುತ್ತವೆ. ಆದರೆ ಮತ್ತೆ ಕೆಲವಕ್ಕೆ ಮಾನ್ಯತೆಯು ಇಲ್ಲವಾದ್ದರಿಂದ ಅದು ಹಿಂದೆ ಸರಿಯುತ್ತದೆ. ಇದರಲ್ಲಿ ಗುರುತಿಸುವುದು ಎನ್ನುವುದು ಒಂದು ಮಾನದಂಡವೂ ಹಾದು ಇದನ್ನು ಗ್ರಹಿಸುವಾಗ ನಾವು ಕೆಲವನ್ನು ಯಾವ ರೀತಿಯಲ್ಲಿ ಅಳತೆ ಮಾಡಬೇಕು ಎನ್ನುವುದನ್ನು ಸುಶಿಕ್ಷಿತವಾದ ವಲಯವು ನಿರ್ಧಾರ ಮಾಡುತ್ತದೆ. ಆದರೆ ಹೀಗೆ ಮಾಡುವಾಗ ಅದರ ರೂಪವನ್ನು ಒಂದು ವರ್ಗವು ನಿರ್ಧಾರ ಮಾಡಿದರೆ ಅದರ ಹಿತಾಸಕ್ತಿಯು ಮಾತ್ರವೇ ಮುಖ್ಯವಾಗುತ್ತದೆ. ರಂಗೋಲಿಯನ್ನು ನಾವು ಚಿತ್ರದ ಕಲೆಯಲ್ಲಿ ಸೇರಿಸುವುದಿಲ್ಲ;. ಅದರ ಸ್ವರೂಪವು ಪಥ್ಯ ಎಂದು ಅನಿಸುವುದಿಲ್ಲ. ಆದರೆ ನಮಗೆ ಈವತ್ತು ಯಾವುದು ಮುಖ್ಯವಾಗುತ್ತದೆಯೋ ಅದನ್ನು ಮಾತ್ರವೇ ಸ್ವೀಕಾರ ಮಾಡುತ್ತೇವೆ. ಹೀಗಾಗಿ ಈವತ್ತು ಯಾವುದೇ ಕಲೆಯನ್ನು ಅಥವಾ ಸಾಹಿತ್ಯವನ್ನು ನಾವು ಕಲಿಸುವಾಗ ಅದರ ಸಾರವನ್ನು ಮಾತ್ರವೇ ನೋಡುತ್ತೇವೆ. ವಿನ್ಯಾಸವು ಮುಂದೆ ಬರುವುದು ಹಾಗೆ. ವಿನ್ಯಾಸ ಮತ್ತು ಅದರ ರೂಪಗಳು ಮಾತ್ರವೇ ಅನೇಕರಿಗೆ ಮುಖ್ಯವಾಗುವುದು ಇದೇ ಕಾರಣಕ್ಕೆ. ಅದರ ಜೊತೆಗೆ ಸಂವಹನವನ್ನು ಅನೇಕರು ಸಾಹಿತ್ಯಕ್ಕೆ ಮುಖ್ಯ ಎಂದು ತಿಳಿಯುತ್ತಾರೆ. ಆದರೆ ಇಲ್ಲಿ ಹೀಗೆ ತಿಳಿಯುವಾಗ ಸಂವಹನ ಎನ್ನುವುದು ಹೇಗೆ ಮುಖ್ಯ ಎಂದೂ ತಿಳಿದುಕೊಳ್ಳಬೇಕಾಗುತ್ತದೆ. ಒಂದು ಪತ್ರದಲ್ಲಿಯೂ ನಿರ್ದಿಷ್ಟವಾದ ಸಂವಹನವು

ಇರುತ್ತದೆ. ಆದರೆ ಅದು ಕಾವ್ಯವಲ್ಲ. ಯಾವುದು ಕಾವ್ಯ ಮತ್ತು ಯಾವುದು ಕಾವ್ಯವಲ್ಲ ಎಂದು ನಿರ್ಧಾರ ಮಾಡಲು ನಮ್ಮ ವಿದ್ವಾಂಸರಲ್ಲಿ ಕೆಲವು ಬಗೆಯ ಅಳತೆಗೋಲು ಇದೆ. ಅದಕ್ಕೆ ಸರಿಯಾಗಿದ್ದರೆ ಅದನ್ನು ಅವರು ಒಪ್ಪುತ್ತಾರೆ. ಆದರೆ ಇದನ್ನು ತಾತ್ವಿಕ ಮಾಡಿದರೆ ಆಗ ಅದರ ಅರ್ಥವು ಬೇರೆ. ಆದ್ದರಿಂದ ನಾವು ಮುಖಾಮುಖಿಯಾಗಬೇಕಾದ್ದು ಬರೀ ಸಾಹಿತ್ಯ ಮತ್ತು ಅದರ ಸಂವಹನದಲ್ಲಿ ಅಲ್ಲ ಎಂದು ಅರ್ಥ ಮಾಡಿಕೊಳ್ಳಬೇಕಾಗಿದೆ. ನಮ್ಮ ಅನುಭವಕ್ಕೆ ಯಾವುದು ಮುಟ್ಟತ್ತದೆ ಎಂದು ನೋಡಿಕೊಡು ನಾವು ತೀರ್ಮಾನ ಮಾಡಬೇಕಾಗುತ್ತದೆ. ಸಾಹಿತ್ಯವೇ ಆಗಲಿ ಅಥವಾ ಇತರ ಮಾಧ್ಯಮವೇ ಆಗಲಿ ಅದು ನಮಗೆ ಮುಟ್ಟುವುದು ಅದರ ಕ್ರಿಯಾಶೀಲವಾದ ಒಂದು ಅಭಿವ್ಯಕ್ತಿಯಿಂದ ಎಂದು ಅರ್ಥ ಮಾಡಿಕೊಳ್ಳಬೇಕು. ನಮಗೆ ಯಾವುದು ಅತ್ಯಂತ ಗುಣಾತ್ಮಕವಾದ ಮೌಲ್ಯ ಎಂದು ಅನಿಸುತ್ತದೆಯೋ ಅದನ್ನು ಸ್ವೀಕಾರ ಮಾಡುತ್ತೇವೆ. ಅದರಲ್ಲಿ ಕೇವಲ ಸಾಹಿತ್ಯದ ವಿದ್ವಾಂಸರು ಮಾತ್ರವೇ ಇಲ್ಲ. ಅವರು ಹೇಳುವ ಹಾಗೆ ಅದು ರೂಪದ ಪ್ರಶ್ನೆಯು ಅಲ್ಲ. ಸಾಹಿತ್ಯಕ್ಕೂ ಒಂದು ಕ್ರಿಯೆಯು ಇದೆ. ಅದು ನಿರ್ದಿಷ್ಟವಾದ ಚಟುವಟಿಕೆಯನ್ನು ಹೊಂದಿದೆ. ಅದು ನಮಗೆ ಅತ್ಯಂತ ಅಗತ್ಯವೂ ಹೌದು. ಸಾಹಿತ್ಯ ಎಂದರೆ ಅದು ಐಷಾರಾಮಿಯಾದ ಒಂದು ಸಂಗತಿಯಲ್ಲ. ಅದರ ಜೊತೆಗೆ ಸಾಹಿತ್ಯ ಎಂದರೆ ಅದು ತಂತ್ರದ ಪ್ರಶ್ನೆಯು ಅಲ್ಲ. ಅದರ ಬದಲು ಅದು ನಮಗೆ ಆಶಯದ ಪ್ರಶ್ನೆಯೂ ಆಗಿದೆ. ಅದು ಬರೀ ನಮ್ಮ ಸುಖವನ್ನು ಹೇಳುವುದಕ್ಕೆ ಮಾತ್ರವೇ ಇಲ್ಲ.

■

# ಸಮೃದ್ಧಿ

ಈವತ್ತು ಒಂದು ಕಡೆಯಿಂದ ಅತ್ಯಂತ ಹೆಚ್ಚು ಉತ್ಪಾದನೆಯು ಆಗುತ್ತದೆ. ಮತ್ತೊಂದು ಕಡೆಯಿಂದ ಗಿರಾಕಿಗಳಿಗೆ ವಿವಿಧ ಸಮಸ್ಯೆಗಳು ಇವೆ. ಕೊಂಡುಕೊಳ್ಳುವವರ ಪ್ರಜ್ಞೆಯು ಈವತ್ತು ಹಿಂದಿನಂತೆ ಇಲ್ಲ. ಅದು ಬದಲಾಗಿದೆ. ಮನುಷ್ಯ ಮತ್ತು ಅವನ ಪರಿಸರದಲ್ಲಿ ಅನೇಕ ಬದಲಾವಣೆಯನ್ನು ನಾವು ಕಾಣುತ್ತೇವೆ. ನಮ್ಮ ಮುಂದೆ ನೂರಾರು ರೀತಿಯ ವಸ್ತುಗಳು ವಿಕ್ರಯಕ್ಕೆ ಸಿದ್ಧವಾಗುತ್ತವೆ, ಈವತ್ತು ನಮ್ಮ ಪರಿಸರವು ಹೇಗೆ ಇದೆಯೆಂದರೆ ನಮ್ಮ ಸುತ್ತ ಅನೇಕ ರೀತಿಯ ಯಂತ್ರಗಳು ಇವೆ. ನಮ್ಮ ಗಮನಕ್ಕೆ ಬರುವ ಮತ್ತೊಂದು ವಿಚಾರವೆಂದರೆ ಯಂತ್ರಗಳು ಮತ್ತು ಅದರ ಬಳಕೆ. ನಮಗೆ ಈವತ್ತು ಯಂತ್ರಗಳು ಇಲ್ಲದೆ ಹೋದರೆ ಯಾವುದನ್ನೂ ಸಾಧಿಸಲಾರೆವು ಎನ್ನುವ ಸ್ಥಿತಿಗೆ ಬಂದಿದ್ದೇವೆ. ಯಾವುದನ್ನು ನಾವು ಆಧುನಿಕ ಜಗತ್ತು ಎಂದು ಹೇಳುತ್ತೇವೆಯೋ ಅದು ಗಿರಾಕಿಯನ್ನು ಕೇಂದ್ರ ಮಾಡಿದೆ. ಆದ್ದರಿಂದ ಅನೇಕ ಸಾಮಾಜಿಕ ಸಿದ್ಧಾಂತಗಳು ನಿಜವಾದ ಅರ್ಥದಲ್ಲಿ ಗಿರಾಕಿ ಕೇಂದ್ರಿತ ಸಮಾಜವನ್ನು ಮಾತ್ರವೇ ಚರ್ಚೆ ಮಾಡುತ್ತವೆ. ಆದರೆ ಆಧುನಿಕೋತ್ತರವಾದಿಗಳು ಕೂಡಾ ಇದನ್ನು ಕೇಂದ್ರ ಮಾಡಿದ್ದಾರೆ. ಆದರೆ ಅವರು ಇದು ಹೇಗೆ ಬೆಳವಣಿಗೆಯನ್ನು ಹೊಂದಿದೆ ಮತ್ತು ಅದರ ಪರಿಣಾಮವನ್ನು ಹೇಗೆ ನೋಡಬಹುದು ಎನ್ನುವುದನ್ನು ಒಂದು ಖಾಲಿಯಾದ ಅವಕಾಶದಲ್ಲಿ ಇಟ್ಟು ನೋಡಿದರು. ಸಮಾಜ ಮತ್ತು ಅದರ ಸಂರಚನೆಗಳು ಹೇಗೆ ಬದಲಾಗುತ್ತವೆ ಎನ್ನುವುದೂ ಇಲ್ಲಿ ಅತ್ಯಂತ ಮುಖ್ಯ. ಸಮಾಜವು ಅಭಿವೃದ್ಧಿ ಹೊಂದುವಾಗ ಅದರ ರಚನೆಯು ಬದಲಾಗುತ್ತದೆ ಎನ್ನುವುದು ನಿಜ. ಅಭಿವೃದ್ಧಿ ಮತ್ತು ಸಮಾಜದ ರಚನೆಗಳು ಎನ್ನುವುದು ಹೇಗೆ ಇರುತ್ತದೆ ಎಂದು ಇಲ್ಲಿ ಗಮನಿಸಬೇಕು. ನಿಯಮಿತವಾಗಿ ಇದು ಬೆಳೆಯುತ್ತದೆಯೇ ಅಥವಾ ಇದು ಬೇರೆಯಾಗಿದೆಯೇ ಎನ್ನುವುದು ನಮ್ಮ ಮುಂದೆ ಇರುವ ಸಮಸ್ಯೆ. ಆಧುನಿಕ ಮಾರುಕಟ್ಟೆಯಲ್ಲಿ ಅನೇಕವು ವಿಸ್ತಾರವಾಗುವುದು ಸತ್ಯ. ಉತ್ಪಾದನೆ

ಮತ್ತು ಅದರ ವಿತರಣೆಯು ಈವತ್ತು ಹೇಗೆ ಇರುತ್ತದೆ ಎಂದು ನೋಡಿದರೆ ನಮಗೆ ಇದು ಅರ್ಥವಾಗುತ್ತದೆ. ಆದ್ದರಿಂದ ಈವತ್ತು ನಾವು ಯಾವುದನ್ನು ಹೆಚ್ಚು ಉತ್ಪಾದನೆಯನ್ನು ಮಾಡುತ್ತೇವೆಯೋ ಅದನ್ನು ವಿತರಿಸುವುದು ಹೇಗೆ? ಆದ್ದರಿಂದ ಈ ಸಮಸ್ಯೆಯು ನಮಗೆ ಅತ್ಯಂತ ಹೆಚ್ಚು ಕಾಡುತ್ತದೆ. ಇಲ್ಲಿ ಒಂದು ಉತ್ಪಾದನೆಯನ್ನು ಇಲ್ಲಿ ಉದಾಹರಣೆಯಾಗಿ ನೋಡುವುದು ಸೂಕ್ತ. ಈವತ್ತು ನಮಗೆ ಅತ್ಯಂತ ಹೆಚ್ಚು ಬಟ್ಟೆಗಳ ಉತ್ಪಾದನೆಯು ಆಗುತ್ತದೆ ಎಂದು ಭಾವಿಸಿದರೆ ಅದನ್ನು ನಾವು ಯಾರಿಗೆ ಮಾರಬೇಕು? ಅದರಲ್ಲಿ ಎಷ್ಟು ಜನ ಕಾರ್ಮಿಕರು ದುಡಿಯುತ್ತಿದ್ದಾರೆ? ಹೇಗೆ ದುಡಿಯುತ್ತಿದ್ದಾರೆ? ಅವರಿಗೂ ಅವರ ವೇತನಕ್ಕೂ ಇರುವ ಸಂಬಂಧವೇನು ಎನ್ನುವುದೂ ಅತ್ಯಂತ ಮುಖ್ಯವಾಗಿ ಗಮನಿಸಬೇಕಾದ ವಿಷಯ. ಕೈಗಾರಿಕೆಗಳು ಯಾವುದನ್ನು ಉತ್ಪಾದನೆ ಮಾಡಿವೆಯೋ ಅದನ್ನು ಹಂಚುವುದು ಹೇಗೆ ಎನ್ನುವುದು ಈವತ್ತು ಅತ್ಯಂತ ದೊಡ್ಡ ಆರ್ಥಿಕವಾದ ಪ್ರಶ್ನೆ. ಆಧುನಿಕ ಯುಗದಲ್ಲಿ ಕಾರ್ಮಿಕರು ಮತ್ತು ಉಪಯೋಗತಾ ಮೌಲ್ಯದ ಪ್ರಶ್ನೆಯು ಬೇರೆಯಾಗಿದೆ ಎಂದು ಅರ್ಥ ಮಾಡಿಕೊಳ್ಳಬೇಕು. ಒಂದು ಅರ್ಥದಲ್ಲಿ ಆಧುನಿಕೋತ್ತರವಾದಿ ಎಂದು ಕರೆಸಿಕೊಂಡ ಜೀನ್ ಬುಡಿಲಿಯಾರ್ಡ್ ಉತ್ಪಾದನೆಯನ್ನು ಹೆಚ್ಚು ರೊಮಾಂಟಿಕ್ ಮಾಡಲಾಗುತ್ತದೆ ಎಂದು ಹೇಳುತ್ತಾನೆ.( ಬುರ್ಡಿಲಿಯಾರ್ಡ್ 1975 ದ ಮಿರರ್ ಆಫ್ ಪ್ರಡಕ್ಷನ್ ಟೆಲೊಸ್ ಪ್ರೆಸ್ ) ಆದರೆ ಉತ್ಪಾದಕರಿಗೆ ಒಂದು ಅಹಮಿಕೆಯು ಇರುತ್ತದೆ ಎನ್ನುವುದು ಇಲ್ಲಿ ಅತ್ಯಂತ ಮುಖ್ಯ. ಮಾನವಶಾಸ್ತ್ರವು ಉತ್ಪಾದನೆ ಮತ್ತು ವಿನಿಯೋಗವನ್ನು ಒಂದು ಮೌಲ್ಯವೆಂದು ಹೇಳುತ್ತದೆ. ಆದರೆ ಒಂದು ಮಾತು ಸತ್ಯ. ಆಧುನಿಕ ಸಮಾಜವು ಹೇಗೆ ಬೆಳೆಯುತ್ತದೆ ಎಂದು ವಿವರಿಸಿದ್ದು ಮಾರ್ಕ್ಸವಾದವೇ. ಕಾರ್ಮಿಕರು ತಮ್ಮ ಸುಪ್ತವಾದ ಒಂದು ಪ್ರಜ್ಞೆಯಲ್ಲಿಯೂ ಉತ್ಪಾದನೆಯನ್ನು ಮಾಡುತ್ತಾರೆ ಎನ್ನುವುದು ಡೆಲ್ಯೂಜನ ನಿಲುವು.ಅದು ಬೇರೆ ಪ್ರಶ್ನೆ. ಆದರೆ ಮನುಷ್ಯನು ಯಾವ ಮಾದರಿಯ ಉತ್ಪಾದನೆಯನ್ನು ಮಾಡುತ್ತಾನೆ ಎನ್ನುವುದಕ್ಕೆ ಒಂದು ಉತ್ತರವಂತೂ ಇದ್ದೇ ಇದೆ. ಮನುಷ್ಯನು ಉತ್ಪಾದನೆ ಮಾಡುವುದು ಅವನ ಆಸಕ್ತಿಯನ್ನು ತೃಪ್ತಿ ಮಾಡಲು ಮಾತ್ರವೇ. ಉತ್ಪಾದನೆ ಎನ್ನುವುದು ಮನುಷ್ಯ ತನಗಾಗಿ ಮಾಡಿಕೊಂಡ ಒಂದು ವ್ಯವಸ್ಥೆ. ಉತ್ಪಾದನೆ ಮತ್ತು ಅದರ ವ್ಯವಸ್ಥೆಯು ಹೇಗೆ ಇದೆ ಎಂದರೆ ಅದನ್ನು ನೋಡಿದರೆ ಅದರಲ್ಲಿ ಒಂದು ಸಮತೋಲನ ಇರುವ ಹಾಗೆ ಕಾಣುವುದಿಲ್ಲ. ಉತ್ಪಾದನೆ ಎನ್ನುವುದು ಒಂದು ತಳಹದಿಯೂ ಆಗಿರುತ್ತದೆ. ಅದು ಒಂದು ಸಮಾಜದ ಅತ್ಯಂತ ಮಹತ್ವದ ಭಾಗವೂ ಹೌದು. ಉಪಯೋಗದ ಮೌಲ್ಯ, ವಿನಿಮಯದ ಮೌಲ್ಯ, ಉತ್ಪಾದನೆ, ಹಣ ಮುಂತಾದವುಗಳು ಈವತ್ತು ನಮ್ಮ

ಜೀವನದ ಅವಿಭಾಜ್ಯ ಅಂಗವಾಗಿದೆ. ಇದಕ್ಕೆ ಒಂದು ನಿಯಮವೂ ಇರುತ್ತದೆ. ನಾವು ಯಾವುದಾದರೂ ಒಂದು ವಸ್ತುವಿಗೆ ಗಿರಾಕಿ ಆಗುವುದು ಎಂದರೆ ಅದರ ಅರ್ಥವಿಷ್ಟೇ- ಜನರು ಅದನ್ನು ಸ್ವೀಕಾರ ಮಾಡುತ್ತಾರೆ. ಅದು ಸಾಮಾಜಿಕ ಚಟುವಟಿಕೆಯೂ ಆಗಿರುತ್ತದೆ. ವಸ್ತು ಮತ್ತು ಅದರ ಶ್ರೇಷ್ಟತೆ ಹಾಗೂ ಅದರ ಅಂತರಗಳು ನಮಗೆ ಮೌಲ್ಯವನ್ನು ಸೂಚಿಸುತ್ತವೆ. ಒಂದು ವಸ್ತುವಿಗೆ ವಿನಿಮಯವು ಹೇಗೆ ಹೊಂದುತ್ತದೆ ಎನ್ನುವುದು ಮಾತ್ರವೇ ಮುಖ್ಯ.



# ಐಷಾರಾಮಿ ವರ್ಗಗಳು

ತೊರೆಸ್ಟನ್ ವೆಬ್ಲನ್ ದ ಥಿಯರಿ ಆಫ್ ದ ಲೀಸರ್ ಕ್ಲಾಸ್ ವಾದವನ್ನು ಮಂಡಿಸುತ್ತಾನೆ. ಅದರಲ್ಲಿ ಪ್ಯೂಡಲ್ ಯುರೋಪ್ ಮತ್ತು ಫ್ಯೂಡಲ್ ಜಪಾನಿನಲ್ಲಿ ಒಂದು ವರ್ಗವು ಹೇಗೆ ಬೆಳೆಯುತ್ತದೆ ಎಂದು ವಿವರಿಸುತ್ತಾನೆ ಅದನ್ನು ನಾವು ಅತ್ಯಂತ ಸರಳವಾಗಿ ಮೇಲು ವರ್ಗ ಅಥವಾ ಕೆಳವರ್ಗ ಎಂದು ಹೇಳಲು ಬರುವದಿಲ್ಲ. ಜನರು ಯಾಕೆ ಹೆಚ್ಚು ಕ್ರಯ ಕೊಟ್ಟು ಒಂದು ವಸ್ತುವನ್ನು ಪಡೆಯುತ್ತಾರೆ ಮತ್ತು ಅದರ ಮೂಲಕ ಅವರು ಏನು ಸಾಬೀತು ಮಾಡಲು ಹೋಗುತ್ತಾರೆ ಎನ್ನುವುದಕ್ಕೆ ಅವನು ಉತ್ತರವನ್ನು ಕೊಡುತ್ತಾನೆ. ಯಾರು ಹೆಚ್ಚು ಕ್ರಯಕೊಟ್ಟು ಒಂದು ವಸ್ತುವನ್ನು ಪಡೆಯುತ್ತಾರೆಂದರೆ ಅದರ ಮೂಲಕ ಅವರು ತಮ್ಮ ಸ್ಥಾನಮಾನವನ್ನು ಕಾಪಾಡಲು ಯತ್ನವನ್ನು ಮಾಡುತ್ತಾರೆ. ಹೆಚ್ಚು ಕ್ರಯದ ವಸ್ತು ಹೆಚ್ಚು ಗುಣಾತ್ಮಕವಾಗಿರುತ್ತದೆ ಎನ್ನುವುದು ಅವರ ನಂಬಿಕೆ. ಯಾವುದೇ ಒಂದು ಬೇಡಿಕೆಯನ್ನು ನಾವು ಕಟ್ಟು ನಿಟ್ಟಾಗಿ ನೋಡಲು ಬರುವುದಿಲ್ಲ ಎನ್ನುವುದು ಅವನ ನಿಲುವು. ಮತ್ತೊಂದು ಕಡೆಗೆ ಅವನು ಐಷಾರಾಮಿ ವಸ್ತು ಮತ್ತು ಅದರ ಬೇಡಿಕೆ ಬಗ್ಗೆ ಹೇಳುತ್ತಾನೆ. ಬೆಲೆಯನ್ನು ಹೆಚ್ಚು ಮಾಡುವುದು ಅಂದರೆ ಅದನ್ನು ಗುಣ ಮಟ್ಟವನ್ನು ಹೆಚ್ಚು ಮಾಡಿದ್ದಾರೆ ಎಂದು ತಿಳಿಯಬೇಕಾಗುತ್ತದೆ ಎನ್ನುವುದು ಅವನ ನಿಲುವು. ಮಾರುಕಟ್ಟೆಯಲ್ಲಿ ವಸ್ತು ಒಂದು ಸ್ಥಾನಮಾನವನ್ನು ಪಡೆಯುವುದು ಅಂದರೆ ಅಲ್ಲಿ ಒಂದು ಬೇಡಿಕೆಯು ಇದೆ ಎಂದು ಅರ್ಥ. ವಸ್ತು ಮತ್ತು ಅದರ ಪೂರೈಕೆ ಹಾಗೂ ಅದರ ಸ್ವರೂಪವನ್ನು ಅನೇಕ ಅರ್ಥಶಾಸ್ತ್ರಜ್ಞರು ಅಧ್ಯಯನ ಮಾಡಿದ್ದರೆ. ಬೇಡಿಕೆಯ ಕುರಿತಾದ ಮಾಮೂಲಿಯಾದ ಒಂದು ನಿಲುವನ್ನು ಬಿಟ್ಟು ಅವನು ಬೇರೆ ಅರ್ಥವನ್ನು ಕೊಟ್ಟಿದ್ದಾನೆ ಎನ್ನುವುದೇ ಅತ್ಯಂತ ಮಹತ್ವದ ವಿಷಯ. ಅವನ ಮಾತನ್ನು ಕೊಂಚ ಬದಲಿಸಿ ಹೇಳಿದರೆ ತುಂಬಾ ಆರಾಮ ಇರುವ ಒಂದು ಜನವರ್ಗ ಎಂದು ಅರ್ಥ. ವಿರಾಮ ವರ್ಗವು ನಮಗೆ ಬೇರೆ ವಿಚಾರಗಳನ್ನು ಹೇಳುತ್ತವೆ. ಈ ವರ್ಗವು ಹಣವನ್ನು ಸಂಪಾದನೆ ಮಾಡುವುದರ

ಕುರಿತು ಮಾತ್ರವೇ ಯೋಚನೆಯನ್ನು ಮಾಡುತ್ತದೆ. ಕಾರ್ಮಿಕರು ಹೆಚ್ಚು ದಕ್ಷತೆಯನ್ನು ಹೊಂದಬೇಕು. ಮತ್ತು ಅವರ ದುಡಿಮೆಯು ನಮಗೆ ಲಾಭವನ್ನು ತರುವಂತೆ ಇರಬೇಕು ಎಂದು ಈ ವರ್ಗವು ಯೊಚನೆಯನ್ನು ಮಾಡುತ್ತದೆ. ಮಾಲಿಕರು ಲಾಭವನ್ನು ಹೊಂದಿ ಸಾಮಾನ್ಯರು ಬರೀ ಕೆಲಸವನ್ನು ಮಾಡುವ ಥರದ ಒಂದು ಪರಿಸ್ಥಿತಿಯು ನಿರ್ಮಾಣವಾಗುತ್ತದೆ. ವಿಜ್ಞಾನಿಗಳು, ತಂತ್ರಜ್ಞಾನದ ಕುರಿತು ವಿಶೇಷವಾದ ಮಾಹಿತಿಯನ್ನು ಹೊಂದಿದವರು ಹಾಗೂ ಕೈಗಾರಿಕೆಯ ಕುರಿತು ಹೆಚ್ಚು ತಿಳುವಳಿಕೆಯನ್ನು ಹೊಂದಿದವರು ಮುಂಚೂಣಿಯಲ್ಲಿ ಇರುತ್ತಾರೆ. ಹತ್ತೊಂಬತ್ತನೆಯ ಶತಮಾನದ ಅತ್ಯಂತ ಮಹತ್ವದ ಬದಲಾವಣೆಯಲ್ಲಿ ನಾವು ಇದನ್ನು ಕಾಣಬಹುದು. ಯಾವುದನ್ನು ಅವನು ವಿರಾಮ ವರ್ಗ ಎಂದು ಹೇಳುತ್ತಾನೆಯೋ ಅನಾಗರಿಕ ಸಮಾಜದ ಮತ್ತೊಂದು ರೂಪದಂತೆ ಭಾಸವಾಗುತ್ತದೆ. ಅವನು ಹೇಳುವ ಸಿದ್ಧಾಂತದಲ್ಲಿ ಮಾರ್ಕ್ಸ ಮತ್ತು ಡಾರ್ವಿನ್, ಸ್ಪೆನ್ಸರ್ ಮುಂತಾದವರ ಪ್ರಭಾವ ಇದೆ ಎಂದು ವಿಮರ್ಶಕರು ಹೇಳುತ್ತಾರೆ. ಬುಡಕಟ್ಟು ಮತ್ತು ಊಳಿಗ ಮಾನ್ಯ ಸಮಾಜದಲ್ಲಿ ನಾವು ಇದನ್ನು ಕಾಣುತ್ತೇವೆ. ಇದರಲ್ಲಿ ಸಮಾಜ ಮತ್ತು ಅದರ ಆರ್ಥಿಕತೆಯು ಹೇಗೆ ಇರುತ್ತದೆ ಎನ್ನುವ ಪ್ರಶ್ನೆಯನ್ನು ವೆಬ್ಲನ್ ಬಿಡಿಸುತ್ತಾನೆ. ಆದರೆ ಈವತ್ತು ಯಾವುದನ್ನು ಅತ್ಯಂತ ಅನಾಗರಿಕವಾದ ಒಂದು ಸಂಸ್ಕೃತಿಯೆಂದು ಹೇಳುತ್ತೇವೆಯೋ ಅದರ ಸ್ವರೂಪದಲ್ಲಿಯೇ ಕೆಲವು ತೊಡಕುಗಳು ಇವೆ. ಯಾವುದನ್ನು ನಾವು ಅತ್ಯಂತ ಐಷಾರಾಮಿಯಾದ ಒಂದು ವರ್ಗ ಎಂದು ಹೇಳುತ್ತೇವೆಯೋ ಅದು ನಿರಂತರವಾಗಿ ತನಗೆ ಬೇಕಾದ ಸವಲತ್ತುಗಳನ್ನು ಮಾತ್ರವೇ ಪಡೆಯುತ್ತವೆ. ಒಂದು ಸಂಸ್ಕೃತಿಯಲ್ಲಿ ಇರುವುದು ವಿವಿಧ ವರ್ಗಗಳು ಎನ್ನುವುದು ಸತ್ಯ. ಆದರೆ ಈ ವರ್ಗವು ತನ್ನನ್ನು ಮಾತ್ರವೇ ಸುರಕ್ಷಿತವಾಗಿ ಇರುವಂತೆ ನೋಡುತ್ತದೆ. ಆದರೆ ದೇಹ ಮತ್ತು ಅದರ ಶಕ್ತಿಯನ್ನು ಮಾತ್ರವೇ ಬಳಸುವ ವರ್ಗವು ಒಂದು ಸಮಾಜದಲ್ಲಿ ಒಂದು ಥರ ಇರುತ್ತದೆ. ಹಾಗೆ ನೋಡಿದರೆ ಬುಡಕಟ್ಟು ಮತ್ತು ಅದರ ಸಂಸ್ಕೃತಿಯು ಒಂದು ಬಗೆಯಲ್ಲಿ ಇರುತ್ತದೆ. ಅದರ ಸ್ವರೂಪವು ಬೇರೆ. ಅನೇಕ ಬುಡಕಟ್ಟುಗಳು ತನ್ನಿಂದ ಮೇಲೆ ಇರುವ ವರ್ಗವನ್ನು ಸೇವೆ ಮಾಡುತ್ತವೆ. ಇದು ಒಂದು ಅರ್ಥದಲ್ಲಿ ಅತ್ಯಂತ ಅನಾಗರಿಕವೂ ಹೌದು. ಅತ್ಯಂತ ಆರಾಮಾಗಿ ಜೀವಿಸುವ ವರ್ಗವು ತನಗಿಂತ ಕೆಳಗೆ ಇರುವ ವರ್ಗವನ್ನು ಒಂದು ನಿರ್ಣಾಯಕವಾದ ಅಂತರದಲ್ಲಿ ಇಡುತ್ತದೆ. ಈ ವರ್ಗಕ್ಕೆ ಯಾವುದೇ ರೀತಿಯ ಸೌಕರ್ಯವೂ ಇರುವುದಿಲ್ಲ. ಅನೇಕ ಬುಡಕಟ್ಟು ಜನರು ಈವತ್ತು ಕೈಗಾರಿಕೆಯಲ್ಲಿ ದುಡಿಯುವುದೂ ಇಲ್ಲ. ಅವರಿಗೆ ದೈನಂದಿನ ಜೀವನ ಮತ್ತು ಅದರ ನಿರ್ವಹಣೆಯು ಅತ್ಯಂತ ಕಷ್ಟ. ಅವರ

ಸಾಂಸ್ಕೃತಿಕವಾದ ನಂಬಿಕೆಗಳು ಬೇರೆಯಾಗಿರುತ್ತವೆ. ಅನಾಗರಿಕ ಸಂಸ್ಕೃತಿಯಲ್ಲಿ ಬೇಟೆಯಾಡುವುದು ಕೂಡಾ ಜೀವನೋಪಾಯ. ಐಷಾರಾಮಿ ವರ್ಗ ಎನ್ನುವುದು ವ್ಯಕ್ತಿಗತವಾಗಿಯೂ ಇರಬಹುದು, ಇಲ್ಲವೇ ಅದು ಒಂದು ಜನಾಂಗವನ್ನು ಆಧರಿಸಿಕೊಂಡು ಇರಬಹುದು. ಇದರ ಮತ್ತೊಂದು ರೂಪವೆಂದರೆ ಒಂದು ವರ್ಗವು ತನ್ನ ಅಗತ್ಯವನ್ನು ಪೂರೈಸಿದ ಮೇಲೆ ತನಗಾಗಿ ಒಂದು ವಿಶ್ರಾಂತಿಯನ್ನು ಪಡೆಯುತ್ತದೆ. ಅದರಲ್ಲಿ ಒಂದು ಜಾತಿ, ಒಂದು ಜನಾಂಗ ಎನ್ನುವ ಪ್ರಶ್ನೆಗಳು ಇರುವುದಿಲ್ಲ. ಒಂದು ವರ್ಗವು ಕೆಲಸವನ್ನು ಮಾಡುತ್ತಾ ಮತ್ತೊಂದು ವರ್ಗವು ಕೇವಲ ವಿಶ್ರಾಂತಿಯನ್ನು ಪಡೆದರೆ ಅದರಲ್ಲಿ ತಾರತಮ್ಯ ಉಂಟಾಗುತ್ತದೆ ಎನ್ನುವುದು ಸ್ಪಷ್ಟ.



# ಶುದ್ಧವಾದ ಅಭಿರುಚಿ ಮತ್ತು ಕೀಳು ಅಭಿರುಚಿಗಳ ಪ್ರಶ್ನೆ

ಯಾವುದು ಅತ್ಯಂತ ಶ್ರೇಷ್ಟವಾದ ಅಭಿರುಚಿ ಮತ್ತು ನಿಜವಾದ ಅಭಿರುಚಿಯು ಅಲ್ಲ ಎಂದು ಹೇಳುವುದು ಅತ್ಯಂತ ಕಷ್ಟ. ಇವುಗಳು ನಮಗೆ ಮತ್ತೊಂದು ಅರ್ಥದಲ್ಲಿ ಸಂವಾದಿಯಾದ ಪದಗಳೂ ಹೌದು ವಸ್ತುಗಳು ಮತ್ತು ಅದರ ಪ್ರದರ್ಶನ ಹಾಗೂ ಮಾರುಕಟ್ಟೆ, ಅದನ್ನು ಕೊಂಡುಕೊಳ್ಳುವ ವರ್ಗ ಪರಸ್ಪರ ಸಂಬಂಧಿಗಳೂ ಆಗಿವೆ. ತನಗೆ ಬೇಕಾದ ವಸ್ತುವನ್ನು ಒಬ್ಬ ಗಿರಾಕಿಯು ತಾನೇ ಉತ್ಪಾದನೆಯನ್ನು ಮಾಡುವುದು ಅತ್ಯಂತ ಕಷ್ಟ. ಆದ್ದರಿಂದ ಉತ್ಪಾದನೆ ಮತ್ತು ಅದರ ಸ್ವರೂಪವನ್ನು ಸಮೂಹವು ರಚನೆಯನ್ನು ಮಾಡುತ್ತದೆ. ಉತ್ಪಾದನೆಗೆ ಮತ್ತು ಅದರ ಸಾಮಾಜಿಕ ಪರಿಣಾಮಕ್ಕೆ ವಿವಿಧ ಆಯಾಮಗಳು ಇರುತ್ತವೆ. ಒಂದು ಅತ್ಯಂತ ಸಣ್ಣದಾದ ಉದಾಹರಣೆಯನ್ನು ಇಲ್ಲಿ ಹೇಳಬಹುದು: ಸಂತೆಯು ನಡೆಯುತ್ತದೆ. ಅದರಲ್ಲಿ ನಾವು ನಮಗೆ ಬೇಕಾದ ತರಕಾರಿಯನ್ನು ಕೊಡುಕೊಳ್ಳುತ್ತೇವೆ. ಆದರೆ ಈವತ್ತು ತರಕಾರಿಯನ್ನು ನಾವು ಮಾಲ್‌ಗಳಲ್ಲಿ ಕೊಂಡುಕೊಳ್ಳುತ್ತೇವೆ. ಮಾಲ್ ಈವತ್ತು ಅತ್ಯಂತ ಆಧುನಿಕವಾದ ಸಂಸ್ಕೃತಿಯನ್ನು ಹುಟ್ಟುಹಾಕಿದೆ. ತರಕಾರಿ ಮತ್ತು ನಾವು ನಮಗೆ ಬೇಕಾದ ಅಂಗಿಯನ್ನು, ತರಕಾರಿಯನ್ನು, ವಾಷಿಂಗ್ ಪೌಡರ್‌ನ್ನು, ಶೂವನ್ನು ಒಂದೇ ಕಡೆಯಲ್ಲಿ ಕೊಂಡುಕೊಳ್ಳುವುದು ಅಂದರೆ ಒಂದು ಕೇಂದ್ರೀಕರಣವು ಆಗುತ್ತದೆ. ಆದರೆ ಇಲ್ಲಿಗೆ ಯಾರು ಹೋಗಿ ಬರುತ್ತಾರೆ? ಮತ್ತೊಂದು ವಿಷಯವಿದೆ: ಇದೇ ಸಂಗತಿಯನ್ನು ನಾವು ಬೇರೆ ಬೇರೆ ವಿಷಯಗಳಿಗೆ ಅನ್ವಯ ಮಾಡಬಹುದು. ನಾವು ಒಂದು ಚಿತ್ರವನ್ನು ಮಾಡಿದರೆ ಅದು ಮಾರಾಟವಾಗಬೇಕು ಎಂದಾದರೆ ಅದರ ಪ್ರದರ್ಶನವು ಇರಬೇಕಾಗುತ್ತದೆ. ಪುಸ್ತಕವನ್ನು ಮುದ್ರಣ ಮಾಡದೇ ಹೋದರೆ ಅದು ಜನರಿಗೆ ತಲುಪುವುದಿಲ್ಲ. ಇವುಗಳು ಒಂದು ಸಮಾಜದಲ್ಲಿ ತನ್ನದೇ ಆದ ಪರಿಣಾಮವನ್ನು ಬೀರುತ್ತದೆ

ಎನ್ನುವುದು ಸತ್ಯ. ಓರ್ಟ್ಪಾ ವೈ ಗಾಸ್ ಒಂದು ಮಾತನ್ನು ಹೇಳಿದ: 'ಆಧುನಿಕ ಚಿತ್ರಗಳು ಜನಪ್ರಿಯವೇ ಅಥವಾ ಅಲ್ಲವೇ ಎನ್ನುವುದು ಮುಖ್ಯವಲ್ಲ. ಹಳೆಯ ಒಂದು ಕ್ಲಾಸಿಕಲ್ ಪರಂಪರೆಯನ್ನು ಆಧುನಿಕ ಚಿತ್ರಗಳು ಬದಲಿಸಿವೆ. ಆಧುನಿಕ ಬರಹಗಳು ಮತ್ತು ಚಿತ್ರಗಳು ಪ್ರತ್ಯೇಕವಾಗಿವೆ. ಅವುಗಳು ಏಕಾಕಿಗಳಾಗಿವೆ. ಅದು ಕೆಲವರಿಗೆ ಎನ್ನುವುದು ಅತ್ಯಂತ ಸ್ಪಷ್ಟ.' ಅದರ ಮೂಲಕ ಅದು ನಮಗೆ ಅಮೂರ್ತವಾದ್ದನ್ನು ಹೇಳುತ್ತವೆ. ಅದರ ಜೊತೆಗೆ ನಮ್ಮ ಆಧುನಿಕ ಜೀವನ ಮತ್ತು ಅದರ ಪರಿಸ್ಥಿತಿಯು ಈವತ್ತು ಸುಖವಾಗಿಲ್ಲ. ನಮ್ಮ ವಾಸ್ತವ ಏನು ಎನ್ನುವುದು ನಮಗೆ ತಿಳಿದಿಲ್ಲ. ಹಾಗೆ ನೋಡಿದರೆ ನಮಗೆ ಆಧುನಿಕ ಚಿತ್ರಗಳು ನಮಗೆ ಯಾವ ಸುಖವನ್ನು ಕೊಡುತ್ತವೆ ಎಂದು ಯೋಚನೆ ಮಾಡಬೇಕಾಗುತ್ತದೆ. ಆದ್ದರಿಂದ ಯಾವುದು ಕಲಾವಿದರು ಲ್ಯಾಂಡ್ ಸ್ಕೇಪ್ ಎಂದು ಹೇಳುತ್ತಾರೆಯೋ ಕೊಡುವ ಖುಶಿಯನ್ನು ಆಧುನಿಕ ಚಿತ್ರಗಳು ಕೊಡುವುದಿಲ್ಲ. ಸುಂದರವಾದ ಚಿತ್ರಗಳು ನಮಗೆ ಅತ್ಯಂತ ಸುಂದರವಾದ ಅನುಭವವನ್ನು ಹೇಳುತ್ತವೆ. ಮಧ್ಯಯುಗದ ಚಿತ್ರಗಳು ನಮಗೆ ಉದ್ದೇಶಿತವಾದ ಮತ್ತು ಒಂದು ವರ್ಗಕ್ಕೆ ಮೀಸಲಾಗಿದ್ದ ಸ್ವರೂಪವನ್ನು ಹೊಂದಿದ್ದವು. ಅದರಲ್ಲಿ ಕೆಲವು ಆದರ್ಶಗಳೂ ಇದ್ದವು. ಹಾಗಿದ್ದರೂ ನಮಗೆ ಅತ್ಯಂತ ಶುದ್ಧವಾದ ಒಂದು ಕಲೆಯು ಸಿಗುತ್ತದೆ ಎಂದು ಹೇಳುವಂತೆ ಇಲ್ಲ. ಆಧುನಿಕ ಚಿತ್ರ ಕಲೆಯನ್ನು ಅವನು ತಿರಸ್ಕಾರ ಮಾಡುವುದಿಲ್ಲ. ಅಧುನಿಕ ಚಿತ್ರಗಳನ್ನು ಅರ್ಥಮಾಡಿಕೊಳ್ಳುವ ವರ್ಗಗಳು ಇವೆ. ಅದು ಅರ್ಥವಾಗದೇ ಇರುವವರೂ ಇದ್ದಾರೆ. ಹಾಗೆಂದು ಅದಕ್ಕೆ ಒಂದು ವಿಶ್ವಾತ್ಮಕವಾದ ಅರ್ಥವಿರುತ್ತದೆ. ಆದರೆ ಆಧುನಿಕ ಚಿತ್ರ ಕಲೆಯು ನೇರ ರಸ್ತೆಯನ್ನು ಹೊಂದಿಲ್ಲ. ನವ್ಯಕಲೆಯು ಚಿತ್ರ ಎನ್ನುವುದು ಸ್ಫೂರ್ತಿಯಿಂದ ಬರುತ್ತದೆ ಎನ್ನುವುದನ್ನು ನಂಬುವುದಿಲ್ಲ. ಅದಕ್ಕೆ ಅನುಭವ ಎನ್ನುವುದು ಒಂದು ಪ್ರಮಾಣವಾಗಿದೆ ಎಂದು ಒಪ್ಪುತ್ತಾರೆ. ಒಂದು ಹಂತದಲ್ಲಿ ಗ್ಯಾಸೆಯು ಕಲೆಯು ಹೇಗೆ ಅಮಾನವೀಯವಾದ ಗುಣವನ್ನು ಹೊಂದಿದೆ ಎಂದು ವಿವರಿಸುತ್ತಾನೆ. (ಒರ್ಟ್ಪಾ ವೈ ಗ್ಯಾಸೆ – ದ ಡಿ ಹ್ಯೂಮನೈಸೇಶನ್ ಆರ್ಟ್) ಅವನು ಮತ್ತೆ ಕೆಲವು ವಿಚಾರಗಳನ್ನು ಹೇಳುತ್ತಾನೆ. ನವ್ಯವು ಎಲ್ಲರಿಗೆ ಅಲ್ಲ. ಆದರೆ ಅದು ಅದನ್ನು ಶ್ರೇಷ್ಟರು ಅಥವಾ ಬುದ್ಧಿಜೀವಿಗಳು ಮಾತ್ರವೇ ಅರ್ಥ ಮಾಡಿಕೊಳ್ಳುತ್ತಾರೆ. ಯಾರು ಯಾವುದನ್ನು ಗುರುತಿಸುತ್ತಾರೆ ಎನ್ನುವುದು ಅತ್ಯಂತ ಮಹತ್ವದ ವಿಚಾರ ಒಂದು ಅತ್ಯಂತ ಜನಪ್ರಿಯವಾದ ಸಿನಿಮಾದ ಹಾಡುಗಳು ಜನರಿಗೆ ಹೇಗೆ ತಟ್ಟುತ್ತವೆ ಎನ್ನುವುದನ್ನು ನೋಡಬೇಕು. ನವ್ಯವನ್ನು ನೋಡಿದರೆ ನಮಗೆ ರೊಮಾಂಟಿಕ್ ಪರಂಪರೆಯನ್ನು ಬೇರೆ ಥರ ನೋಡಲು ನಮಗೆ ಸಾಧ್ಯವಾಗುತ್ತದೆ. ಅದು ನಮಗೆ ಖುಶಿಯನ್ನು ಕೊಡುತ್ತದೆ ಎನ್ನುವುದು

ಸತ್ಯ. ಕಲ್ಪನೆ ಮತ್ತು ಅದರ ಸುಖವನ್ನು ನಾವು ಹೇಗೆ ಅನುಭವಿಸುತ್ತೇವೆ ಎನ್ನುವುದು ಅತ್ಯಂತ ಮುಖ್ಯ. ಕಲೆಯಲ್ಲಿ ಕೆಲವುನಮಗೆ ಹೆಚ್ಚು ಹಿತವನ್ನು ಉಂಟು ಮಾಡುತ್ತದೆ. ಅದು ಯಾವ ನಮೂನೆಯಲ್ಲಿ ನಮಗೆ ಸುಖವನ್ನು ಕೊಡುತ್ತದೆ ಎನ್ನುವುದು ಮಾತ್ರ ಮುಖ್ಯ. ಕಲೆಯು ಕೆಲವು ಕಾರಣಕ್ಕೆ ಹೆಚ್ಚು ಸುಖವನ್ನು ಕೊಡುತ್ತದೆ. ಅದರಲ್ಲಿ ಎಲ್ಲಾ ಕಲೆಯು ನಮಗೆ ಒಂದೇ ಬಗೆಯ ಸುಖವನ್ನು ಕೊಡುತ್ತದೆ ಎಂದು ಅರ್ಥವಲ್ಲ. ಸಂಗೀತವನ್ನು ಇಷ್ಟ ಪಡುವವರು ಚಿತ್ರವನ್ನು ಇಷ್ಟ ಪಡುತ್ತಾರೆ ಎಂದು ಅರ್ಥವಲ್ಲ. ಸಾಮಾನ್ಯರು ಮತ್ತು ಅವರ ಅಭಿರುಚಿಗಳು ಒಂದು ಥರ ಇರಲು ಸಾಧ್ಯವಿದೆ. ಕೆಲವನ್ನು ಅತ್ಯಂತ ಸಾಮಾನ್ಯರು ಕೂಡಾ ಅನುಭವಿಸುತ್ತಾರೆ. ಸೂಸೆನ್ ಲಾಂಗರ್ ಹೇಳಿದ ಸಂಗತಿಯನ್ನು ಇಲ್ಲಿ ಹೇಳಬೇಕು: ಹಿಂದೆ ಇಡೀ ಸಮಾಜವು ಕಲೆಯನ್ನು, ಚಿತ್ರವನ್ನು ಮತ್ತು ಸಂಗೀತವನ್ನು ಕೇಳಿತ್ತು ಮತ್ತು ಅದರಿಂದ ಸುಖವನ್ನು ಪಡೆಯಿತು ಎಂದು ಹೇಳಲು. ಬರುವುದಿಲ್ಲ. ಹಾಗೆ ನೋಡಿದರೆ ಅನೇಕರಿಗೆ ಆಗ ಬರಹವು ಇದ್ದಿಲ್ಲ. ಆದ್ದರಿಂದ ಅವರು ಓದುವ ಸುಖವನ್ನು ಪಡೆಯಲಾರರು. ಅವರು ಸಂಗೀತವನ್ನು ಕೇಳುತ್ತಾರೆ. ಸಂಗೀತ ಎನ್ನುವದಕ್ಕಿಂತ ಅವರು ಹಾಡು ಕೇಳುತ್ತಾರೆ. ಅದರ ಸುಖವನ್ನು ಅನುಭವಿಸುತ್ತಾರೆ. ಅವರ ಹಾಡು ಮತ್ತು ಅವರ ಸಂಗೀತ ಎನ್ನುವುದು ಮಾತ್ರ ಭಿನ್ನವಾದ ಶೈಲಿಯದು. ನಮಗೆ ದೊಡ್ಡಾಟ, ಸಣ್ಣಾಟ ಮತ್ತು ಮಲೆಮಾದೇಶ್ವರ ಮುಂತಾದವುಗಳು ಇದಕ್ಕೆ ಉದಾಹರಣೆಗಳಾಗಿವೆ. ಆದರೆ ಮಲೆಮಾದೇಶ್ವರ, ಯಕ್ಷಗಾನದ ಹಾಡುಗಳನ್ನು ಕೇಳುವಾಗ ನಮಗೆ ಅವುಗಳು ಅಭಿರುಚಿ ಹೀನವಾದ್ದು ಎಂದು ಅನಿಸುವುದಿಲ್ಲ. ಆದ್ದರಿಂದ ಅಭಿರುಚಿ ಮತ್ತು ಅದರ ಸ್ವರೂಪವನ್ನು ನಾವು ಈವತ್ತು ಒಂದು ವರ್ಗಕ್ಕೆ ಮಾತ್ರವೇ ಸೀಮಿತವಾದ್ದು ಎಂದು ಹೇಳಲು ಬರುವುದಿಲ್ಲ.

ಯಾವುದು ನಮಗೆ ಅಭಿರುಚಿ ಹೀನವಾದ್ದು ಮತ್ತು ಯಾವುದು ಅಭಿರುಚಿ ಪೂರ್ಣವಾದ್ದು ಎಂದು ಹೇಳಲು ನಮಗೆ ಯಾವ ಮಾನದಂಡವು ಇದೆ ಎನ್ನುವುದೂ ಪ್ರಶ್ನೆ. ಶ್ರೇಷ್ಠವಾದ ಕಲೆ ಮತ್ತು ಅದರ ಕುರಿತಾದ ಅಭಿರುಚಿ ಎನ್ನುವುದು ನಮಗೆ ಒಂದು ಅರ್ಥದಲ್ಲಿ ನಮ್ಮ ವರ್ಗವನ್ನು ಹೇಳುತ್ತದೆ. ಮನುಷ್ಯ ಮತ್ತು ಅವನ ಪ್ರಜ್ಞೆಗೆ ಅಭಿರುಚಿಗೆ ಸಂಬಂಧವು ಇರುತ್ತದೆ. ಗ್ಯಾಸೆ ಮತ್ತೊಂದು ವಿಚಾರವನ್ನು ಹೇಳುತ್ತಾನೆ: ಯಾವುದೇ ಕಲೆಯು ಸಮಾಜದ ಯಾವುದೇ ಪರಿಣಾಮವನ್ನು ಉಂಟು ಮಾಡುವುದಿಲ್ಲ ಎನ್ನುವುದನ್ನು ಅವನು ಒಪ್ಪುವುದೂ ಇಲ್ಲ. ಅವನ ಪ್ರಕಾರ ಅದು ಅತ್ಯಂತ ಮುಖ್ಯವಾಗಿದೆ. ನಮಗೆ ಕಲೆಯು ಯಾವುದನ್ನೂ ಹೇಳುವುದಿಲ್ಲ ಎಂದಾದರೆ ನಾವು ಅದನ್ನು ಯಾಕೆ ಸ್ವೀಕಾರ ಮಾಡುತ್ತೇವೆ. ಆಧುನಿಕ ಕಲೆಯು ನಮಗೆ ಒಂದು ಅತಿರೇಕವನ್ನು

ಹೇಳುತ್ತದೆ. ನವ್ಯತೆಯು ನಮಗೆ ಹೊಸತನವನ್ನು ಹೇಳುತ್ತದೆ. ಅದರಲ್ಲಿ ಪ್ರಜ್ಞೆಯು ಅತ್ಯಂತ ಪಿಶಿಷ್ಟವಾದ ಒಂದು ನಿರೂಪಣೆಗೆ ಗುರಿಯಾಗುತ್ತದೆ. ಹಾಗೆಂದು ಜನಪ್ರಿಯವಾಗದೇ ಇರುವುದು ಎನ್ನುವುದು ಅವರಲ್ಲಿ ಹೆಚ್ಚು ಮುಖ್ಯ. ನವ್ಯ ಎನ್ನುವುದು ನಮಗೆ ಈ ದೃಷ್ಟಿಯಿಂದ ಅತ್ಯಂತ ಮುಖ್ಯ. ಅದು ಎಲ್ಲಾ ಓದುಗರಿಗೆ ಮತ್ತು ಎಲ್ಲಾ ಪ್ರೇಕ್ಷಕರಿಗೆ ಅಲ್ಲ ಎನ್ನುವುದು ಸ್ವತಃ ನವ್ಯದವರಿಗೆ ಗೊತ್ತಿತ್ತು. ಅವರು ತಾವು ಬರೆಯುವುದು ಶ್ರೇಷ್ಠರಿಗೆ ಮಾತ್ರವೇ ಎಂದು ಸಾಬೀತು ಮಾಡಲು ಯತ್ನ ಮಾಡಿದ್ದೂ ನಿಜ. ಒಂದು ನಿರಾಕರಣೆಯು ಇದೆ ಎನ್ನುವುದು ಹೆಚ್ಚು ಸ್ಪಷ್ಟ. ಸಾಮಾನ್ಯರು ಮತ್ತು ಅವರ ಅನುಭವ ಎನ್ನುವುದು ಅತ್ಯಂಣತ ಸಾಮಾನ್ಯ ಎನ್ನುವುದು ಇಲ್ಲಿ ಒಂದು ನಂಬಿಕೆ. ಸಾಮಾನ್ಯ ಮತ್ತು ಅವರ ಅನುಭವಕ್ಕಿಂತ ಹೆಚ್ಚಾಗಿ ಅತ್ಯಂತ ಹೆಚ್ಚು ಸಂವೇದನಾಶೀಲರು ಮತ್ತು ಅವರ ನಿಲುವು ಬೇರೆ ಎನ್ನುವುದು ಒಂದು ನವ್ಯದವರ ಆಲೋಚನೆ. ಹಾಗೆಂದು ಇದಕ್ಕೆ ಯಾವುದು ಮಾನದಂಡ ಎಂದು ಕೇಳಿದರೆ ನಮ್ಮತ್ರ ಯಾವುದೇ ಉತ್ತರವು ಇಲ್ಲ. ಮನುಷ್ಯನು ಸುಶಿಕ್ಷಿತ ಅಥವಾ ಅನಕ್ಷರಸ್ಥ ಎಂದು ವರ್ಗೀಕರಣ ಮಾಡುವಾಗ ಇದನ್ನು ಸ್ಪಷ್ಟವಾಗಿ ನಾವು ಹೇಳಲಾರೆವು. ಅದಕ್ಕೆ ಒಂದು ವಿವರಣೆಯು ಇಲ್ಲ. ಒಂದು ನಾಟಕವನ್ನು ನಾವು ನೋಡುವಾಗ ಅದರಲ್ಲಿ ನಮಗೆ ಅಕ್ಷರಗಳು ಬೇಕಾಗಿಲ್ಲ. ನಾವು ಅನೇಕ ಪುಸ್ತಕವನ್ನು ಓದಿ ಅದನ್ನು ಗ್ರಹಿಸಬೇಕೆಂದು ಇಲ್ಲ. ನಾಟಕವು ನಮಗೆ ಕೊಡುವ ಅನುಭವವು ಮನಸ್ಸು ಮತ್ತು ಅದರ ಸಂವೇದನೆಗೆ ಸಂಬಂಧಪಟ್ಟದ್ದೂ ನಿಜ. ಹೀಗಾಗಿ ಒಂದು ಕಲೆಯು ನಮಗೆ ಜನಪ್ರಿಯ ಹೌದೇ ಅಲ್ಲವೇ ಎನ್ನುವುದಕ್ಕೆ ಯಾವುದೇ ಮಾನದಂಡವಿಲ್ಲ.

■

# ವಿವಿಧ ವಸ್ತುಗಳು ಮತ್ತು ಮಾರುಕಟ್ಟೆ

ಕೆಲವು ವಸ್ತುಗಳು ಈವತ್ತು ತುಂಬಾ ಜನಪ್ರಿಯವಾಗಿರುತ್ತವೆ. ಜನಪ್ರಿಯ ಎನ್ನುವುದು ನಮಗೆ ಹೇಗೆ ಒಂದು ಮಾನದಂಡವಾಗುತ್ತದೆ ಎನ್ನುವುದು ಒಂದು ಪ್ರಶ್ನೆ. ಮಾತ್ರ ನಾವು ಇದನ್ನು ಅತ್ಯಂತ ಖಚಿತವಾಗಿ ಹೀಗೆಯೇ ಇದೆ ಎಂದು ಹೇಳುವುದು ಅತ್ಯಂತ ಕಷ್ಟ. ಆದರೆ ನಮ್ಮ ಮುಂದೆ ಒಂದು ಮಹತ್ವದ ಪ್ರಶ್ನೆಯು ಇದೆ. ನಾವು ಇದನ್ನು ಬೇರೆ ಬೇರೆ ಥರ ನೋಡಬಹುದು. ಆಧುನಿಕ ಜೀವನ ಮತ್ತು ಅದರ ಪರಿಸ್ಥಿತಿಯು ಹೇಗೆ ನಮಗೆ ಅತ್ಯಂತ ಮುಖ್ಯವಾದ ವಸ್ತುಗಳನ್ನು ಕೊಂಡುಕೊಳ್ಳಲು ಪ್ರೇರಣೆಯನ್ನು ನೀಡುತ್ತದೆ ಎನ್ನುವುದು ನಮ್ಮ ಅರಿವಿಗೆ ಬರುತ್ತದೆ. ಆದರೆ ಅದನ್ನು ನಾವು ಹೇಗೆ ತೆಗೆದುಕೊಳ್ಳುತ್ತೇವೆ ಎನ್ನುವುದು ನಮ್ಮ ಬಯಕೆಯನ್ನು ಹೇಳುತ್ತದೆ. ನಾವು ಯಾವುದನ್ನು ಹೇಗೆ ಕೊಂಡುಕೊಳ್ಳಬೇಕು ಎನ್ನುವುದನ್ನು ಆಧುನಿಕ ಜಾಹೀರಾತು ತಿಳಿಸುತ್ತವೆ. ಆಧುನಿಕ ಮಾರುಕಟ್ಟೆ ಮತ್ತು ಅದರ ಪರಿಣಾಮವು ಈವತ್ತು ಒಂದೇ ಬಗೆಯಲ್ಲಿ ಇಲ್ಲ. ಅದು ಸ್ಪರ್ಧೆಯ ಮೇಲೆ ನಿಂತಿದೆ. ಆಧುನಿಕ ಮಾರುಕಟ್ಟೆ ಮತ್ತು ಅದರ ತಾತ್ವಿಕತೆಗೆ ಇರುವ ಮಹತ್ವದ ಆಯಾಮ ಎಂದರೆ ಅದು ಸ್ಪರ್ಧೆ. ಹೀಗಾಗಿ ಆಧುನಿಕ ಮಾರುಕಟ್ಟೆ ಮತ್ತು ಅದರ ಸ್ಥಿತಿಯು ಈವತ್ತು ಬೇರೆಯಾಗಿದೆ. ಅದರೊಂದಿಗೆ ಒಂದು ಪರಿಸ್ಥಿತಿಯು ಇದೆ. ಅದು ಉತ್ಪಾದನೆ ಮತ್ತು ಗಿರಾಕಿಗಳ ನಡುವೆ ತಿರುಗಾಟವನ್ನು ಮಾಡುತ್ತಿವೆ. ನಮಗೆ ಈವತ್ತು ವಸ್ತುವನ್ನು ಕೊಂಡುಕೊಳ್ಳುವುದಕ್ಕೆ ಹೆಚ್ಚು ಸ್ವಾತಂತ್ರ್ಯವಿದೆ. ಅಷ್ಟೇ ಅಲ್ಲ ನಮಗೆ ನಮ್ಮದೇ ಆದ ಆಯ್ಕೆಗಳೂ ಇವೆ. ಮೇಲು ನೋಟಕ್ಕೆ ಇದು ನಮ್ಮದೇ ಆದ ಒಂದು ವೈಯಕ್ತಿಕವಾದ ಆಯ್ಕೆ ಎಂದು ಅನಿಸುತ್ತದೆ. ಆದರೆ ಒಂದು ವಿಷಯವನ್ನು ನಾವು ಮರೆಯುತ್ತೇವೆ. ನಮ್ಮ ಮನಸ್ಸನ್ನು ನಿಯಂತ್ರಣ ಮಾಡಲಾಗಿದೆ ಒಂದು ವಸ್ತುವು ಕೂಡಾ ನಮ್ಮನ್ನು ನಿಯಂತ್ರಣ ಮಾಡುತ್ತದೆ. ಮಾರುಕಟ್ಟೆಯಲ್ಲಿ ಯಾವುದು ಚಾಲ್ತಿಯಲ್ಲಿ ಇದೆಯೋ ಅದನ್ನು ನಾವು

ಕೊಂಡುಕೊಳ್ಳುತ್ತೇವೆ. ಒಂದು ಬ್ರಾಂಡ್‌ನ ಬಟ್ಟೆಯು ಹೆಚ್ಚು ಜನಪ್ರಿಯವಾದರೆ ಉಳಿದವರೂ ಅದನ್ನು ಬಿಟ್ಟು ಬೇರೆಯದನ್ನು ಬಳಸುವುದಿಲ್ಲ. ಇದನ್ನು ನಾವು ಒಂದು ಸೋಪಿಗೆ ಕೂಡಾ ಅನ್ವಯವನ್ನು ಮಾಡಬಹುದು. ಅದು ಬರೀ ಆರ್ಥಿಕವಾದ ಪ್ರಶ್ನೆಯು ಅಲ್ಲ. ಅದರ ಜೊತೆಗೆ ನಮ್ಮ ಮನೋಸ್ಥಿತಿಯು ಇರುತ್ತದೆ.

ಮಧ್ಯಮ ವರ್ಗದ ಮನೋಸ್ಥಿತಿಯು ಇದೆ: ಅದು ಅತ್ಯಂತ ಕುತೂಹಲದಾಯಕವಾಗಿದೆ. ಬೇರೆಯವರಲ್ಲಿ ಯಾವುದು ಇಲ್ಲವೋ ಅದನ್ನು ನಾವು ಕೊಂಡುಕೊಳ್ಳಲು ಬಯಸುತ್ತೇವೆ. ಉತ್ಪಾದನೆ ಮತ್ತು ಮಾರುಕಟ್ಟೆಯ ದೃಷ್ಟಿಯಿಂದ ಈವತ್ತು ನಾಯಕರಾಗಿಯೇ ಉಳಿಯಲು ಬಯಸುತ್ತೇವೆ. ಇದನ್ನು ನಾವು ಈವತ್ತು ಒಂದು ಆರ್ಥಿಕವಾದ ಸ್ಥಾನಮಾನವನ್ನು ಒಂದು ಶ್ರೇಣಿಯಲ್ಲಿ ಇಟ್ಟುಕೊಂಡು ನೋಡಲು ಇಷ್ಟ ಪಡುತ್ತೇವೆ. ಯಾವುದು ಹೆಚ್ಚು ಆಧುನಿಕವಾದ್ದು ಇದೆಯೋ ಅದನ್ನು ನಾವು ಇಟ್ಟುಕೊಳ್ಳಲು ಬಯಸುತ್ತೇವೆ. ಇದು ಮನೋಭಾವವವು ಹೌದು. ಅದರ ಜೊತೆಗೆ ಇದು ಒಂದು ವರ್ಗದ ಸ್ಥಿತಿಯೂ ಹೌದು. ಗಿರಾಕಿಗಳನ್ನು ಪ್ರಚೋದನೆ ಮಾಡದೆ ಯಾವುದನ್ನೂ ಮಾರುಕಟ್ಟೆಗೆ ಬಿಡದ ಒಂದು ಸ್ಥಿತಿಯು ಇದೆ. ಅದಕ್ಕಾಗಿ ಕೆಲವು ಮಾದರಿಗಳನ್ನು ರೂಪಿಸಲಾಗುತ್ತದೆ. ಜನರಿಗೆ ಕೆಲವು ಅಭಿರುಚಿಗಳನ್ನು ಖಾಸಗಿ ಕೈಗಾರಿಕೋತ್ಪನ್ನಗಳು ಸೃಷ್ಟಿ ಮಾಡುತ್ತವೆ. ಅದಕ್ಕೆ ಬೇಕಾದ ಒಂದು ಆವರಣವೂ ಸೃಷ್ಟಿಯಾಗುತ್ತದೆ. ಆದರೆ ಇಲ್ಲಿ ನಾವು ನೋಡಬೇಕಾದ್ದು ಸ್ಪರ್ಧೆಯನ್ನು ಮಾತ್ರವೇ. ಕೈಗಾರಿಕೆಗಳು ಸ್ಫರ್ಧಾತೀತವಾದರೆ ಅದರಲ್ಲಿ ಮತ್ತೆ ಬೇರೆ ವಿಷಯಗಳು ಬರಲು ಸಾಧ್ಯವೇ ಇರಲಾರದು. ಏಕ ಸ್ವಾಮ್ಯ ಎನ್ನುವುದು ಹೇಗೆ ಇರುತ್ತದೆ ಎಂದರೆ ಅದರಲ್ಲಿ ಮತ್ತೆ ಮತ್ತೆ ಪ್ರಶ್ನೆಗಳು ಬರುವುದೇ ಇಲ್ಲ. ಅದರಿಂದ ಒಂದು ಉತ್ಪಾದನೆಯು ಮಾರುಕಟ್ಟೆಯಲ್ಲಿ ಉಳಿಯುತ್ತದೆ. ಅದಕ್ಕೆ ಪ್ರತಿಯಾಗಿ ಬೇರೆ ಉತ್ಪಾದನೆಗಳು ಬರಲಾರವು. ಒಂದು ನಿಯಂತ್ರಣ ಎನ್ನುವುದು ಹೇಗೆ ಕೆಲಸವನ್ನು ಮಾಡುತ್ತದೆ ಎನ್ನುವುದಕ್ಕೆ ಬೇರೆ ಉದಾಹರಣೆಗಳು ಬೇಕಾಗುವುದೂ ಇಲ್ಲ. ಒಂದು ಹಂತದಲ್ಲಿ ಯಾವುದನ್ನು ಅತ್ಯಂತ ಚೆನ್ನಾಗಿ ನಿರೂಪಣೆ ಮಾಡಲಾಗಿದೆಯೋ ಅದನ್ನು ಕಲಾತ್ಮಕ ಎಂದೂ ಯಾವುದನ್ನು ಚೆನ್ನಾಗಿ ನಿರೂಪಣೆ ಮಾಡಲಿಲ್ಲವೋ ಅದನ್ನು ನಾವು ಜನಪ್ರಿಯ ಎಂದು ಹೇಳಿದ್ದೂ ಇದೆ. ಹಾಗೆಂದು ಜನಪ್ರಿಯ ಮತ್ತು ಕಲಾತ್ಮಕ ಎನ್ನುವುದಕ್ಕೆ ಒಂದು ನಿರ್ದಿಷ್ಟವಾದ ದೃಷ್ಟಿಕೋನವು ಇಲ್ಲ. ಅದರಲ್ಲಿ ವಿಭಿನ್ನವಾದ ನೆಲೆಯೂ ಇರುತ್ತದೆ. ಜೀವನ ಮತ್ತು ಅದರ ದೃಷ್ಟಿಕೋನವನ್ನು ಯಾವುದು ಹೇಳುತ್ತದೆಯೋ ಅದನ್ನು ಮಾತ್ರವೇ ನಾವು ಮಾನದಂಡವಾಗಿ ಇಟ್ಟುಕೊಂಡರೆ ಈ ಸಮಸ್ಯೆಗಳು

ಬರುವುದಿಲ್ಲ. ಕಲೆ ಮತ್ತು ಜೀವನಕ್ಕೆ ಒಂದು ನಿಕಟವಾದ ಸಂಬಂಧವೂ ಇದೆ. ಸಾಹಿತ್ಯ ಮತ್ತು ಅದರ ರೂಪಕ್ಕೆ ಒಂದು ನಿಕಟತೆಯು ಇದೆ. ಆದರೆ ಅದರ ಜೊತೆಗೆ ಇಲ್ಲಿ ಸಾಹಿತ್ಯದ ರೂಪಕ್ಕಿಂತ ಅದರ ಕ್ರಿಯೆಯನ್ನು ಮಾತ್ರವೇ ಮಾನದಂಡವಾಗಿ ಇಟ್ಟುಕೊಂಡರೆ ಆಗ ಅದರ ಅರ್ಥವು ಬೇರೆಯಾಗುತ್ತದೆ. ಶ್ರೇಷ್ಠವಾದ ಒಂದು ಕಲೆ ಮತ್ತು ಜನಪ್ರಿಯವಾದ ಕಲೆ ಎಂದು ಹೇಳುವಾಗ ನಮಗೆ ಅದರ ಪ್ರಯೋಗಗಳೂ ಮುಖ್ಯವಾಗುತ್ತವೆ. ಒಂದು ಪ್ರಶ್ನೆಯನ್ನು ನಾವು ಈವತ್ತು ಕಾಣುತ್ತಿದ್ದೇವೆ. ಅದು ಮಧ್ಯಮ ವರ್ಗ ಮತ್ತು ಕೆಳವರ್ಗಗಳ ನಿಜವಾದ ಸಮಸ್ಯೆಗಳು. ಅವರ ಸಾಮಾಜಿಕ ಅವಕಾಶ ಮತ್ತು ಅದರ ಸ್ವರೂಪವು ಒಂದು ಥರ ಇರುತ್ತದೆ. ಅದರ ಜೊತೆಗೆ ಅವರು ಯಾವುದನ್ನು ಇಷ್ಟ ಪಡುತ್ತಾರೆ ಮತ್ತು ಯಾವುದನ್ನು ಇಷ್ಟ ಪಡುವುದಿಲ್ಲ ಎಂದು ಹೇಳಲು ನಮಗೆ ಇರುವ ಮಾನದಂಡಗಳು ಯಾವುದು ಎಂದು ಹೇಳಲು ನಮಗೆ ಇರುವ ಅಂಕಿ ಅಂಶಗಳು ಕಡಿಮೆ ಎಂದು ಅನಿಸುತ್ತದೆ. ಸಾಂಸ್ಕೃತಿಕವಾದ ಒಂದು ವರ್ಗೀಕರಣವನ್ನು ಇದು ಹೇಳುತ್ತದೆ ಎನ್ನುವುದು ಮಾತ್ರ ಸತ್ಯ. ವರ್ಗಗಳು ಮತ್ತು ಅವುಗಳ ಗುಣಗಳು ಯಾವತ್ತೂ ಭಿನ್ನವಾಗಿರುತ್ತವೆ. ಇವತ್ತು ನಮಗೆ ಅನೇಕ ರೀತಿಯ ಮನೋರಂಜನೆಯನ್ನು ಕೊಡುವುದು ಟಿ.ವಿಗಳು. ಟಿ.ವಿಯಲ್ಲಿ ಬರುತ್ತಿರುವುದು ಒಂದು ವರ್ಗಕ್ಕೆ ಮನೋರಂಜನೆಯನ್ನು ಕೊಡುತ್ತದೆ. ಆದರೆ ಒಂದು ಅಂಶವನ್ನು ನಾವು ಗಮನಿಸಬೇಕು: ಟಿವಿಯಲ್ಲಿ ಬೇರೆ ಬೇರೆ ಥರದ ಕಾರ್ಯಕ್ರಮಗಳು ಬರುತ್ತವೆ. ಅದರಲ್ಲಿ ಕೇವಲ ಧಾರಾವಾಹಿಗಳು ಮಾತ್ರವೇ ಇವೆ ಎಂದು ನಾವು ಭಾವಿಸಬಾರದು. ವಿವಿಧ ಕಾರ್ಯಕ್ರಮಗಳು ಇರುತ್ತವೆ. ಅದರ ವಿವಿಧ ಕಾರ್ಯಕ್ರಮಗಳು ನಿರ್ದಿಷ್ಟವಾದ ಪರಿಣಾಮವನ್ನು ಉಂಟು ಮಾಡುತ್ತವೆ. ಟಿವಿ ಕಾರ್ಯಕ್ರಮಗಳು ಎನ್ನುವುದು ಒಂದು ವಿಶಿಷ್ಟವಾದ ಕಾರ್ಯಕ್ರಮಗಳೂ ಆಗಿರುತ್ತವೆ. ಜನರು ಯಾವುದನ್ನು ನೋಡಬೇಕೋ ಅದನ್ನು ನೋಡುತ್ತಾರೆ. ಯಾವುದು ನಮಗೆ ಅಂದರೆ ಲೇಖಕರಿಗೆ ಮತ್ತು ಬುದ್ಧಿಜೀವಿಗಳಿಗೆ ಅತ್ಯಂತ ಮೂರ್ಖತನದ್ದು ಎಂದು ಅನಿಸುತ್ತದೆಯೋ ಅದು ಎಲ್ಲರಿಗೂ ಹಾಗೆಯೇ ಆಗಬೇಕೆಂದು ಇಲ್ಲ. ಅದು ನಮಗೆ ಬೇರೆ ಸೂಚನೆಗಳನ್ನು ಕೊಡುತ್ತವೆ ಎನ್ನುವುದೂ ಖಚಿತ. ಕೆಲವು ಅತ್ಯಂತ ಸಾಮಾನ್ಯರಿಗೂ ಒಂದು ತೃಪ್ತಿಯನ್ನು ಕೊಡುತ್ತದೆ ಎನ್ನುವುದು ನಿಜ. ಕಾರ್ಮಿಕರೂ ನಮಗೆ ಕೇಳುಗರು ಮತ್ತು ಅವರು ನೋಡುಗರೂ ಆಗಿದ್ದಾರೆ. ಹಾಗಿದ್ದರೆ ನಮಗೆ ಕೆಲವು ಯಾಕೆ ಖುಶಿಯನ್ನು ಕೊಡುತ್ತದೆ ಎಂದು ಯೋಚಿಸಬೇಕು. ಅದಕ್ಕೆ ಒಂದು ಮಹತ್ವದ ಕಾರಣವು ಇದೆ: ಅದು ಇಡೀ ಜನಸಮೂಹವು ಒಂದು ಕಲೆಯನ್ನು ಹೇಗೆ

ನೋಡುತ್ತದೆ ಎನ್ನುವುದರ ಮೇಲೆ ಇದೆ. ಜನರಿಗೆ ಮುಟ್ಟುವ ಭಾಷೆ ಮತ್ತು ಜನರಿಗೆ ತಲುಪುವ ಒಂದು ವಿಶಿಷ್ಟತೆಯು ಇರುತ್ತದೆ. ಯಾವುದನ್ನು ನಾವು ಜನಪ್ರಿಯ ಎಂದು ಹೇಳುತ್ತೇವೆಯೋ ಅದರ ರೂಪವು ಈ ದೃಷ್ಟಿಯಿಂದ ಭಿನ್ನವಾಗಿರುತ್ತದೆ. ಅದು ಜನರ ಅಭಿರುಚಿಗಳನ್ನು ತೃಪ್ತಿ ಪಡಿಸುತ್ತದೆ. ಯಾವುದು ನಮಗೆ ಅತ್ಯಂತ ಮಹಾನ್ ನಿರೂಪಣೆಯು ಆಗಿದೆಯೋ ಅದರ ರೂಪವನ್ನು ನಾವು ಹೇಗೆ ಗ್ರಹಿಸುತ್ತೇವೆ ಎನ್ನುವುದು ಮಾತ್ರ ಮುಖ್ಯವಾದ ಪ್ರಶ್ನೆಯೂ ಹೌದು. ■

# ಸೌಂದರ್ಯಶಾಸ್ತ್ರ ಮತ್ತು ಅದರ ಅಂತರಗಳನ್ನು ಕಾಪಾಡಿಕೊಳ್ಳುವ ಪ್ರಶ್ನೆಗಳು

ಸಾಹಿತ್ಯ ಮತ್ತು ಕಲೆಗಳನ್ನು ನಾವು ಹೇಗೆ ನೋಡಬೇಕು ಮತ್ತು ಅದನ್ನು ಎಷ್ಟು ಅಂತರದಲ್ಲಿ ನೋಡಬೇಕು ಎನ್ನುವುದು ನಮಗೆ ಆಗಾಗ ಬಂದ ಪ್ರಶ್ನೆ. ಅದನ್ನು ಬುಲ್ಲೋ ಮಾನಸಿಕ ದೂರ ಎಂದು ಕರೆದ. ಅಂತರ ಮತ್ತು ಅದರ ದೂರಗಳು ಹೇಗೆ ಇರುತ್ತವೆ ಎನ್ನುವುದು ನಮಗೆ ಅತ್ಯಂತ ಮುಖ್ಯ. ಕಲೆಯು ಜನರ ಬಳಿಯಲ್ಲಿ ಇರಬೇಕೆ ಅಥವಾ ಅದು ಕೇವಲ ಲೇಖಕರಿಗೆ ಮತ್ತು ಬುದ್ಧಿಜೀವಿಗಳಿಗೆ ಮಾತ್ರವೇ ಸಂಬಂಧ ಪಟ್ಟದ್ದೇ ಎನ್ನುವುದು ಆಗಾಗ ಬಂದು ಮತ್ತೆ ನುಸುಳಿ ಹೋಗುತ್ತದೆ. ಆದ್ದರಿಂದ ಜನಪ್ರಿಯ ಅಭಿರುಚಿ ಮತ್ತು ಸಾಂಸ್ಥಿಕವಾದ ಅಭಿರುಚಿ ಎನ್ನುವುದು ಬೇರೆಯಾಗಿರುವುದು ನಮಗೆ ಗೊತ್ತೇ ಇದೆ. ಚಿತ್ರವನ್ನು ನೋಡುವುದು, ನಾಟಕವನ್ನು ನೋಡುವುದು ಮತ್ತು ಪುಸ್ತಕವನ್ನು ಓದುವುದು ಬೇರೆ ಬೇರೆ ಪ್ರಕ್ರಿಯೆಗಳು. ಆದರೆ ನಾಟಕವನ್ನು ನೋಡುವಾಗ ನಾವು ಅಂತರವನ್ನು ಇಟ್ಟುಕೊಳ್ಳುತ್ತೇವೆ. ಅದು ಭೌತಿಕವಾದ ಅಂತರವೂ ಹೌದು. ಅದರ ಜೊತೆಗೆ ಮಾನಸಿಕವಾದ ಅಂತರವೂ ಇರುತ್ತದೆ. ಇದರ ಜೊತೆಗೆ ಮತ್ತೊಂದು ಪ್ರಶ್ನೆಯೂ ನಮ್ಮ ಮುಂದೆ ಇದೆ. ಅದು ಅಂತರ ಎನ್ನುವುದನ್ನು ಶಾಬ್ದಿಕವಾಗಿ ನೋಡುತ್ತದೆ. ಕಲೆ ಮತ್ತು ಸೌಂದರ್ಯ ಮತ್ತು ಜನಪ್ರಿಯ ಕಲೆಗೆ ಬೇರೆ ಬೇರೆ ಅಂತರಗಳು ಇರುತ್ತವೆ ಎನ್ನುವುದು ಅದರ ವಾದ. ಸಾಮಾನ್ಯರು ಮತ್ತು ಅವರ ಅಭಿರುಚಿಗೆ ಹಾಗೂ ಬುದ್ಧಿಜೀವಿಗಳ ಅಭಿರುಚಿ ಬೇರೆ ಎಂದು ಹೇಳಲಾಗಿದೆ. ಒಂದು ಉದಾಹರಣೆಯನ್ನು ಕೊಡಬಹುದು. ಈಗ ದೂರದರ್ಶನದಲ್ಲಿ ಅನೇಕ ಧಾರಾವಾಹಿಗಳು ಬರುತ್ತವೆ. ಅದರಲ್ಲಿ ಕೆಲವು ಜನಪ್ರಿಯವಾಗಿದೆ. ಒಂದು ಕಲಾಕೃತಿಯ ಜೊತೆಗೆ ಯಾವುದೇ ಭಾವನಾತ್ಮಕವಾದ ಅಂತರವನ್ನು ಕಾಪಾಡಿಕೊಂಡರೆ ಅದನ್ನು ನಾವು ವಸ್ತುನಿಷ್ಟವಾಗಿ ನೋಡಲು ಸಾಧ್ಯ ಎನ್ನುವುದೂ

ಒಂದು ಸಿದ್ಧಾಂತ. ಮತ್ತೊಂದು ಕಲಾಕೃತಿಯನ್ನು ಅದನ್ನು ನಾವು ಸ್ವಾಯತ್ತವಾಗಿ ನೋಡಬೇಕು ಎನ್ನುವುದು ಮತ್ತೊಂದು ತತ್ವವಾಗಿದೆ. ಈ ಸಮಸ್ಯೆಯು ಬೇರೆ ಬೇರೆ ವಿಧದಲ್ಲಿ ನಮ್ಮನ್ನು ಕಾಡಿದೆ. ಎಂ, ಜಿ. ಕೃಷ್ಣ ಮೂರ್ತಿಯರು ಕುವೆಂಪು ಕಾದಂಬರಿಗಳ ಬಗ್ಗೆ ಹೇಳಿದ ಮಾತುಗಳನ್ನು ನಾವು ಗಮನಿಸಬೇಕು. ಅವರಿಗೆ ಕುವೆಂಪು ಕಾದಂಬರಿಗಳ ರಚನೆಗಳು ಅಷ್ಟು ಚೆನ್ನಾಗಿದೆ ಎಂದು ಅನಿಸಲಿಲ್ಲ. ನಾವು ಹೇಗೆ ನೋಡುತ್ತೇವೆ ಎನ್ನುವುದು ನಮ್ಮ ಅಭಿರುಚಿಯನ್ನು ಮಾತ್ರವೇ ಹೇಳುವುದಿಲ್ಲ, ಅದರ ಬದಲಿಗೆ ಅದು ನಮ್ಮ ತಾತ್ವಿಕತೆಯನ್ನೂ ಹೇಳುತ್ತದೆ. ವಾಸ್ತವವಾಗಿ ಇದು ಒಂದು ಕೃತಿಯನ್ನು ನೋಡುವ ಪ್ರಶ್ನೆಯು ಮಾತ್ರವೇ ಅಲ್ಲ, ಅದು ಬೇರೆ ಬೇರೆ ಥರ ಬೇರೆ ಬೇರೆ ಕೃತಿಗಳಿಗೆ ಅನ್ವಯವಾಗಿದೆ.ಬಹುತೇಕ ಲೇಖಕರು ಹೀಗೆ ಭಿನ್ನ ಮಾಡಿದ್ದಾರೆ. ಅವರು ಕೆಲವನ್ನು ಶ್ರೇಷ್ಠ ಮತ್ತು ಮತ್ತೆ ಕೆಲವನ್ನು ಕನಿಷ್ಟ ಎಂದು ಹೇಳಿದ್ದಾರೆ. ಕೀಳು ಅಭಿರುಚಿ ಇರುವ ಸಾಹಿತ್ಯವನ್ನು ನಾವು ತಿರಸ್ಕಾರ ಮಾಡುತ್ತೇವೆ. ಹೀಗೆ ಹೇಳುವಾಗ ಯಾವುದು ಕೀಳು ಮನೋಭಾವವನ್ನು ಹೊಂದಿದೆ ಎನ್ನುವುದು ಮಾತ್ರವೇ ನಮಗೆ ಮುಖ್ಯ. ಒಂದು ಸನ್ನಿವೇಶದಲ್ಲಿ ಚಿತ್ರದಲ್ಲಿ ಈ ಬಗೆಯ ಚರ್ಚೆಗಳು ಬಂದವು. ಸಹಜವಾದ ಚಿತ್ರವನ್ನು ಅನೇಕರು ಕೆಟ್ಟದಾಗಿದೆ ಎಂದು ಹೇಳಿದರು. ಸೂರ್ಯೋದಯ ಮತ್ತು ಸೂರ್ಯಾಸ್ತವನ್ನು ಯಾಕೆ ಚಿತ್ರದಲ್ಲಿ ಬರೆಯಬೇಕು ಎನ್ನುವುದು ಅವರ ಪ್ರಶ್ನೆಯು ಆಗಿತ್ತು. ಆದರೆ ಗ್ಯಾಸೆಯು ಇದನ್ನು ಬೇರೆ ತರ ಹೇಳುತ್ತಾನೆ: ಅವನು ಚಿತ್ರದಲ್ಲಿ ಯಾವುದು ಒಳ್ಳೆಯದು ಮತ್ತು ಯಾವುದು ಕೆಟ್ಟದ್ದು ಎಂದು ವಿವರಿಸಲು ನಮಗೆ ಇರುವ ಸಾಧ್ಯತೆಗಳೂ ಬೇರೆ ಇವೆ ಎಂದು ಹೇಳುತ್ತಾನೆ. ಮಾನವೀಯ ಮತ್ತು ಅಮಾನವೀಯ ಎನ್ನುವುದು ಹೇಗೆ ಇರುತ್ತದೆ ಎನ್ನುವುದು ಅವನ ಪ್ರಧಾನವಾದ ಒಂದು ವಾದ. ಆಧುನಿಕ ಕಲೆಗಳು ವಿವಿಧ ರೀತಿಯ ಸಾಮಾಜಿಕ ಪರಿಣಾಮವನ್ನು ಉಂಟು ಮಾಡುತ್ತವೆ. ಅವುಗಳಿಗೆ ಬೇರೆ ಬೇರೆ ಅನನ್ಯತೆಗಳೂ ಇರುತ್ತವೆ. ಆಧುನಿಕ ಚಿತ್ರಕಲೆಯು ಹೇಗೆ ಸೋತಿದೆ ಎನ್ನುವುದರ ಅರಿವು ಅವನಿಗೆ ಇದೆ. ಅದು ಜನಪ್ರಿಯ ಅಲ್ಲದೆ ಹೋಗಿರುವುದಕ್ಕೆ ಅದರದೇ ಆದ ಕಾರಣವೂ ಇದೆ ಎನ್ನುವುದು ಅವನಿಗೆ ಗೊತ್ತು. ನವ್ಯ ಕಲೆಯು ಹೇಗೆ ಜನಸಮೂಹವನ್ನು ನಿರಾಕರಿಸಿದೆ ಎಂದು ಅವನು ಸವಿವರವಾಗಿ ಹೇಳುತ್ತಾನೆ. ಅರ್ಥವಿಸಿಕೊಳ್ಳುವ ಪ್ರಕ್ರಿಯೆ ಹೇಗೆ ಒಂದು ಮಾನದಂಡವು ಆಗುತ್ತದೆ ಎಂದು ಅವನು ಹೇಳುತ್ತಾನೆ. ಅರ್ಥವಾಗದೇ ಹೋದರೆ ಆಗ ಕೃತಿಯು ಜನರನ್ನು ಮುಟ್ಟುವುದೂ ಇಲ್ಲ. ನವ್ಯತೆಯು ಒಂದು ನಿರ್ದಿಷ್ಟವಾದ ಜನವರ್ಗಕ್ಕೆ ಮಾತ್ರವೇ ಮೀಸಲಾದ ಕೃತಿಗಳು ಆದ್ದರಿಂದ ಅದರ ಆಯಾಮವು ಬೇರೆ ಇದೆ. ಕಲೆಯು ಯಾವುದನ್ನು ಪ್ರತಿನಿಧಿಸುತ್ತದೆ ಎನ್ನುವುದೂ ಇಲ್ಲಿ ಮುಖ್ಯ.

ಅದು ಒಂದು ವರ್ಗವನ್ನು ಪ್ರತಿನಿಧಿಸಿದರೆ ಆದರ ರೂಪವು ಬೇರೆಯಾಗುತ್ತದೆ. ನಾವು ಏನು ಮಾತಾಡಿದರೂ ಅಂತಿಮವಾಗಿ ಕಲೆ ಎನ್ನುವುದು ಕಲೆಯು ಮಾತ್ರವೇ ಆಗಿರುತ್ತದೆ. ಅದು ವಾಸ್ತವ ಅಲ್ಲ. ಇಲ್ಲಿ ಇನ್ನೊಂದು ಅತ್ಯಂತ ಮುಖ್ಯವಾದ ಸಂಗತಿಯನ್ನು ಹೇಳಬೇಕು: ಹತ್ತೊಂಬತ್ತನೆಯ ಶತಮಾನದಲ್ಲಿ ಬಂದ ಅತ್ಯಂತ ಮುಖ್ಯವಾದ ಪ್ರಶ್ನೆ ಎಂದರೆ ಅದು ವಾಸ್ತವದ್ದು. ವಾಸ್ತವ ಎನ್ನುವುದು ನಮಗೆ ಎಷ್ಟು ಮುಖ್ಯ ಎಂದು ಅನೇಕರು ಕೇಳಿದರು. ನಮ್ಮ ನಿಜವನ್ನು ಕತೆ ಮಾಡಿದರೆ ಅದು ನಮಗೆ ಹೇಗೆ ತಟ್ಟುತ್ತದೆ ಎಂದು ಅನೇಕರು ಕೇಳಿದರು.

ಸಹಜವಾದ ಮತ್ತು ವಾಸ್ತವವಾದಕ್ಕೆ ಯಾವ ಬಗೆಯ ಸಂಬಂಧವು ಇದೆ ಎನ್ನುವ ಪ್ರಶ್ನೆ ಬಂದಿದೆ. ಆದರೆ ಇದಕ್ಕೆ ಹೆಚ್ಚು ವ್ಯತ್ಯಾಸವು ಇರಲಿಲ್ಲ. ಬುದ್ಧಿಜೀವಿಗಳಿಗೆ ಬೇರೆ ಅವಕಾಶವು ಬಂದಾಗ ಕಲೆ ಮತ್ತು ಅದರ ಕುರಿತಾದ ಆಲೋಚನೆಗಳೂ ಬದಲಾದವು. ಇದರಿಂದ ಕಲೆಯಲ್ಲಿ ಒಳ್ಳೆಯದು ಮತ್ತು ಕೆಟ್ಟದ್ದು ಎನ್ನುವ ವರ್ಗೀಕರಣಗಳು ರೂಪಿತವಾಗತೊಡಗಿದೆ. ಯಾವುದು ಚಿತ್ರದಲ್ಲಿ ಸುಂದರವಾಗಿದೆ ಮತ್ತು ಯಾವುದು ಅಷ್ಟು ಸುಂದರವಾಗಿಲ್ಲ ಎನ್ನುವುದು ಮುಖ್ಯವಾದ ಪ್ರಶ್ನೆಯು ಆದಾಗ ಅದರ ಅರ್ಥವೂ ಬೇರೆಯಾಗುತ್ತದೆ. ಯಾವಾಗ ಜನರನ್ನು ಒಂದು ಕೃತಿಯು ಒಳಗೊಳ್ಳುತ್ತದೆಯೋ ಆಗ ಜನರು ಅದನ್ನು ನೋಡಲು ಹೆಚ್ಚು ಇಷ್ಟ ಪಡುತ್ತಾರೆ. ಗಾಂಧಿ ಬಂದ ಕಾದಂಬರಿಯು ನಮಗೆ ಯಾಕೆ ಇಷ್ಟವಾಗುತ್ತದೆ ಎಂದರೆ ಅದು ನಮ್ಮ ಜೀವನದ ಅತ್ಯಂತ ಹತ್ತಿರವಾದ ಒಂದು ಜೀವನವನ್ನು ಹೇಳುತ್ತದೆ. (ಗ್ಯಾಸೆ – 67) ಅದರಲ್ಲಿ ನಾವೂ ಭಾಗಿಯಾಗಿದ್ದೇವೆ. ಯಾವುದು ನಿಜವಾದ ಶುದ್ಧವಾದ ಕಲೆ ಎನ್ನುವುದು ಅವನಲ್ಲಿ ಚರ್ಚೆಗೆ ಗುರಿಯಾಗಿದೆ. ಕಲೆ ಮತ್ತು ಅದರ ವಸ್ತು ಎನ್ನುವುದು ಕಲೆಯ ವಸ್ತು ಮಾತ್ರವೇ ಆಗಿರುತ್ತದೆ. ಅದರಲ್ಲಿ ಬರೀ ಮನುಷ್ಯರನ್ನು ಮತ್ತು ನಿಸರ್ಗವನ್ನು ಹೇಳಬೇಕಾದ ಅಗತ್ಯವೇ ಇಲ್ಲ ಎಂದು ನವ್ಯ ಕಲಾವಿದರು ಭಾವಿಸಿದ್ದರು. ಕಲೆಯಲ್ಲಿ ಮನುಷ್ಯನು ಕೇಂದ್ರ ಎನ್ನುವುದರಲ್ಲಿ ಮಾತ್ರ ಎರಡು ಮಾತಿಲ್ಲ. ಆದರೆ ಬೂರ್ಜ್ವಾ ಲೇಖಕರು ಬದ್ಧರಾಗಲು ಇಷ್ಟ ಪಡುವುದಿಲ್ಲ. ಅವರು ಕಲೆಯನ್ನು ನೋಡುವ ಮತ್ತು ಗ್ರಹಿಸುವ ಕ್ರಮಗಳು ಬೇರೆಯಾಗಿವೆ. ಕಲೆಯನ್ನು ಎಲ್ಲದರಿಂದ ಬಿಡುಗಡೆ ಮಾಡಬೇಕು ಎನ್ನುವುದು ಅವರ ವಾದವಾಗಿದೆ. ಕಲೆ ಎನ್ನುವುದನ್ನು ಬರೀ ಕಲೆಗಾಗಿ ಮಾತ್ರವೇ ಎನ್ನುವುದನ್ನು ಹೇಳಲು ತೊಡಗಿದಾಗ ಅದರ ಅರ್ಥವೂ ಬೇರೆಯಾದ್ದು ಮಾತ್ರವೇ ಅಲ್ಲ, ಅದರ ಮೂಲಕ ಅದನ್ನು ಅಧಿಕೃತ ಮತ್ತು ಉಳಿದ ವಿಚಾರಗಳು ಅನಧಿಕೃತ ಎಂದು ಹೇಳಲಾಯಿತು. ವಾಸ್ತವವಾಗಿ ಇದಕ್ಕೆ ಹೆಚ್ಚು ಮಹತ್ವವವು ಇಲ್ಲ. ಅದು ಬೇರೆ ಪ್ರಶ್ನೆ. ಅದು ಅನೇಕವನ್ನು ದೂರ ಇಡುತ್ತದೆ. ಅದರಲ್ಲಿ ಇರುವ ಅತ್ಯಂತ

ಮುಖ್ಯವಾದ ಅಂಶವೆಂದರೆ ಕಾವ್ಯಕ್ಕಾಗಿ ಕಾವ್ಯ ಮತ್ತು ಶೈಲಿಗಾಗಿ ಶೈಲಿ ಹಾಗೂ ಭ್ರಮೆಗಾಗಿ ಭ್ರಮೆ. ಇದನ್ನು ಹೇಳುವುದು ಅತ್ಯಂತ ಸುಲಭ. ಆದರೆ ಪರಿಸ್ಥಿತಿಯು ಅಷ್ಟು ಸುಲಭವಲ್ಲ. ಇದನ್ನು ಸ್ವಲ್ಪ ತಿರುಗಿಸಿಕೊಂಡು ನೋಡಿದರೆ ಇದರ ಮತ್ತೆ ಬೇರೆ ಅರ್ಥವು ಸಿಗುತ್ತದೆ. ಕೆಡುಕಿಗಾಗಿ ಕೆಡುಕು, ಅನ್ಯಾಯಕ್ಕಾಗಿ ಅನ್ಯಾಯ ಇತ್ಯಾದಿ.

ಸಾಹಿತ್ಯ ಮತ್ತು ಅದರ ರೂಪಗಳ ಬಗ್ಗೆ ಮಾತಾಡುವಾಗ ಅನೇಕರು ಇದನ್ನು ಹೇಳುತ್ತಾರೆ.- ಸಾಹಿತ್ಯ ಮತ್ತು ಅದರ ರೂಪ ಹಾಗೂ ಅದರ ಅನನ್ಯತೆಯನ್ನು ಹೇಳುತ್ತಾರೆ. ಆದರೆ ಇರುವ ಸಮಸ್ಯೆ ಎಂದರೆ ಅದು ಸ್ವತಂತ್ರ ಮತ್ತು ಸ್ವಾಯತ್ತ ಎಂದು ಭಾವಿಸಿದ್ದು ಸತ್ಯ. ಇದರ ಅರ್ಥ ಸಾಹಿತ್ಯ ಮತ್ತು ಅದರ ರೂಪವನ್ನು ನಾವು ತಿರಸ್ಕಾರ ಮಾಡಬೇಕೆಂದು ಅಲ್ಲ, ಅದರ ಬದಲಿಗೆ ಅದನ್ನು ನಾವು ಹೇಗೆ ಒಂದು ಮಾನದಂಡವಾಗಿ ನೋಡುತ್ತೇವೆ ಎಂದು ಮಾತ್ರ. ಹಾಗೆ ನೋಡಿದರೆ ಸಾಹಿತ್ಯ ಮತ್ತು ಅದರ ರೂಪಗಳು ತನ್ನ ಕಾರ್ಯವನ್ನು ಸದಾ ನಿರ್ವಹಣೆ ಮಾಡುತ್ತವೆ. ಅದು ಗದ್ಯ, ಪದ್ಯ, ಶೈಲಿ ಮುಂತಾದ ವಿಚಾರಗಳಲ್ಲಿ ತಮ್ಮ ನಿರ್ವಹಣೆ ಮಾಡುತ್ತವೆ.

ಇಲ್ಲಿ ಇನ್ನೊಂದು ವಿಚಾರವನ್ನು ನಾವು ಗಮನಕ್ಕೆ ತಂದು ಕೊಳ್ಳಬೇಕು: ಬಣ್ಣ ಮತ್ತು ಅದರ ಬಳಕೆಯಲ್ಲಿ ಬೇರೆ ಬೇರೆ ವಿಧಾನಗಳು ಇವೆ. ಒಬ್ಬೊಬ್ಬರು ಒಂದೊಂದು ರೀತಿಯಲ್ಲಿ ಬಣ್ಣವನ್ನು ಬಳಸುತ್ತಾರೆ. ಒಬ್ಬರು ಅದನ್ನು ಚಿತ್ರಕ್ಕೆ ಬಳಸಬಹುದು, ಮತ್ತೊಬ್ಬರು ಅದನ್ನು ಮುಖವರ್ಣಿಕೆಗೆ ಬಳಸಬಹುದು, ಇನ್ನೊಬ್ಬರು ಅದೇ ಬಣ್ಣಗಳಲ್ಲಿ ಹೋಳಿಯನ್ನು ಆಡಬಹುದು. ಒಬ್ಬರು ಬಣ್ಣಗಳ ಮೂಲಕ ರೇಖಾ ಚಿತ್ರವನ್ನು ಬರೆಯಬಹುದು. ವೈಯಕ್ತಿಕತೆಗೆ ಅನುಸಾರವಾಗಿ ಇದು ಬೇರೆಯಾಗುತ್ತದೆ. ಆದ್ದರಿಂದ ಸೌಂದರ್ಯಶಾಸ್ತ್ರದಲ್ಲಿ ಯಾವುದನ್ನು ಎಷ್ಟು ಅಂತರದಲ್ಲಿ ಇಡಬೇಕು ಎನ್ನುವುದು ನಮಗೆ ಬಿಟ್ಟದ್ದೂ ಹೌದು.

■

# ತಟಸ್ಥ ಧೋರಣೆಗಳು ಮತ್ತು ವಿಶ್ವಾತ್ಮಕತೆ

ಯಾವತ್ತು ನಮಗೆ ಸಾಹಿತ್ಯ ಮತ್ತು ಕಲೆಯು ಅಗತ್ಯವೇ ಇಲ್ಲವೆಂದು ಅನಿಸುತ್ತದೆಯೋ ಆಗ ನಾವು ಅದನ್ನು ಹೊರಗೆ ಇಡುತ್ತೇವೆ. ಆದ್ದರಿಂದ ಈ ಅರ್ಥದಲ್ಲಿ ಕಲೆಯು ಒಂದು ಸಮಾಜದ ಜೊತೆಗೆ ಒಂದು ನಿರ್ಣಾಯಕವಾದ ಸಂಬಂಧವನ್ನು ಇಟ್ಟುಕೊಳ್ಳುತ್ತದೆ. ಹಾಗೂ ಇಟ್ಟುಕೊಳ್ಳಬೇಕಾಗುತ್ತದೆ. ಓದುಗರು ಇರುತ್ತಾರೆ. ಕಲೆಯನ್ನು ನೋಡುವವರು ಇರುತ್ತಾರೆ. ಅದರ ಜೊತೆಗೆ ನಾವು ಈವತ್ತು ಅನೇಕವನ್ನು ಕೇಳಿಸಿಕೊಳ್ಳುತ್ತೇವೆ. ನಾವು ಈ ದೃಷ್ಟಿಯಿಂದ ನಮ್ಮ ಕಣ್ಣಿಗೆ ಹೆಚ್ಚು ಮಹತ್ವವನ್ನು ಕೊಡುತ್ತೇವೆ. ಅದರ ಜೊತೆಗೆ ನಾವು ನಮ್ಮ ಮನಸ್ಸು ಯಾವುದನ್ನು ಸ್ವೀಕಾರ ಮಾಡುತ್ತದೆಯೋ ಅದನ್ನು ಮಾತ್ರ ಸ್ವೀಕಾರ ಮಾಡುತ್ತೇವೆ. ಆದರೆ ಕಲೆಯಲ್ಲಿ ನಾವು ಯಾವುದನ್ನು ಹೇಳುತ್ತೇವೆ ಎನ್ನುವುದರ ಆಧಾರದ ಮೇಲೆ ಅದರ ಸಾಧ್ಯತೆಯು ರೂಪುಗೊಳ್ಳುತ್ತದೆ. ಪ್ರತಿಯೊಬ್ಬ ಕಲಾವಿದ ಮತ್ತು ಪ್ರತಿಯೊಬ್ಬ ಲೇಖಕನು ತನ್ನದೇ ಆದ ಒಂದು ಶೈಲಿಯನ್ನು ಇಟ್ಟುಕೊಂಡಿರುತ್ತಾನೆ. ಅದರ ಆಧಾರದ ಮೇಲೆ ಅವನ ನಿಲುವುಗಳು ವ್ಯಕ್ತವಾಗುತ್ತವೆ. ಇಲ್ಲಿ ಒಂದು ಅಂಶವನ್ನು ನಾವು ಹೇಳಬೇಕು: ಎಸ್.ಎಲ್. ಭೈರಪ್ಪ ತುಂಬಾ ಜನಪ್ರಿಯರಾದ ಲೇಖಕರು. ಅವರ ಕಾದಂಬರಿಗಳನ್ನು ಅನೇಕರು ಓದುತ್ತಾರೆ. ಅನೇಕರು ಅವರ ಬರಹಗಳನ್ನು ಇಷ್ಟಪಡುತ್ತಾರೆ. ಆದರೆ ಅವರು ಕೆಲವು ಬರಹಗಳಲ್ಲಿ ವಾಸ್ತವತೆಯನ್ನು ಹೇಳಿದರು ಎಂದು ಅರ್ಥವಲ್ಲ. ಇಲ್ಲಿ ಇನ್ನೊಂದು ಅಂಶವನ್ನು ನಾವು ಗಮನಿಸಬೇಕು: ಆಧುನಿಕ ಕಲೆಯಲ್ಲಿ ಶೈಲಿ ಮತ್ತು ಅದರ ಪರಿಣಾಮವು ಎದ್ದು ಕಾಣಿಸುತ್ತದೆ.



# ಅನನ್ಯತೆಯ ಪ್ರಶ್ನೆ

ಅನೇಕರು ಆಧುನಿಕ ನಾಗರಿಕ ಸಮಾಜದಲ್ಲಿ ವ್ಯಕ್ತಿವಾದವು ಅತ್ಯಂತ ಮುಖ್ಯ ಎಂದು ಅನೇಕರು ತಿಳಿದಿದ್ದಾರೆ. ನಮಗೆ ನಮ್ಮದೇ ಆದ ಒಂದು ಅನನ್ಯತೆಯು ಇದೆ. ಆಧುನಿಕ ನಾಗರಿಕತೆಯು ನಮ್ಮ ವ್ಯಕ್ತಿತ್ವವವನ್ನು ರೂಪಿಸಿದೆ. ಜಗತ್ತು ನಮಗೆ ಬೇಕಾದ ರೂಪವನ್ನು ಕೊಟ್ಟಿದೆ ನಮ್ಮ ವ್ಯಕ್ತಿತ್ವ ಮತ್ತು ಅದರ ನಿರ್ಧಾರವನ್ನು ಯಾವುದು ಮಾಡುತ್ತದೆ ಎನ್ನುವುದು ಬೇರೆ ಪ್ರಶ್ನೆ. ನಮಗೆ ಒಂದು ಹೆಸರು ಇದೆ. ಅದರ ಮೂಲಕ ನಮ್ಮನ್ನು ಜನರು ಗುರುತಿಸುತ್ತಾರೆ. ಅಷ್ಟೇ ಅಲ್ಲ ನಾವು ನಮಗೆ ಬೇಕಾದ ಜೀವನವನ್ನು ರೂಪಿಸುತ್ತೇವೆ. ಒಂದು ಕಡೆಯಿಂದ ಆಧುನಿಕ ನಾಗರಿಕತೆ ಮತ್ತೊಂದು ಕಡೆಯಲ್ಲಿ ನಮ್ಮ ಜೀವನ ಮತ್ತು ಅದರ ಆಯ್ಕೆಗಳು ಅತ್ಯಂತ ಮುಖ್ಯ. ಎಲ್ಲವೂ ಸೇರಿಕೊಂಡು ನಮಗೆ ಒಂದು ವ್ಯಕ್ತಿತ್ವವು ಬರುತ್ತದೆ. ಆಧುನಿಕ ಲೇಖಕರು ಇದನ್ನು ನಮಗೆ ಹೇಳಿದರು. ಆದರೆ ನಮಗೆ ನಮ್ಮದೇ ಆದ ಒಂದು ಆರ್ಥಿಕವಾದ ನೆಲೆಯು ಇರುತ್ತದೆ. ಅದೂ ನಮ್ಮ ವ್ಯಕ್ತಿತ್ವವನ್ನು ಹೇಳುತ್ತದೆ. ಇದರ ಜೊತೆಗೆ ನಮ್ಮ ಕುಟುಂಬ, ನಮ್ಮ ಪರಿಸರ, ಸಂಪ್ರದಾಯಗಳು ನಮ್ಮ ಮೇಲೆ ಪ್ರಭಾವವನ್ನು ಬೀರುತ್ತದೆ. ನಮ್ಮ ಸಂಪ್ರದಾಯ ಮತ್ತು ಕೌಟುಂಬಿಕ ವ್ಯವಸ್ಥೆಯು ನಮಗೆ ಕೆಲವು ವಿಧಿವಿಧಾನಗಳನ್ನು ಹೇಳುತ್ತವೆ. ಸಂಪ್ರದಾಯಗಳು ನಮ್ಮ ಸ್ವತಂತ್ರವಾಗಿ ಇರಲು ಬಿಡುವುದಿಲ್ಲ. ಇಲ್ಲಿ ಇನ್ನೊಂದು ವಿಚಾರವನ್ನು ಹೇಳಬೇಕು: ಆಧುನಿಕ ಸ್ವಾತಂತ್ರ್ಯ ಮತ್ತು ಅದರ ಕಲ್ಪನೆಯು ಬೇರೆ ಬೇರೆ ಥರ ಇರುತ್ತದೆ. ಅದರ ಸ್ವರೂಪವು ನಮಗೆ ನೀತಿ ಮತ್ತು ಕಾನೂನು ಎನ್ನುವುದನ್ನು ಜೊತೆಗೆ ತರುತ್ತದೆ. ಇದರಿಂದ ನಮಗೆ ಬೇರೆ ಅವಕಾಶಗಳಾದವು. ಅಷ್ಟೇ ಅಲ್ಲ, ಅದರ ಮೂಲಕ ನಾವು ವ್ಯಕ್ತಿತ್ವ ಮತ್ತು ಅದರ ಅನನ್ಯತೆಯನ್ನು ವಿಸ್ತಾರಮಾಡಿಕೊಂಡೆವು. ಹಳೆಯ ನಂಬಿಕೆಗಳು ಮತ್ತು ಹಳೆಯ ಸಂಪ್ರದಾಯಗಳು ಬದಲಾಗಲು ಇದು ಕೂಡಾ ಒಂದು ಕಾರಣವಾಗಿದೆ. ಆದ್ದರಿಂದ ಈವತ್ತು ನಾವು ಕಾನೂನು ಮತ್ತು ಸ್ವಾತಂತ್ರ್ಯವನ್ನು ಜೊತೆಗೆ ತೆಗೆದುಕೊಂಡು ಹೋಗುತ್ತಿದ್ದೇವೆ.

ಹಾಗಿದ್ದರೂ ಒಂದು ಮಾತು ಸತ್ಯವಾಗಿದೆ: ಈವತ್ತು ಅನೇಕ ಸಂಗತಿಗಳು ನಮ್ಮನ್ನು ನಿಯಂತ್ರಣ ಮಾಡುತ್ತವೆ. ಅದು ಒಮ್ಮೊಮ್ಮೆ ನಮ್ಮ ಗ್ರಹಿಕೆಗೆ ಬರುವುದಿಲ್ಲ. ಅದರ ಜೊತೆಗೆ ಇಲ್ಲಿ ಇನ್ನೊಂದು ಸಂಗತಿಯು ಇದೆ: ಈವತ್ತು ನಮ್ಮ ಅನನ್ಯತೆ ಎಂದರೆ ಅದು ಮನುಷ್ಯ ಸಹಜವಾದ್ದು. ನಾವು ಪ್ರಾಣಿಗಳು ಅಲ್ಲ. ಆದ್ದರಿಂದ ನಮ್ಮ ಜೀವನಕ್ಕೆ ಒಂದು ಅರ್ಥವು ಇದೆ. ನಮಗೆ ಯಾವುದು ಅರ್ಥಪೂರ್ಣವಾಗಿದೆ ಎಂದು ಅನಿಸುತ್ತದೆಯೋ ಅದು ಸನ್ನಿವೇಶಕ್ಕೆ ಅನುಸಾರವಾಗಿ ಬೇರೆಯಾಗುತ್ತದೆ. ನಾವು ನಮ್ಮ ಕ್ರಿಯೆ ಮತ್ತು ನಮ್ಮ ಚಟುವಟಿಕೆಯ ಮೂಲಕ ನಮ್ಮ ಜೀವನದ ಅರ್ಥವನ್ನು ಹುಡುಕುತ್ತೇವೆ. ನಮ್ಮ ಕ್ರಿಯೆಯು ನಮಗೆ ಹೆಚ್ಚು ಅರ್ಥಪೂರ್ಣ ಎಂದು ಅನಿಸಿದರೆ ನಾವು ಅದನ್ನು ಮಾಡುತ್ತೇವೆ. ಅರ್ಥಹೀನವಾದ ಕೆಲಸ ಎಂದು ಅನಿಸಿದರೆ ಅದನ್ನು ಬಿಡುತ್ತೇವೆ. ತುಘಲಕ್ ನಾಟಕವನ್ನು ಇಲ್ಲಿ ಯೋಚನೆ ಮಾಡುವುದು ಅತ್ಯಂತ ಸೂಕ್ತ. ಕಾರ್ನಾಡರು ಇದನ್ನು ಹೇಳುತ್ತಾರೆ. ಒಂದು ಆದರ್ಶ ಮತ್ತು ಒಂದು ವಾಸ್ತವ ಅದರಲ್ಲಿ ಮುಖಾಮುಖಿಯಾಗುತ್ತವೆ. ಕೊನೆಗೆ ತನ್ನ ಕ್ರಿಯೆಯು ಅರ್ಥ ಹೀನವಾದ್ದು ಎಂದು ಅನಿಸುತ್ತದೆ. ತಾನು ಇಟ್ಟುಕೊಂಡ ಆದರ್ಶವು ಹೇಗೆ ವಿಫಲವಾಗುತ್ತದೆ ಎನ್ನುವುದು ಇದರ ಅತ್ಯಂತ ಮುಖ್ಯವಾದ ಒಂದು ದೃಷ್ಟಿಕೋನ. ಹಾಗೆ ನೋಡಿದರೆ ನಮ್ಮ ಎಲ್ಲಾ ಕ್ರಿಯೆಗಳು ಜಗತ್ತಿನ ಜೊತೆಗೆ ಒಂದು ಸಂಬಂಧವನ್ನು ಇಟ್ಟುಕೊಂಡಿರುತ್ತವೆ. ಆದರೆ ಕ್ರಿಯೆ ಎನ್ನುವುದು ವಿಸ್ತಾರವಾಗುತ್ತದೆ. ನಮ್ಮ ಕ್ರಿಯೆಗಳೇ ನಮಗೆ ಒಂದು ಆಧಾರವೂ ಹೌದು. ನಮ್ಮ ಜೀವನ ಮತ್ತು ನಮ್ಮ ಜೀವನದ ಆದರ್ಶ ಒಂದಕ್ಕೊಂದು ತಾಳೆಯಾಗದೆ ಹೋದರೆ ಆಗ ಅದರ ಅರ್ಥವು ಬೇರೆಯಾಗುತ್ತದೆ. ಒಂದು ಸೋಲಿನ ಅನುಭವ ಆಗುತ್ತದೆ. ಉದ್ದೇಶರಹಿತವಾದ ಒಂದು ಜೀವನ ಮತ್ತು ಅದರ ಸ್ವರೂಪವು ಒಂದು ರೀತಿಯಲ್ಲಿ ಹೀಗೆಯೇ ನಮ್ಮ ಕ್ರಿಯೆ ಎನ್ನುವುದು ಅತ್ಯಂತ ದುರ್ಬಲವಾದರೆ ಅದರ ಪರಿಣಾಮವೂ ಅತ್ಯಂತ ದುರ್ಬಲವಾಗುತ್ತದೆ.

ಇದರ ಜೊತೆಗೆ ಈವತ್ತು ನಾವು ಕಾರ್ಯ ಮತ್ತು ಕಾರಣವನ್ನು ಹೆಚ್ಚು ವಾದಿಸುತ್ತೇವೆ. ಕಾರ್ಯಕ್ಕೂ ಕಾರಣಕ್ಕೂ ಸಂಬಂಧವಿದೆ ಎನ್ನುವುದು ಎಲ್ಲರಿಗೂ ಗೊತ್ತಿರುವ ಸಂಗತಿಯು ಆಗಿದೆ. ಕಾರಣವಾದವು ಅನೇಕ ಸೂಚನೆಗಳನ್ನು ಕೊಟ್ಟಿರುವುದೂ ಸತ್ಯ. ಅದರ ಜೊತೆಗೆ ಇವತ್ತು ಇನ್ನೊಂದು ಪರಿಕಲ್ಪನೆಯು ಹೆಚ್ಚು ಕೆಲಸವನ್ನು ಮಾಡುತ್ತದೆ. ಅದನ್ನು ವೈಚಾರಿಕತೆ ಎಂದು ಸ್ಥೂಲವಾಗಿ ಹೇಳಬಹುದು. ಈವತ್ತು ನಮಗೆ ಸ್ವಂತ ಮತ್ತು ಅದರ ತ್ಯಾಗ ಎನ್ನುವುದು ಅಷ್ಟು ಮುಖ್ಯವಾಗಿಲ್ಲ. ಒಂದು ಸಂಗತಿಯನ್ನು ನಾವು ಇಲ್ಲಿ ಗಮನಿಸಬೇಕು: ಈಗ ಹೆಚ್ಚುತ್ತಿರುವ ಆರ್ಥಿಕ ಅಸಮತೆಯನ್ನು ನೋಡಿದರೆ ಇಲ್ಲಿ ನಾವು ನಮ್ಮ ವ್ಯಕ್ತಿತ್ವವನ್ನು

ಉಳಿಸಿಕೊಳ್ಳುವದೇ ಅತ್ಯಂತ ಕಷ್ಟ. ಒಂದು ಅಸಮತೆಯು ಇದೆ. ನಾವು ತಂತ್ರಜ್ಞಾನವನ್ನು ಒಂದು ಹಂತದಲ್ಲಿ ಒಪ್ಪಿಕೊಂಡಿದ್ದೇವೆ. ನಮಗೆ ಬರುವ ಕಾಯಿಲೆಗಳನ್ನು ಅರ್ಥ ಮಾಡಿಕೊಳ್ಳಲು ನಮಗೆ ತಂತ್ರಜ್ಞಾನವು ಬೇಕಾಗಿದೆ. ನಮ್ಮ ಸುತ್ತ ಯಾವುದು ಇದೆಯೋ ಅದಕ್ಕೆ ಅನುಸಾರವಾಗಿ ನಾವು ಬದುಕುತ್ತೇವೆ. ಅದರ ಲಾಭವನ್ನು ಪಡೆಯುತ್ತೇವೆ. ನಮ್ಮ ವಾಸ್ತವ ಮತ್ತು ನಮ್ಮ ನಂಬಿಕೆಗಳು ಇದರ ಮೂಲಕವೇ ಬರುತ್ತವೆ. ಹಾಗಿದ್ದರೂ ನಮ್ಮ ಸ್ವಾತಂತ್ರ್ಯ ಎಂದರೆ ಅದನ್ನು ಬರೀ ಒಂದು ಶೂನ್ಯ ಎಂದು ಭಾವಿಸುವುದು ಸರಿಯಲ್ಲ. ಕೈಗಾರಿಕಾ ಸಮಾಜ ಮತ್ತು ಬಂಡವಾಳವಾದಿ ಸಮಾಜದಲ್ಲಿ ನಮ್ಮ ಆಯ್ಕೆಗಳು ಹೆಚ್ಚು ಇರುವುದಿಲ್ಲ. ಅದು ಆಯ್ಕೆಯನ್ನು ಮಿತಿಗೊಳಿಸುತ್ತದೆ. ನಮ್ಮ ಭಾವನೆಗಳು ಮತ್ತು ನಮ್ಮ ರಾಜಕೀಯ ಆಯ್ಕೆಗಳಿಗೂ ಇದಕ್ಕೂ ಒಂದು ಸಂಬಂಧವು ಇದೆ.

ಹಾಗೆ ನೋಡಿದರೆ ಒಬ್ಬನ ಮೌಲ್ಯವು ಮತ್ತೊಬ್ಬನ ಮೌಲ್ಯ ಅಲ್ಲ. ಆದ್ದರಿಂದ ನಾವು ನನ್ನದೇ ನಿಜವಾದ ಮೌಲ್ಯ, ನಿನ್ನದು ನಿಜವಾದ ಮೌಲ್ಯ ಅಲ್ಲವೆಂದು ಹೇಳುವುದು ಅತ್ಯಂತ ಕಷ್ಟ. ನಮಗೆ ನಮ್ಮದೇ ಆದ ನಂಬಿಕೆ ಮತ್ತು ನಮ್ಮದೇ ಆದ ಒಂದು ಮೌಲ್ಯವಿದೆ. ನಾವು ನಮಗೆ ಯಾವುದು ಬೇಕೆಂದು ಅನಿಸುತ್ತದೆಯೋ ಅದನ್ನು ಮಾತ್ರವೇ ಸ್ವೀಕಾರ ಮಾಡುತ್ತೇವೆ. ಅದಕ್ಕೆ ಅನುಸಾರವಾಗಿ ಜೀವಿಸುತ್ತೇವೆ. ಯಾವುದು ನಮ್ಮ ವ್ಯಕ್ತಿತ್ವ ಮತ್ತು ಅದರ ಭಾಗವಾಗಿದೆಯೋ ಅದು ತನ್ನದೇ ಆದ ಒಂದು ಅಸ್ತಿತ್ವವನ್ನು ಹೊಂದಿರುತ್ತದೆ ಎನ್ನುವುದು ಸತ್ಯ. ಆಧುನಿಕ ಯುಗವು ಹೇಗೆ ಆತ್ಮರತಿಯನ್ನು ಒಳಗೊಂಡಿದೆ ಎನ್ನುವುದನ್ನು ಅನೇಕ ಸಮಾಜಶಾಸ್ತ್ರಜ್ಞರು ಹೇಳುತ್ತಾರೆ. ಈವತ್ತು ನಾವು ಅನೇಕ ವೈರುಧ್ಯಗಳ ಜೊತೆಗೆ ಬದುಕುತ್ತಿದ್ದೇವೆ. ಮತ್ತೊಂದು ವಾದವಿದೆ. ಅದನ್ನು ಸಾಂಸ್ಕೃತಿಕ ಆತ್ಮರತಿ ಎಂದು ಹೇಳುತ್ತಾರೆ. ಇದರಲ್ಲಿ ವ್ಯಕ್ತಿವಾದವು ಸೇರಿಕೊಂಡಿದೆ. ಈ ವ್ಯಕ್ತಿವಾದವು ವಾಸ್ತವವಾಗಿ ರಾಜಕಾರಣ, ಆರ್ಥಿಕತೆ ಮತ್ತು ಚಾರಿತ್ರಿಕವಾದ ಸನ್ನಿವೇಶಗಳೂ ಇರುತ್ತವೆ. ಇದಕ್ಕೂ ನಮ್ಮ ಲೋಕದ ಗ್ರಹಿಕೆಗೂ ಒಂದು ಸಂಬಂಧವಿದೆ. ಅದರ ಜೊತೆಗೆ ಇದು ನಮ್ಮ ತಾತ್ವಿಕವಾದ ಒಂದು ದೃಷ್ಟಿಕೋನವನ್ನು ಹೇಳುತ್ತದೆ.

■

# ಸಹಜ ಆಲೋಚನೆಗಳ ಪ್ರಾಕ್ತನ ರೂಪ

ಪುನರುಜ್ಜೀವನವು ಬರುವ ವರೆಗೆ ನಮ್ಮ ಆಲೋಚನೆಗಳು ಮತ್ತು ನಮ್ಮ ಚಿಂತನೆಗಳು ಒಂದು ಆಯಾಮವನ್ನು ಮಾತ್ರವೇ ಹೊಂದಿತ್ತು. ಅದು ಸಹಜವಾದ ಒಂದು ಜ್ಞಾನ ಎಂದು ಹೇಳಿದರೂ ಸರಿಯಾಗುತ್ತದೆ. ವೈಲ್ಡ್ ಮಾನ್ ಒಂದು ಮಾತನ್ನು ಹೇಳುತ್ತಾನೆ.: ಹದಿನಾರು ಮತ್ತು ಹದಿನೇಳನೆಯ ಶತಮಾನದಲ್ಲಿ ಮನುಷ್ಯರ ಆಲೋಚನೆಗಳು ಒಂದು ಬಗೆಯಲ್ಲಿ ಇದ್ದವು. ಅದನ್ನು ಅವನು ಅಂಗೀಕರಿಸಬಹುದಾದ ಒಂದು ಆಲೋಚನೆ ಎಂದು ಭಾವಿಸುತ್ತಾನೆ. ಅದರ ಜೊತೆಗೆ ಅದನ್ನು ಹೇಳುವಾಗ ಆಗಿನ ಮನುಷ್ಯರ ಸ್ವಭಾವವು ಭ್ರಷ್ಟವಾಗಿರಲಿಲ್ಲ ಎಂದೂ ಹೇಳುತ್ತಾನೆ. ಇದನ್ನು ಹೇಳುವಾಗ ಅವನು ಹಿಂದೆ ಏನು ಪುರಾಣಗಳು ಇದ್ದವೋ ಅದನ್ನು ಮರುನಿರೂಪಣೆ ಮಾಡುತ್ತಾನೆ. ಅವನ ಪ್ರಕಾರ ಅದು ಆಧುನಿಕ ಪೂರ್ವ ಮನುಷ್ಯರು ಮತ್ತು ಅವರ ಆಲೋಚನೆಗಳನ್ನು ಹೇಳುತ್ತದೆ. ಸಾಂಸ್ಕೃತಿಕ ಚರಿತ್ರೆಯ ದೃಷ್ಟಿಯಿಂದ ಇದು ಅತ್ಯಂತ ಮಹತ್ವದ್ದು. ಉದಾಹರಣೆಯನ್ನು ಹೇಳಬೇಕೆಂದರೆ ಆಧುನಿಕ ಚಿಂತನೆಗಳು ಹೇಗೆ ಇವೆ ಎನ್ನುವುದನ್ನು ನಾವು ದೇಸಾಯಿಯವರಲ್ಲಿ ಕಾಣಬಹುದು. ಆದರೆ ಇದನ್ನು ನಾವು ಕುಮಾರವ್ಯಾಸನಲ್ಲಿ ನಿರೀಕ್ಷೆ ಮಾಡಲು ಬರುವುದಿಲ್ಲ. ಒಂದು ವಿಚಾರವನ್ನು ನಾವು ಇಲ್ಲಿ ಅರ್ಥ ಮಾಡಿಕೊಳ್ಳುವುದು ಅತ್ಯಂತ ಸೂಕ್ತ. ಕುಮಾರವ್ಯಾಸನು ಯಾವ ಆಲೋಚನೆಯನ್ನು ಹೊಂದಿದ್ದನೋ ಅದೇ ರೀತಿಯ ಆಲೋಚನೆಯನ್ನು ಪಂಪನು ಹೊಂದಿರಲಿಲ್ಲ. ಪಶ್ಚಿಮದ ಇತಿಹಾಸಕಾರರು ನಿರೂಪಿಸಿದ ವರ್ಗಗಳನ್ನು ಇಲ್ಲಿ ಹೇಳಬೇಕು– ಅವರು ಪ್ರಾಚೀನ ಕಾಲ, ಮಧ್ಯಯುಗ ಮತ್ತು ಆಧುನಿಕ ಯುಗ. ಇದು ಆಗ ಅತ್ಯಂತ ಮುಖ್ಯವಾದ ಸಂಗತಿಯನ್ನು ಹೇಳಿದ್ದು ಸತ್ಯ. ಹೀಗೆ ಹೇಳುವಾಗ ಅವರು ನಿರ್ದಿಷ್ಟವಾದ ಮಾನದಂಡವನ್ನು ಇಟ್ಟುಕೊಂಡಿದ್ದರು. ಇದರಲ್ಲಿ ನಿರೂಪಣೆ ಮತ್ತು ರಚನೆಗಳ ಸ್ವರೂಪವು ಕೆಲಸವನ್ನು ಮಾಡಿದೆ. ಸಾಹಿತ್ಯ ಮತ್ತು ಅದರ ರಚನೆಗಳು ಹೇಗೆ ಇದ್ದವು ಮತ್ತು ಅದರ ಪರಿಣಾಮವು ಏನು ಎನ್ನುವುದಕ್ಕೆ ನಮ್ಮಲ್ಲಿ ಬೇಕಾದ

ಆಧಾರಗಳು ಇಲ್ಲ. ಒಂದು ಅರ್ಥದಲ್ಲಿ ಆಗ ಬಂದ ಸಾಹಿತ್ಯ ಮತ್ತು ಅದರ ರೂಪಗಳು ಆಗಿನ ಚರಿತ್ರೆಗೆ ಸರಿಯಾಗಿದ್ದವು. ಹದಿನೇಳನೆಯ ಶತಮಾನ ಮತ್ತು ಹದಿನೆಂಟನೆಯ ಆದಿ ಭಾಗದಲ್ಲಿ ಸಮಾಜ ಮತ್ತು ಅದರ ಚಿಂತನೆಗಳಲ್ಲಿ ಬದಲಾವಣೆಯು ಕಾಣಿಸಿತು. ಅದರ ಪರಿಣಾಮವಾಗಿ ಹೊಸದಾದ ವರ್ಗವು ಸಮಾಜದಲ್ಲಿ ಮುಂಚೂಣಿಗೆ ಬಂದಿತು. ಇದನ್ನು ಆಧುನಿಕ ಶ್ರೇಷ್ಟ ವರ್ಗ ಎಂದೂ ಹೇಳಬಹುದು. ಬಹು ರೀತಿಯ ಆಲೋಚನೆಗಳು ಹುಟ್ಟಲು ಆಧುನಿಕ ಯುಗವೂ ಕಾರಣವಾಗಿದೆ. ನಮ್ಮ ಸಾಂಸ್ಕೃತಿಕ ಚರಿತ್ರೆಗೆ ಅದರದೇ ಒಂದು ಆಯಾಮವು ಇರುವುದು ಸತ್ಯ. ಅದನ್ನು ನಾವು ಹೇಗೆ ನಿರೂಪಿಸುತ್ತೇವೆ ಎನ್ನುವುದರ ಆಧಾರದ ಮೇಲೆ ಅನೇಕ ಸಂಗತಿಗಳು ನಡೆಯುತ್ತವೆ. ಚರಿತ್ರೆಯಲ್ಲಿ ಅನೇಕವು ಮಿಶ್ರವಾಗುತ್ತವೆ. ಅದರ ಜೊತೆಗೆ ಮತ್ತೆ ಕೆಲವು ಚಾರಿತ್ರಿಕವಾದ ಒಂದು ಸಂಯೋಗವನ್ನು ಪಡೆಯುತ್ತವೆ. ಮತ್ತೆ ಕೆಲವು ಅಂಶಗಳು ಭಿನ್ನತೆಗಳನ್ನು ಹೇಳುತ್ತವೆ. ಆದ್ದರಿಂದ ಈವತ್ತು ಚರಿತ್ರೆಯನ್ನು ನೋಡುವಾಗ ನಾವು ಅತಿ ಸೂಕ್ಷ್ಮತೆಯನ್ನು ಇಟ್ಟುಕೊಳ್ಳಬೇಕಾಗುತ್ತದೆ.

ಒಮ್ಮೆ ಗುಲಾಮರಿಗೆ ಯಾವುದೇ ಶಿಸ್ತುಗಳು ಇಲ್ಲ ಆದ್ದರಿಂದ ಅವರು ಚರಿತ್ರೆಯನ್ನು ಕಟ್ಟಲಾರರು ಎಂದು ಹೇಳುತ್ತಿದ್ದರು. ಅಷ್ಟೇ ಅಲ್ಲ ನಿಜವಾದ ಚರಿತ್ರೆ ಎಂದರೆ ಅದು ಶ್ರೇಷ್ಟರಾದ ಜನರದ್ದು ಎನ್ನುವುದೂ ಒಂದು ಕಲ್ಪನೆಯು ಆಗಿತ್ತು. ಆದರೆ ಯಾವುದನ್ನು ನಾವು ನಾಗರಿಕವಾದ ಒಂದು ಸಮಾಜ ಎಂದು ಹೇಳುತ್ತೇವೆಯೋ ಅದರಲ್ಲಿ ಕೆಲವನ್ನು ಸೇರ್ಪಡೆ ಮಾಡಲಾಗಿತ್ತು. ಮತ್ತೆ ಕೆಲವನ್ನು ಬಾಹಿರ ಎಂದು ತಿಳಿಯಲಾಗಿತ್ತು. ಪವಿತ್ರವಾದ್ದು ನಾಗರಿಕತೆಯ ಒಳಗೆ ಇರುತ್ತದೆ. ಇದರಿಂದ ಕೆಲವು ಮಾನ್ಯತೆಯನ್ನು ಪಡೆಯಿತು. ಮತ್ತೆ ಕೆಲವು ಮಾನ್ಯತೆಗಿಂತ ಹೊರತಾಯಿತು. ದೇವರ ನಂಬಿಕೆಯು ಇರುವವರು ಒಂದು ವರ್ಗ, ಅದರ ಮೇಲೆ ಯಾವುದೇ ನಂಬಿಕೆಯು ಇಲ್ಲದೇ ಇರುವವರದು ಮತ್ತೊಂದು ವರ್ಗ ಎಂದು ಭಾವಿಸಿದ್ದರ ಪರಿಣಾಮವು ಚರಿತ್ರೆಯ ಮೇಲೆಯೂ ಆಗಿರುವುದು ಸತ್ಯ. ಪಶ್ಚಿಮದ ನಾಗರಿಕತೆಯಲ್ಲಿ ಪಾಪ ನಿವೇದನೆ ಎನ್ನುವುದಕ್ಕೂ ಒಂದು ಅರ್ಥವಿದೆ. ಹೇಗೆ ಇವೆಲ್ಲಾ ಚರಿತ್ರೆಯಲ್ಲಿ ಹಾಸುಹೊಕ್ಕಾಗಿದೆ ಎಂದು ಆಗಸ್ಟಿನ್ ವಿವರಿಸುತ್ತಾನೆ. ಅವನ ಸಿಟಿ ಆಫ್ ದ ಗಾಡ್ಸ್ ಕೃತಿಯು ಈ ದೃಷ್ಟಿಯಿಂದ ಅತ್ಯಂತ ಮಹತ್ವದ ಚರ್ಚೆಯನ್ನು ಎತ್ತುತ್ತದೆ. ಅದರ ಜೊತೆಗೆ ಅದು ಅಪೂರ್ವ ಒಳನೋಟದ ಕೃತಿಯೂ ಹೌದು. ಅವನ ಅತ್ಯಂತ ಮೊದಲ ಪ್ರಶ್ನೆಯೆಂದರೆ ಗ್ರೀಕಿನಲ್ಲಿ ಹೇಗೆ ದೇವರ ಸೃಷ್ಟಿಯು ಆಯಿತು ಎನ್ನುವುದು. ಅದರಲ್ಲಿ ಅವನು ಹೇಳುತ್ತಾನೆ: ಭಾಷೆ

ಮತ್ತು ಧರ್ಮ ಹಾಗೂ ಕಲ್ಪನೆಗಳು ಹೇಗೆ ಇರುತ್ತವೆ? ಭಾಷೆಯಲ್ಲಿ ದೇವರು ಮತ್ತು ಅವನ ಅಸ್ತಿತ್ವದ ಮೂಲವನ್ನು ನಾವು ಗುರುತಿಸಬಹುದು ಎಂದು ಭಾವಿಸುತ್ತಾನೆ. ರಾಜಕಾರಣ ಮತ್ತು ಧರ್ಮವು ದೇವರ ಕಲ್ಪನೆಯನ್ನು ಅತ್ಯಂತ ಚೆನ್ನಾಗಿ ಬಳಸುತ್ತದೆ ಎನ್ನುವುದು ಅವನ ನಿಲುವು. ಇಲ್ಲಿ ಇನ್ನೊಂದು ಪ್ರಶ್ನೆಯು ನಮ್ಮ ಗಮನಕ್ಕೆ ಬರಬೇಕು: ಶಿಸ್ತುಗಳು ಇಲ್ಲದ ಮನುಷ್ಯರು ಮತ್ತು ಪ್ರಾಣಿವರ್ಗ ಎರಡೂ ಒಂದೇ ಎಂದು ಅನೇಕರು ಭಾವಿಸಿದ್ದರು. ಗ್ಯಾಲಿಕ್ ಮೂರು ಪರಿಕಲ್ಪನೆಗಳು ಹೇಗೆ ಕೆಲಸವನ್ನು ಮಾಡಿದವು ಎಂದು ಹೇಳುತ್ತಾನೆ. ಅದರಲ್ಲಿ ಪ್ರಜಾಪ್ರಭುತ್ವ, ಕಲೆ ಮತ್ತು ಕ್ರಿಶ್ಚಿಯನ್ ಜೀವನದ ಕ್ರಮವು ಹೇಗೆ ಒಂದಾಗುತ್ತದೆ ಎಂದು ವಿವರಿಸುತ್ತಾನೆ. ಅದು ರಾಜಕೀಯವಾದ ತಂತ್ರಗಾರಿಕೆಯೂ ಹೌದು. ಅದರಲ್ಲಿ ಸಮಾಜ ಮತ್ತು ಸಂಸ್ಕೃತಿಯ ಒತ್ತಡವೂ ಇದೆ ಎಂದು ಅವನು ಭಾವಿಸುತ್ತಾನೆ. ಪ್ರವಾದಿಗಳು ಮತ್ತು ಅವರ ಚರಿತ್ರೆಯನ್ನು ನಾವು ಗಮನಿಸಿದರೆ ಅದರಲ್ಲಿ ಮನುಷ್ಯ ಎನ್ನುವವನ ವ್ಯಾಖ್ಯೆಯು ಬೇರೆ ಇದೆ. ಮನುಷ್ಯನು ಮೂಲತಃ ಪಾಪಿಯಾಗಿದ್ದಾನೆ. ಅವನು ಅಪವಿತ್ರನೂ ಹೌದು. ಅದರ ಜೊತೆಗೆ ಅವನು ಕೆಡಕನ್ನು ಹೊಂದಿದ್ದಾನೆ. ಆದ್ದರಿಂದ ಅವನನ್ನು ಹೆಚ್ಚು ಪವಿತ್ರ ಮಾಡಬೇಕಾಗುತ್ತದೆ. ಇದು ಕೂಡಾ ಮನುಷ್ಯರ ಮೇಲೆ ಹೆಚ್ಚು ಒತ್ತಡವನ್ನು ಹೇರುತ್ತದೆ. ಮನುಷ್ಯನು ಮೃಗೀಯತೆಯನ್ನು ದಾಟುವ ಅಗತ್ಯವಿದೆ. ಅದರ ಜೊತೆಗೆ ಅವನು ಹಿಂಸೆಯನ್ನು ತ್ಯಾಗ ಮಾಡಬೇಕಾಗುತ್ತದೆ. ಇವೆಲ್ಲವೂ ಮನುಷ್ಯರ ಚರಿತ್ರೆಯ ಮೇಲೆ ಪ್ರಭಾವವನ್ನು ಬೀರುತ್ತವೆ. ಆದರೆ ಯಾವುದನ್ನು ನಾವು ನಾಗರಿಕತೆ ಎಂದು ಹೇಳುತ್ತೇವೆಯೋ ಅದರಲ್ಲಿ ಅಲೆಮಾರಿಗಳು ಇಲ್ಲ. ಎಲ್ಲಕ್ಕಿಂತ ಹೆಚ್ಚಾಗಿ ಅವರಿಗೆ ಒಂದು ವ್ಯಾಖ್ಯೆಯೇ ಇಲ್ಲ. ಇದರಿಂದ ಮಾನವೀಯ ಮತ್ತು ಅಮಾನವೀಯ ಎನ್ನುವುದರ ಸಿದ್ಧಾಂತವೇ ಬೇರೆಯಾಗುತ್ತವೆ.

ಪ್ರಜಾಪ್ರಭುತ್ವ, ಕಲೆ, ಕ್ರಿಶ್ಚಿಯನ್ ಜೀವನದ ಕ್ರಮಗಳು ಒಟ್ಟಾಗಿ ಚರ್ಚೆಗೆ ಬಂದಿದ್ದವು. ಈ ಚರ್ಚೆಗಳಿಗೂ ಮಾನವೀಯತೆಗೂ ಒಂದು ಸಂಬಂಧವು ಇದೆ. ಆದರೆ ಇಲ್ಲಿ ಒಂದು ಸಮಸ್ಯೆಯಿದೆ. ಯಾವುದು ನಿಜವಾದ ಮನುಷ್ಯತ್ವ ಎನ್ನುವುದನ್ನು ಹೇಳುವುದು ಹೇಗೆ? ಯಾವುದು ಮೃಗತ್ವ? ಕೆಲವು ವ್ಯಾಖ್ಯೆಗಳು ನಮ್ಮನ್ನು ಒತ್ತಾಯಿಸುತ್ತವೆ. ಅವುಗಳು ನಮಗೆ ಹೇಗೆ ಇರಬೇಕು ಎಂದು ಹೇಳುವುದು ಮಾತ್ರವೇ ಅಲ್ಲ, ಅದರ ಮೂಲಕ ಅವು ನಮ್ಮನ್ನು ನಿರೂಪಿಸುತ್ತವೆ. ಹುಚ್ಚರು, ಅಪವಿತ್ರರು, ನಾಸ್ತಿಕರು, ಪಾಪಿಗಳು ಸಮಾಜದಿಂದ ಹೊರಗೆ ಎಂದು ಭಾವಿಸಿದ ಕಾಲವೂ ಇತ್ತು.

ಅದರ ಅನಂತರ ನಾವು ಕಾರಣಗಳು ಮತ್ತು ಅದರ ಯುಗದ ಪ್ರಶ್ನೆಗಳನ್ನು ನೋಡುತ್ತೇವೆ. ಹಾಗೆ ನೋಡಿದರೆ ನಾವು ಮಡಿ ಮತ್ತು ಮೈಲಿಗೆ ಎನ್ನುವ ಪದವನ್ನು ಬೇರೆ ಬೇರೆ ಥರ ಅರ್ಥಮಾಡಿಕೊಳ್ಳುತ್ತೇವೆ. ಅದರಲ್ಲಿ ಧರ್ಮ ಮತ್ತು ಅದರ ಅರ್ಥಗಳೂ ಇವೆ. ಇದನ್ನು ಫುಕೋನೂ ಗುರುತಿಸಿದ್ದ. ಅವನು ಅಷ್ಟನ್ನು ಮಾತ್ರವೇ ಹೇಳುವುದಿಲ್ಲ. ಅವನು ಅದರ ಹಿಂದೆ ಇರುವ ರಾಜಕೀಯ ಆಸಕ್ತಿಯನ್ನೂ ಹೇಳುತ್ತಾನೆ. ಇದನ್ನು ನೋಡುವಾಗ ನಾವು ಮತ್ತೊಂದು ಅಂಶವನ್ನು ಗಮನಿಸಬೇಕು: ಮಡಿ ಮತ್ತು ಮೈಲಿಗೆ ಎನ್ನುವುದು ಸಮಾಜದಲ್ಲಿ ಹೇಗೆ ಇರುತ್ತದೆ ಮತ್ತು ಅದರ ಸ್ವರೂಪವನ್ನು ಅರ್ಥ ಮಾಡಿಕೊಳ್ಳುವಾಗ ಜಾತಿಯನ್ನು ಮತ್ತು ಗಂಡು ಹಾಗೂ ಹೆಣ್ಣು ಎನ್ನುವ ಪ್ರಭೇದವನ್ನು ಅರ್ಥ ಮಾಡಿಕೊಳ್ಳುತ್ತೇವೆ. ಪವಿತ್ರ ಮತ್ತು ಅಪವಿತ್ರ ಎನ್ನುವುದು ಒಂದು ಧಾರ್ಮಿಕವಾದ ಪ್ರಭೇದವೇ ಅಥವಾ ಅದು ಒಂದು ಚಾರಿತ್ರಿಕವಾದ ಅಗತ್ಯವೇ ಎನ್ನುವುದು ನಮಗೆ ಅರ್ಥವಾಗಬೇಕು. ಇದು ನಮಗೆ ಅರ್ಥವಾದರೆ ನಾವು ಜನರನ್ನು ಮತ್ತು ಮಾನವೀಯತೆಯನ್ನು ಅರ್ಥ ಮಾಡಿಕೊಳ್ಳಲು ಸುಲಭವಾಗುತ್ತದೆ. ಹಾಗಿದ್ದೂ ಇದು ನಮಗೆ ಅದು ವೈದ್ಯಕೀಯವಾದ ಒಂದು ಕಲ್ಪನೆಯು ಅಲ್ಲ ಎಂದೂ ತಿಳಿದಿರಬೇಕು. ವೈದ್ಯಕೀಯ ವಿಜ್ಞಾನಕ್ಕೆ ಮಡಿ ಮತ್ತು ಮೈಲಿಗೆ ಎನ್ನುವ ವ್ಯತ್ಯಾಸವಿಲ್ಲ. ಆದರೆ ಸ್ಕಿಜೋಫ್ರೇನಿಯಾ ಎನ್ನುವುದು ಪರಿಚಯವು ಆದ ಮೇಲೆ ನಾವು ಜನರನ್ನು ಮತ್ತು ಅವರ ಮನೋಭಾವವನ್ನು ನೋಡುವ ಕ್ರಮ ಬೇರೆಯಾಯಿತು. ಅದು ಮನಸ್ಸು ಮತ್ತು ಅದರ ದ್ವಂದ್ವವನ್ನು ಹೇಳುತ್ತದೆ. ಇದನ್ನು ಇಚ್ಛಿತ್ತವಾದ ಸ್ಥಿತಿ ಎಂದೂ ಹೇಳುತ್ತಾರೆ. ಅದು ವೈದ್ಯಕೀಯವಾದ ಒಂದು ಪರಿಭಾಷೆಯೂ ಹೌದು. ಸ್ಕಿಜೋಫ್ರೇನಿಯಾ ಇರುವವರು ಸಮಾಜದಲ್ಲಿ ಬೇರೆಯಾದರು. ಅದರ ಜೊತೆಗೆ ಅವರಿಗೆ ಕಾನೂನಿನ ಬಲವೂ ಇಲ್ಲ.

ಅದು ಬೇರೆ ಪ್ರಶ್ನೆ. ನಾವು ಪ್ರಜ್ಞೆ ಮತ್ತು ಅದರ ಸ್ವರೂಪವನ್ನು ಅರ್ಥ ಮಾಡಿಕೊಳ್ಳುವಾಗ ಯಾವುದು ನಮ್ಮ ಪ್ರಜ್ಞೆಯಲ್ಲಿ ಇದೆ ಮತ್ತು ಯಾವುದು ನಮ್ಮ ಪ್ರಜ್ಞೆಯ ಭಾಗವಾಗಿಲ್ಲ ಎನ್ನುವುದೂ ಅತ್ಯಂತ ಮುಖ್ಯವಾದ ಪ್ರಶ್ನೆ. ಧರ್ಮ ಮತ್ತು ಸಂಸ್ಕೃತಿಯು ನಮ್ಮ ಪ್ರಜ್ಞೆಯ ಭಾಗವಾದಷ್ಟು ವಿಜ್ಞಾನವು ನಮ್ಮ ಪ್ರಜ್ಞೆಯ ಭಾಗವಾಗಿಲ್ಲ. ಆದ್ದರಿಂದ ಒಂದು ಮತ್ತೊಂದನ್ನು ವಸಾಹತುವನ್ನಾಗಿ ಮಾಡಿದೆ. ಒಂದು ಪ್ರಮೇಯವಿತ್ತು. ಮೊದಲು ನಿಸರ್ಗ, ಅನಂತರ ದೇವರು ಆ ಮೇಲೆ ಮನುಷ್ಯ. ಈ ಪ್ರಮೇಯದ ಮೂಲಕ ಅನೇಕವನ್ನು ಸಿದ್ಧಮಾಡಲಾಗಿತ್ತು. ಇಲ್ಲಿ ಒಂದು ಮಾತನ್ನು ನಾವು ಹೇಳಬಹುದು – ಮೊದಲು ನಿಸರ್ಗ ಎಂದರೆ ಅದರಲ್ಲಿ ವಿವಿಧ ಆಯಾಮವೂ ಇರುತ್ತದೆ. ನಿಸರ್ಗ ಎನ್ನುವುದು ಅತ್ಯಂತ

ಸಹಜವಾದ್ದು. ಅದರಲ್ಲಿ ಗುಡ್ಡ, ಬೆಟ್ಟ, ನದಿ, ಕಾಡು ಮುಂತಾದವುಗಳು ಇವೆ. ಇವು ನಮಗೆ ಯಾವುದನ್ನು ಸೂಚಿಸುತ್ತವೆ ಎಂದು ಗಮನಿಸಬೇಕು. ಇವು ಬರೀ ನಿಸರ್ಗ ಮಾತ್ರವೇ ಆಗುವುದಿಲ್ಲ. ಇದರ ಜೊತೆಗೆ ಇವು ನಮಗೆ ನಮ್ಮ ಜೀವನವನ್ನು ಹೇಳುವ ವಿಶಿಷ್ಟವಾದ ಸಂಗತಿಯೂ ಆಗಿರುತ್ತವೆ.

ನಾವು ಈಗ ಹೇಳುತ್ತಿರುವ ನಾಗರಿಕ ಮತ್ತು ಅನಾಗರಿಕ ಎನ್ನುವುದು ಹೇಗೆ ಇದೆ ಎಂದರೆ ಒಂದನ್ನು ಮೂಲ ಎಂದು ಮತ್ತೊಂದನ್ನು ಪ್ರಾಚೀನ ಎಂದು ಹೇಳುತ್ತೇವೆ. ಹೀಗೆ ಹೇಳುವಾಗ ನಮಗೆ ಮಾನವಶಾಸ್ತ್ರದ ಅಧ್ಯಯನಗಳೂ ನಮಗೆ ಸಹಾಯವನ್ನು ಮಾಡಿವೆ. ಆದರೆ ಇದನ್ನು ಅತ್ಯಂತ ಸ್ಪಷ್ಟವಾಗಿ ವ್ಯತ್ಯಾಸವನ್ನು ಮಾಡಲಾಗುವುದೂ ಇಲ್ಲ. ನಾಗರಿಕ ಮತ್ತು ಅನಾಗರಿಕ ಎನ್ನುವುದು ಅತ್ಯಂತ ಸಾಮಾನ್ಯವಾದ ಒಂದು ವಿಭಜನೆಯು ಮಾತ್ರವೇ ಆಗಿದೆ. ಆದರೆ ನಾಗರಿಕ ಮತ್ತು ಅನಾಗರಿಕ ಎಂದು ಹೇಳುವಾಗ ನಮಗೆ ಇರುವ ಒಂದು ಮಾನದಂಡವೆಂದರೆ ಅದರಲ್ಲಿ ಮೃಗೀಯ ಮತ್ತು ಮನುಷ್ಯರ ನಡುವಣ ವ್ಯತ್ಯಾಸವನ್ನು ಅರ್ಥ ಮಾಡಿಕೊಳ್ಳುವುದು. ಇದು ಪ್ರತ್ಯೇಕವಾದ ಒಂದು ಚಹರೆಯನ್ನು ಹೇಳುತ್ತದೆ. ಒಂದು ಹಂತದಲ್ಲಿ ಮನುಷ್ಯರನ್ನು ಮತ್ತು ಪ್ರಾಣಿಗಳನ್ನು ಬೇರೆ ಮಾಡುವಾಗ ಅದರಲ್ಲಿ ದೇಹ ಮತ್ತು ಮನಸ್ಸುಗಳ ಪ್ರಶ್ನೆಯೂ ಇತ್ತು. ಅನಾಗರಿಕ ಎನ್ನುವುದು ಮುಖ್ಯವಾಗಿ ಆಧುನಿಕವಾದ್ದು ಅಲ್ಲ ಎನ್ನುವ ತಿಳುವಳಿಕೆಯೂ ಇದೆ. ನಮಗೆ ನಮ್ಮ ಮನಸ್ಸು ಎನ್ನುವುದು ಒಂದು ಶಕ್ತಿ ಎಂದು ತಿಳಿದಿದ್ದೇವೆ. ಆಧುನಿಕ ನಾಗರಿಕತೆಯು ನಾವು ಮತ್ತು ಅವರು ಎಂದು ಹೇಳುವಾಗಲೂ ಇದನ್ನು ಒಂದು ಮಾನದಂಡವಾಗಿ ಇಟ್ಟುಕೊಂಡಿದೆ. ಮನುಷ್ಯ ಮತ್ತು ದೇವರು ಎನ್ನುವುದು ಹೇಗೆ ಭಿನ್ನವಾಗಿದೆಯೋ ಅದೇ ರೀತಿಯಲ್ಲಿ ಮನುಷ್ಯ ಮತ್ತು ನಿಸರ್ಗದ ನಡುವೆ ಇರುವ ವ್ಯತ್ಯಾಸವೂ ಅತ್ಯಂತ ಮಹತ್ವದ್ದು . ಇದನ್ನು ಮನುಷ್ಯ ಮತ್ತು ಪ್ರಾಣಿ ಎನ್ನುವ ವ್ಯತ್ಯಾಸದಲ್ಲಿಯೂ ನಾವು ಕಾಣಬಹುದು. ಮನಸ್ಸು ಎನ್ನುವುದು ನಮಗೆ ಕೇಂದ್ರವಾದರೆ ಅದರ ಮೂಲಕ ನಾವು ಜಗತ್ತನ್ನು ಇನ್ನೊಂದು ಥರ ಅರ್ಥಮಾಡಿಕೊಳ್ಳಲು ಸಾಧ್ಯವಾಗುತ್ತದೆ. ಆದರೆ ಇಡೀ ಜಗತ್ತನ್ನು ದೇವರ ಮೂಲಕ ಅರ್ಥ ಮಾಡಲು ಯತ್ನವನ್ನು ಮಾಡಿದರೆ ಆಗ ಅದರ ಅರ್ಥವು ಭಿನ್ನವಾಗುತ್ತದೆ. ಇದರಲ್ಲಿಯೂ ಅತ್ಯಂತ ಮುಖ್ಯವಾಗಿ ಒಂದು ತಾರತಮ್ಯವೂ ಇದೆ. ಶ್ರೇಷ್ಠ ಮತ್ತು ಕನಿಷ್ಠ ಎನ್ನುವುದೂ ಭಿನ್ನವಾದ ನೆಲೆಗಳನ್ನು ಹೇಳುತ್ತವೆ. ಆದರೆ ಯಾವುದು ಮಾನವೀಯ ಮತ್ತು ಯಾವುದು ಅಮಾನವೀಯ ಎಂದು ಹೇಳುವಾಗ ಅದರಲ್ಲಿ ಇರುವುದೂ ತಾರತಮ್ಯವಾದ ಒಂದು ದೃಷ್ಟಿಕೋನ. ಅದರ ಜೊತೆಗೆ ಭೌತಿಕ ಮತ್ತು ಸಾಂಸ್ಕೃತಿಕ ಸಂಗತಿಗಳು ಮನುಷ್ಯರು ಮತ್ತು

ಅವರ ನಾಗರಿಕತೆಯನ್ನು ಗುರುತಿಸಲು ಒಂದು ಸಾಧನವೂ ಆಗುತ್ತದೆ. ಆದರೆ ಬೇರೆ ಬೇರೆ ದೇಶಗಳಲ್ಲಿ ಮಾನವೀಯ ಮತ್ತು ನಾಗರಿಕತೆಗೆ ಸಂಬಂಧಪಟ್ಟು ವಿವಿಧ ವ್ಯಾಖ್ಯೆಗಳು ಇವೆ. ಅದರ ಜೊತೆಗೆ ಆಧುನಿಕ ಜಗತ್ತು ನಮ್ಮನ್ನು ನಿರೂಪಿಸಿದ ಕ್ರಮವು ಬೇರೆಯಾಗಿದೆ. ನೈತಿಕತೆಗೆ ಮತ್ತು ನಮ್ಮ ಜೀವನಕ್ಕೆ ಸಂಬಂಧ ಪಟ್ಟು ಭಿನ್ನವಾದ ಗ್ರಹಿಕೆಗಳೂ ಇವೆ. ಆದರೂ ಒಂದು ಮಾತನ್ನು ಕೊನೆಗೆ ಹೇಳಬೇಕು: ನಮ್ಮ ನಾಗರಿಕವಾದ ವ್ಯಾಖ್ಯೆಗಳು ಏನೇ ಇರಲಿ, ಮನುಷ್ಯ ಮತ್ತು ನಾಗರಿಕತೆಗೆ ಇರುವ ಸಂಬಂಧ.



# ಕನ್ನಡ ಕಾದಂಬರಿಗಳ ವಿವಿಧ ಆಯಾಮಗಳು

ಕನ್ನಡ ಕಾದಂಬರಿಗಳು ಬೆಳೆದು ಬಂದ ಬಗೆಯು ಕುತೂಹಲದಾಯಕ. ಅದನ್ನು ಗುರುತಿಸುವಾಗ ಲೇಖಕರ ಪ್ರಶ್ನೆ ಬರುತ್ತದೆ. ಅವರ ಜೊತೆಗೆ ಅವ್ಯೆಯಕ್ತಿಕತೆಯ ಪ್ರಶ್ನೆಯನ್ನು ನಾವು ಆಗಾಗ ಬಳಸುತ್ತೇವೆ. ಅದು ಹಾಗೆ ಆಗುತ್ತದೆಯೇ ಎನ್ನುವುದನ್ನು ನೋಡಬೇಕು. ಯಾವುದೇ ಕಲೆಯು ಅವ್ಯೆಯಕ್ತಿಕತೆಯಿಂದ ಹುಟ್ಟುವುದೂ ಇಲ್ಲ. ಹಾಗೆ ನೋಡಿದರೆ ವ್ಯಕ್ತಿಯ ಅನುಭವವು ಅತ್ಯಂತ ಹೆಚ್ಚು ಭಾವನೆಗಳನ್ನು ಒಳಗೊಂಡಿರುತ್ತವೆ. ಭಾವನೆಯು ಹುಟ್ಟುವುದು ಮತ್ತು ಅದಕ್ಕೆ ನಾವು ಸ್ಪಂದಿಸುವುದು ಅನಿವಾರ್ಯವೂ ಹೌದು. ವ್ಯಕ್ತಿ ಮತ್ತು ಅವನ ಭಾವನೆಗಳ ನಡುವೆ ಸಂಘರ್ಷವು ನಡೆಯುತ್ತವೆ. ಸಂಘರ್ಷವೇ ಕಾವ್ಯವನ್ನು ರಚಿಸಲು ಅವಕಾಶವನ್ನು ಮಾಡುತ್ತವೆ. ವ್ಯಕ್ತಿತ್ವದಿಂದ ದೂರವಾದರೆ ನಾವು ಬರೆಯಲಾರೆವು. ಬರಹವು ಹುಟ್ಟುವುದು ವ್ಯಕ್ತಿತ್ವದಿಂದ ಪಾರಾಗುವ ಪ್ರಕ್ರಿಯೆಯಿಂದ ಅಲ್ಲ. ಅದರ ಬದಲು ಅದು ಹುಟ್ಟುವುದು ನಿಜವಾಗಿಯೂ ವ್ಯಕ್ತಿಯ ಪ್ರಜ್ಞೆಯಿಂದ. ಅವ್ಯೆಯಕ್ತಿಕತೆಯು ವಾಸ್ತವವಾಗಿ ನಿಜವನ್ನು ಪರಿಗಣನೆಗೆ ತಂದು ಕೊಳ್ಳುವುದೂ ಇಲ್ಲ. ಭಾಷೆ ಎಂದರೆ ಅದು ವ್ಯಕ್ತಿಯಿಂದ ಆಗುತ್ತದೆ. ಅಂದರೆ ವ್ಯಕ್ತಿ ಮತ್ತು ಅವನ ಸ್ವಭಾವವನ್ನು ಹೇಳುತ್ತದೆ. ಅಂದರೆ ಬರೆಯುವುದು ಮತ್ತು ಕೇಳುವುದು, ಹೇಳುವುದು ಮತ್ತು ಓದುವುದು ಮುಂತಾದವು ನಮ್ಮ ಭಾವನೆಗಳ ಸ್ವರೂಪವನ್ನು ಸೂಚಿಸುತ್ತವೆ. ಅದರಲ್ಲಿ ಒಂದು ನಿರ್ದಿಷ್ಟವಾದ ಸಂಬಂಧವೂ ಇರುತ್ತದೆ. ಲೇಖಕ ತನಗೆ ಗೊತ್ತಿರುವುದನ್ನು ಕೃತಿಯಲ್ಲಿ ಸರಿಯಾಗಿಯೇ ಹೇಳುತ್ತಾನೆ. ಅದು ಸಮಗ್ರವೂ ಹೌದು. ಅವನ ಮನೋಭಾವ ಮತ್ತು ಅದರ ಘರ್ಷಣೆಗಳು ಅವನ ಮಾತಿನಲ್ಲಿ ವ್ಯಕ್ತವಾಗುತ್ತವೆ. ಮತ್ತು ಅದರಲ್ಲಿ ಅವನ ಸ್ವಭಾವವೂ ಗಮನಕ್ಕೆ ಬರುತ್ತದೆ. ಸುಮ್ಮನೇ ಯಾರೂ ಮಾತಾಡುವುದೂ ಇಲ್ಲ. ಮಾತು ಮತ್ತು ನಮ್ಮ ಮನೋಸ್ಥಿತಿಯು ಬೇರೆ ಬೇರೆ ರೀತಿಯಲ್ಲಿ ವ್ಯಕ್ತವಾಗುತ್ತವೆ. ಅದಕ್ಕೆ ನಿರ್ದಿಷ್ಟವಾದ ಗುಣ ಮತ್ತು

ಸ್ವಭಾವವು ಇರುತ್ತದೆ. ಬರಹ ಮತ್ತು ಅದರ ಸ್ವಭಾವವು ಭಿನ್ನವಾದ ಕಾರಣಕ್ಕೆ ನಮಗೆ ಹೆಚ್ಚು ಮುಖ್ಯವಾಗುತ್ತದೆ. ನಿರ್ದಿಷ್ಟವಾದ ಕೆಲವು ಮಾನದಂಡಗಳು ಇರುತ್ತವೆ. ಬರಹವು ಮೂಲಭೂತವಾಗಿ ಕೆಲವು ರೀತಿಯಲ್ಲಿ ಕೆಲವು ವಿಷಯಗಳನ್ನು ಪ್ರತಿಪಾದಿಸುತ್ತವೆ. ಅದು ಚರಿತ್ರೆಯಿಂದ ಹುಟ್ಟಿದೆ. ಅವನ ನೆನಪುಗಳನ್ನು ಅದು ಹೇಳುತ್ತದೆ. ಅನೇಕ ಸಂದರ್ಭದಲ್ಲಿ ಚಾರಿತ್ರಿಕ ಬದ್ಧತೆಯೆನ್ನುವುದು ಒಡೆದು ಕಾಣಿಸುವುದೂ ಇಲ್ಲ. ಆದರೆ ಅದು ಇರುತ್ತದೆ. ಅದರಿಂದ ಮುಂದೆ ಹೋಗಬೇಕೆ ಬೇಡವೇ ಎನ್ನುವುದು ಮಾತ್ರವೇ ಪ್ರಶ್ನೆ. ನಮ್ಮನ್ನು; ನಮ್ಮ ಗುಣಗಳನ್ನು ನಮ್ಮ ಪ್ರಜ್ಞೆಯು ಹೇಳುತ್ತದೆ. ಅದರ ಪರಿಣಾಮವಾಗಿ ನಾವು ಮತ್ತೆ ಕೆಲವನ್ನು ನಿರೂಪಿಸುತ್ತೇವೆ. ಭಾವನೆಗಳನ್ನು ಹೇಳುವುದು ನಮ್ಮ ಮಾತು. ಅನುಭವವೂ ಕೆಲವು ಅವಕಾಶಗಳನ್ನು ಭರ್ತಿ ಮಾಡುತ್ತವೆ. ಮನುಷ್ಯನ ಖಾಲಿಯಾದ ಜಾಗವನ್ನು ಮಾತು ಮತ್ತು ಬರಹಗಳು ತುಂಬುತ್ತವೆ. ಯಾವಾಗ ನಮ್ಮ ಎದುರು ಖಾಲಿಯಾದ ಜಾಗವು ಇದೆಯೋ ಅದನ್ನು ತುಂಬಿಸಲು ನಾವು ಮಾತನ್ನು ಬಳಸುತ್ತೇವೆ. ಕೆಲಸವನ್ನು ಮಾಡುತ್ತೇವೆ. ಭಾಷೆ ಮತ್ತು ಅದರ ಸ್ವರೂಪವು ನಮಗೆ ಈ ದೃಷ್ಟಿಯಿಂದ ಬಹಳ ಮುಖ್ಯವಾಗುತ್ತದೆ. ಮತ್ತು ಅದರ ಸ್ವರೂಪವು ನಮಗೆ ಅನೇಕವನ್ನು ಕೊಡುತ್ತದೆ. ನಾವು ಹೊಸ ಹೊಸ ಅವಕಾಶವನ್ನು ಸೃಷ್ಟಿಮಾಡಿಕೊಂಡು ಅದರ ಮೂಲಕ ನಮ್ಮ ಅಸ್ತಿತ್ವವನ್ನು ಕಾಪಾಡುತ್ತೇವೆ. ಅವಕಾಶ ಮತ್ತು ಅದನ್ನು ತುಂಬಿಸುವುದು ನಮಗೆ ಅಗತ್ಯವಾಗುತ್ತದೆ. ಯಾವುದೇ ಕಥನಗಳು ಈ ದೃಷ್ಟಿಯಿಂದ ಬಹಳ ಮುಖ್ಯವಾಗುತ್ತದೆ. ಕುವೆಂಪು ಕಾದಂಬರಿಯಲ್ಲಿ ಬರುವ ಐತ, ಪೀಂಚಲು ಕೂಡಾ ಚರಿತ್ರೆಯಿಂದ ಹೊರತಾಗುವುದಿಲ್ಲ. ಅವರೂ ಚರಿತೆಯನ್ನು ಕಟ್ಟಿದ್ದಾರೆ. ಅದನ್ನು ಕುವೆಂಪು ಮೂಲಕವೇ ಹೇಳುತ್ತಿದ್ದಾರೆ. ಅವರು ನಿಜವಾಗಿದ್ದಾರೆ. ಈ ದೃಷ್ಟಿಯಿಂದ ನಮಗೆ ಸಾಹಿತ್ಯ ಮತ್ತು ಅದರ ಅನನ್ಯತೆಯ ಪ್ರಶ್ನೆಯೂ ಅತ್ಯಂತ ಮಹತ್ವದ್ದೂ ಹೌದು. ಬರೆದು ಮುಗಿಸಿದಲ್ಲಿಗೆ ಲೇಖಕನು ಮುಕ್ತನಾಗುತ್ತಾನೆ. ನಿಜ. ಆದರೆ ಅವನು ಎಷ್ಟರಮಟ್ಟಿಗೆ ಮುಕ್ತನಾಗುತ್ತಾನೆ ಎನ್ನುವುದು ಮಾತ್ರವೆ ಇಲ್ಲಿ ಪ್ರಶ್ನೆ. ಪ್ರಜ್ಞೆ ಮತ್ತು ಅದರ ರೂಪೀಕರಣವು ಈ ದೃಷ್ಟಿಯಿಂದ ಅತ್ಯಂತ ಮಹತ್ವದ್ದೂ ಹೌದು. ಪ್ರಜ್ಞೆಗೆ ಕೆಲವು ಉದ್ದೇಶಗಳು ಇರುತ್ತವೆ. ಬದಲಾವಣೆಯು ಮೂಲಭೂತವಾಗಿ ಕೆಲವನ್ನು ಹೇಳುತ್ತವೆ. ಅದು ನಮ್ಮ ಮನಸ್ಸಿನ ಮೇಲೆ ಪ್ರಭಾವವನ್ನು ಬೀರುತ್ತದೆ. ಯಾವುದೇ ಸಂಗತಿಗೆ ಒಂದು ಮೂಲವೆನ್ನುವುದು ಇರುತ್ತದೆ. ಅದು ನಮಗೆ ನೆನಪುಗಳೂ ಹೌದು. ಆದ್ದರಿಂದ ಬರಹ ಮತ್ತು ನೆನಪುಗಳು ಅತ್ಯಂತ ಮಹತ್ವದ್ದೂ ಹೌದು. ಕೆಲವು ಸಂಬಂಧಗಳು ಈ ದೃಷ್ಟಿಯಿಂದ ಅತ್ಯಂತ ಮುಖ್ಯ. ನಾವು ಮತ್ತು ನಮ್ಮ ಸುತ್ತ ಇರುವ ಸಮಾಜವು ನಮಗೆ

ಅನೇಕವನ್ನು ಹೇಳುತ್ತವೆ. ವ್ಯಕ್ತಿಯು ಸಮಾಜದಿಂದ ಪಡೆಯುತ್ತಾನೆ. ಕೃತಿಯಲ್ಲಿ ಲೇಖಕನನ್ನು ತಿರಸ್ಕರಿಸಬೇಕೆ ಎನ್ನುವುದು ಮುಖ್ಯವಾದ ಪ್ರಶ್ನೆಯೂ ಆಗಿದೆ. ಪೂರ್ವ ರಚಿತವಾದ ಪಠ್ಯವನ್ನು ಹೊರತು ಮಾಡಿಕೊಂಡು ನಾವು ಬರೆಯಬೇಕಾಗಿಯೂ ಇಲ್ಲ. ರಾಷ್ಟ್ರೀಯತೆಯ ಚಳುವಳಿಯು ಒಂದು ಅಪೂರ್ವ ಘಟನೆ. ಅದನ್ನು ನೋಡಿಕೊಂಡೇ ಕಾರಂತರು ಬರೆದರು, ಅವರಿಗೆ ಕೊನೆಗೆ ಗಾಂಧಿಯವರ ನಿಲುವು ಸಹನೀಯವಾಗಲಿಲ್ಲ. ಅದನ್ನು ನಾವು ಪೂರ್ವ ಪಠ್ಯವೆಂದು ಹೇಳುತ್ತೇವೆ. ಅದನ್ನು ಕುರಿತು ಕಾರಂತರು ಏನು ಬರೆದರೋ ಅದರ ಮೂಲವನ್ನು ಬಿಡಲಿಲ್ಲ. ವಿಮರ್ಶೆಯನ್ನು ಮಾಡುವಾಗ ನಾವು ಅದನ್ನು ಗಮನಿಸಬೇಕಾಗುತ್ತದೆ. ಮೂಲಭೂತವಾಗಿ ಅದನ್ನು ಗುರುತಿಸುವುದು ಬಹಳ ಮುಖ್ಯ. ವಿಮರ್ಶೆಯು ಈ ದೃಷ್ಟಿಯಲ್ಲಿ ಒಂದು ಮಧ್ಯವರ್ತಿ. ಲೇಖಕ ಮತ್ತು ವಿಮರ್ಶಕರ ನಡುವೆ ಕೃತಿಯು ಇದೆ. ಅಂದರೆ ಯಾರು ಕೊಡುತ್ತಾರೆ, ಯಾರು ಸ್ವೀಕರಿಸುತ್ತಾರೆ ಎನ್ನುವುದು ಮಾತ್ರವೇ ಬಹಳ ಮುಖ್ಯ. ಈ ಸಂಬಂಧಗಳಲ್ಲಿ ಯಾವುದೆ ತಾರತಮ್ಯವು ಇಲ್ಲ. ಅವನು ಶ್ರೇಷ್ಠ ಮತ್ತು ಇನ್ನೊಬ್ಬ ಕನಿಷ್ಠ ಎನ್ನುವ ಪ್ರಶ್ನೆಯು ಮುಖ್ಯವಾಗುವುದೂ ಇಲ್ಲ. ನಾವು ಕೃತಿಯನ್ನು ಹೇಗೆ ಸ್ವೀಕರಿಸಿದ್ದೇವೆ ಎನ್ನುವುದು ಮಾತ್ರವೇ ಮುಖ್ಯ. ಸ್ವೀಕಾರವು ನಮ್ಮ ಸ್ವಂತಿಕೆಯ ಪ್ರಶ್ನೆಯೂ ಆಗುತ್ತದೆ. ಬರೆಯುವುದು ಮತ್ತು ಓದುವುದೂ ಎರಡೂ ನಮ್ಮ ಅನುಭವವನ್ನು ಹೇಳುತ್ತದೆ. ಕೃತಿಯು ನಮಗೆ ನಮ್ಮ ಅನುಭವವನ್ನು ವಿಸ್ತರಿಸುತ್ತದೆ. ಹೀಗಿದ್ದರೂ ಪಠ್ಯ ಮತ್ತು ಅದರ ಏಕತೆಯನ್ನು ಡೆರಿಡಾ ಪ್ರಶ್ನಿಸುತ್ತಾನೆ. ಇದಕ್ಕೆ ತದ್ವಿರುದ್ಧವಾಗಿ ಸಾವಯವ ಸಂಬಂಧ ಮತ್ತು ಕೃತಿಗಳನ್ನು ಲುಕಾಕ್ಸ್ ಹೇಳುತ್ತಾನೆ. ಈ ಎರಡೂ ಸಂಗತಿಗಳನ್ನು ನಾವು ಗಮನಿಸಬೇಕಾಗುತ್ತದೆ. ಲೇಖಕ ಮತ್ತು ಅವನ ಮನೋಸ್ಥಿತಿಯು ಲೇಖಕನ ಮನೋಸ್ಥಿತಿಯು ಪೂರಕವಾಗಿ ಕೆಲಸವನ್ನು ಮಾಡಿದರೆ ಅದರ ಅರ್ಥವು ಬೇರೆಯಾಗುತ್ತದೆ. ಲೇಖಕನು ಹೇಳುವುದು ಮತ್ತು ಅದನ್ನು ಓದುಗ ಸ್ವೀಕರಿಸುವುದು ವಿಶಿಷ್ಟವಾದ ಪ್ರಕ್ರಿಯೆಗಳು ಹೌದು. ಕೃತಿಗೆ ಒಂದು ಚಾರಿತ್ರಿಕ ಅಸ್ತಿತ್ವವು ಇದೆ ಎಂದು ಲುಕಾಕ್ಸ್ ಹೇಳುತ್ತಾನೆ. ಅವನು ಚರಿತ್ರೆ, ಕೃತಿಯಲ್ಲಿನ ವ್ಯಂಗ್ಯ ಮತ್ತು ಅದರ ಕಥಾನಕಗಳನ್ನು ಬಹಳ ಮುಖ್ಯವೆಂದು ಭಾವಿಸುತ್ತಾನೆ. ಅಮೇರಿಕಾದ ನವ್ಯ ವಿಮರ್ಶೆಯು ಅತ್ಯಂತ ಹೆಚ್ಚು ವ್ಯಂಗ್ಯ ಮತ್ತು ಅದರ ಪರಿಣಾಮವನ್ನು ವಿವರಿಸಿತು. ಅದರ ಉದ್ದೇಶವು ಬೇರೆಯಾಗಿದೆ. ಅದರ ನಿಲುವು ಬೇರೆಯಾಗಿದೆ. ಅದು ಪಠ್ಯವನ್ನು ಪ್ರಧಾನವೆಂದು ಹೇಳುತ್ತದೆ. ಅದರಲ್ಲಿ ಕೃತಿಯೇ ಹೆಚ್ಚು ಮುಖ್ಯ. ಆದರೆ ಬರವಣಿಗೆ ನಮ್ಮ ಸ್ವಂತಿಕೆಯನ್ನು ಹೇಗೆ ಹೇಳುತ್ತದೆ ಎಂದು ಅದು ನೋಡಲು ಹೋಗುವುದಿಲ್ಲ. ಹಾಗೆ ನೋಡುವುದಿದ್ದರೆ ಯಾವುದೇ ರಚನೆಯು

ಮೂಲಭೂತವಾಗಿ ಸ್ವಂತ ಅಸ್ತಿತ್ವವನ್ನು ಹೊಂದುವುದಿಲ್ಲ. ಅದು ಉದ್ದೇಶವನ್ನು ಹೇಳುತ್ತದೆ. ಯಾವುದೇ ರೀತಿಯ ಓದು ನಮಗೆ ಬೇರೆ ಬೇರೆ ಅಂಶಗಳನ್ನು ಹೇಳುತ್ತದೆ ನಿಜ. ಆದರೆ ಅದರಲ್ಲಿ ಮೂಲಗ್ರಹಿಕೆಯು ಹೇಗೆ ಮುಖ್ಯವೆಂದೂ ನೋಡಬೇಕಾಗುತ್ತದೆ. ಓದುಗರು ಮತ್ತು ಅವರ ಒಳನೋಟವನ್ನು ಈ ದೃಷ್ಟಿಯಿಂದ ಬೇರೆ ಮಾಡಲು ಬರುವುದೇ ಇಲ್ಲ. ಪಠ್ಯವೆನ್ನುವುದು ಅದರ ಪಾಡಿಗೆ ಅದು ಸ್ವತಂತ್ರವೆಂದು ಹೇಳಲು ಆಗುವುದೂ ಇಲ್ಲ. ಅದು ಅದರ ಮಟ್ಟಿಗೆ ಪೂರ್ಣವೆಂದು ಹೇಳಿದರೆ ಅದರ ಕುರುಡುತನ ಮಾತ್ರವೇ ಆಗುತ್ತದೆ. ಮತ್ತೆ ಅನೇಕರು ಪಠ್ಯವನ್ನು ಒಳಗಿನಿಂದ ನೋಡಬೇಕು ಹೊರಗಿನಿಂದ ನೋಡಬೇಕು ಎಂದು ಹೇಳುತ್ತಾರೆ. ಅದು ಸರಳ ಸಮೀಕರಣ ಮಾತ್ರವೇ ಆಗುತ್ತದೆ. ಅವುಗಳು ಪರಸ್ಪರ ವಿರುದ್ಧವಾದ ಪ್ರಕ್ರಿಯೆಯು ಅಲ್ಲ. ಆದರೆ ಯಾವಾಗ ನಾವು ಬರಹ ಮತ್ತಿತರ ಸಂಗತಿಗಳನ್ನು ಬೇರೆಯೆಂದು ಮಾಡುತ್ತೇವೆಯೋ ಆಗ ಅದರ ಸ್ವರೂಪವನ್ನು ಮಿತಿಮಾಡುತ್ತೇವೆ. ಆದರೆ ಯಾವಾಗ ಸಾಹಿತ್ಯವನ್ನು ಅತ್ಯಂತ ವೈಭವೀಕರಿಸುತ್ತೇವೆಯೋ ಆಗ ಅದರ ಕಾರ್ಯವನ್ನು ಹೆಚ್ಚು ಎಂದು ಭಾವಿಸುತ್ತೇವೆ. ನಮಗೆ ಅದರ ಕಾರ್ಯವನ್ನು ಮಾತ್ರವೇ ಬಹಳ ಮುಖ್ಯವೆಂಬ ಭಾವನೆಯು ಬರುತ್ತದೆ. ನಮಗೆ ಬೇರೆ ಸಮಸ್ಯೆಯೂ ಇದೆ. ಸಾಹಿತ್ಯವನ್ನು ನೋಡುವುದು ಅಂದರೆ ನಾವು ಅದನ್ನು ಓದುಗ ವರ್ಗಕ್ಕೆ ಮಾತ್ರವೇ ಸೀಮಿತವೆಂದು ಹೇಳುತ್ತೇವೆ. ಆದರೆ ವಿಷಯವು ಅಷ್ಟು ಸುಲಭವಲ್ಲ. ಸಾಹಿತ್ಯ ಮತ್ತು ಅದರ ಭಾಷೆಯು ತನ್ನ ಪಾಡಿಗೆ ತಾನೇ ಸ್ವಯಂತಂತ್ರವಲ್ಲ. ಅದು ಅವಲಂಬಿತವಾದ್ದೂ ಹೌದು. ಸಾಹಿತ್ಯ ಮತ್ತು ಅದರ ಭಾಷೆಯನ್ನು ಮಾತ್ರವೇ ಬಹಳ ಮುಖ್ಯವೆಂದು ಹೇಳುವವರು ಉಳಿದ ಸಂಗತಿಯನ್ನು ಗ್ರಹಿಸುವುದೂ ಇಲ್ಲ. ಅವರು ಅದನ್ನು ತಮ್ಮ ಚರ್ಚೆಗೆ ಬೇಕಾದಂತೆ ಬಳಸುತ್ತಾರೆ. ವಿಮರ್ಶೆಯು ವಾಸ್ತವವಾಗಿ ಓದುವ ಕ್ರಮ. ಆದರೆ ಅದನ್ನು ಓದುವುದು ಅಂದರೆ ಸೀಮಿತವಾದ ಅರ್ಥದಲ್ಲಿ ನಾವು ಭಾವಿಸಬೇಕಾದ ಅಗತ್ಯವಿಲ್ಲ. ಲೇಖಕನಿಗೆ ಭಾಷೆಯು ಒಂದು ದೃಷ್ಟಿಕೋನದಲ್ಲಿ ಬರೀ ವಾಹಕ ಮಾತ್ರವೇ ಆಗಿದೆ. ಭಾಷೆಯನ್ನು ಅವನು ನಿಯಂತ್ರಿಸುತ್ತಾನೆ. ಅದು ಅವನ ಅಗತ್ಯವೂ ಹೌದು. ಅವನಿಗೆ ಯಾವುದು ಮುಖ್ಯವೆಂದು ಅನಿಸುತ್ತದೆಯೋ ಅದನ್ನು ಮಾತ್ರವೇ ಅವನು ಹೇಳುತ್ತಾನೆ. ನಮ್ಮ ಮನಸ್ಸು ಮತ್ತು ಅದರ ಸ್ವಭಾವವೇ ನಮಗೆ ಹೇಳುವಂತೆ ಪ್ರೇರೇಪಣೆಯನ್ನು ನೀಡುತ್ತದೆ. ಈ ದೃಷ್ಟಿಯಿಂದ ನಮ್ಮ ಮನಸ್ಸು ಮತ್ತು ಅದರ ಪರಿಣಾಮವೇ ಸಾಹಿತ್ಯದಲ್ಲಿ ಒಂದು ನಿರ್ದಿಷ್ಟವಾದ ಅಸ್ತಿತ್ವವನ್ನು ಪಡೆಯುವಂತೆ ಮಾಡುತ್ತದೆ. ರಾಚನಿಕ ವಿಮರ್ಶೆಯು ವಾಸ್ತವವಾಗಿ ಒಳ ಹೊರಗನ್ನು ಬೇರೆ ಮಾಡಲು ನೋಡುತ್ತದೆ. ಅದನ್ನು ಹಾಗೆ ಮಾಡುವಾಗ ಕೆಲವು ಸೀಮಾರೇಖೆಯನ್ನು ಹಾಕುತ್ತದೆ.

ಸಾಹಿತ್ಯವನ್ನು ಹೇಗೆ ನೋಡಬೇಕು ಎನ್ನುವುದು ಸಮಸ್ಯೆಯೂ ನಿಜ. ಆದರೆ ಯಾವಾಗ ನಮ್ಮ ಲೇಖಕರು ತಮ್ಮ ಬರಹವನ್ನು ಲೋಕಾತೀತವಾದದ್ದು ಎಂದು ಭಾವಿಸುತ್ತಾರೆಯೋ ಆಗ ಅವರ ಬರಹಗಳಿಗೆ ಕೆಲವು ಮಿತಿಗಳು ಬರುತ್ತವೆ. ಅವರು ಕೆಲವರು ಸೀಮಾರೇಖೆಯನ್ನು ಹಾಕಿಕೊಳ್ಳುತ್ತಾರೆ. ಮತ್ತು ಅದರಿಂದ ಅವರ ಬರಹವೂ ಕೂಡಾ ಮಿತಿಯನ್ನು ಹಾಕಿಕೊಳ್ಳುತ್ತವೆ. ಸಾಹಿತ್ಯ ವಿಮರ್ಶೆಯು ಈ ದೃಷ್ಟಿಯಿಂದ ಮಹತ್ವದ ಕೆಲಸವನ್ನು ಮಾಡಬೇಕಾಗುತ್ತದೆ. ಅದರಲ್ಲಿ ಹೊಣೆಗಾರಿಕೆಯೂ ಇರುತ್ತದೆ. ಸಾಹಿತ್ಯ ಮತ್ತು ಅದರ ಅನ್ವಯವು ಈ ದೃಷ್ಟಿಯಿಂದ ಅತ್ಯಂತ ಸಂಕೀರ್ಣವಾಗಿರುತ್ತದೆ. ಸಾಹಿತ್ಯ ಮತ್ತು ಅದರ ಅನ್ವಯವನ್ನು ನಾವು ಯಾವುದೇ ತಿಳುವಳಿಕೆಯು ಇಲ್ಲದೆ ಮಾಡಲಾಗುವುದಿಲ್ಲ. ಅದನ್ನು ನಾವು ಮತ್ತೆ ಮತ್ತೆ ಬೇರೆ ಜ್ಞಾನ ಶಿಸ್ತನ್ನು ಇಟ್ಟುಕೊಂಡು ನೋಡಬೇಕಾಗುತ್ತದೆ. ತದರೋವ್ ಒಂದು ಸಂದರ್ಭದಲ್ಲಿ ಆಂತರಿಕ ವಿಮರ್ಶೆಯನ್ನು ಕುರಿತು ಕೆಲವು ಮಾತುಗಳನ್ನು ಹೇಳುತ್ತಾನೆ. ಅವನ ಪ್ರಕಾರ ಆಂತರಿಕ ವಿಮರ್ಶೆಯೆಂದರೆ ಅದು ಒಂದು ಹಂತದಲ್ಲಿ ವಿವರಣೆಯನ್ನು ಮಾತ್ರವೇ ಮಾಡುತ್ತದೆ. ಸಾಹಿತ್ಯವನ್ನು ಹೇಗೆ ಸಂಯೋಜನೆ ಮಾಡಲಾಗುತ್ತದೆ ಎಂದು ಮಾತ್ರವೇ ಅದಕ್ಕೆ ಅತ್ಯಂತ ಮುಖ್ಯ. ಸಾಹಿತ್ಯವನ್ನು ಸಾಹಿತ್ಯದ ಕಾರಣಕ್ಕಾಗಿ ಮಾತ್ರವೇ ನೋಡುತ್ತದೆ. ಆಂತರಿಕ ಎನ್ನುವುದೇ ಅದಕ್ಕೆ ಒಂದು ಕೇಂದ್ರ, ಅದರಾಚೆಗೆ ಅದು ಹೋಗುವುದೂ ಇಲ್ಲ. ಆಂತರಿಕ ವಿಮರ್ಶೆಯಲ್ಲಿ ಪದ ಪದವನ್ನು ನೋಡುತ್ತಾರೆ. ಕೃತಿಯು ತನ್ನನ್ನು ತಾನೇ ವ್ಯಾಖ್ಯಾನಿಸುತ್ತದೆ ಎಂದು ನಂಬುತ್ತಾರೆ. ಕೃತಿಯು ತನ್ನನ್ನು ತಾನೇ ಗುರುತಿಸಿಕೊಳ್ಳುತ್ತದೆ ಎಂದೂ ಭಾವಿಸುತ್ತಾರೆ. ಇಲ್ಲಿ ಪಠ್ಯ ಮತ್ತು ಅದರ ಅನನ್ಯತೆಯು ಅದಕ್ಕೆ ಬಹಳ ಮುಖ್ಯ. ತದರೋವ್ ಮೂಲಭೂತವಾಗಿ ಅನ್ವಯವನ್ನು ಹೆಚ್ಚು ನಂಬುತ್ತಾನೆ. ಅವನು ಓದನ್ನು ನಿರಾಕರಿಸುತ್ತಿಲ್ಲ. ಅವನ ಪ್ರಕಾರ ಓದಿಗೆ ಅದರದೇ ಆದ ಒಂದು ಮಹತ್ವವಿದೆ. ಹಾಗಿದ್ದರೂ ಕೆಲವರು ತಮಗೆ ಬೇಕಾದಂತೆ ಮಾತ್ರವೇ ವಿಮರ್ಶಾತ್ಮಕ ನಿಲುವನ್ನು ಹೊಂದಿರುತ್ತಾರೆ. ಅದು ಅಪಾಯವೆಂದು ಅವನ ತಿಳುವಳಿಕೆಯು ಆಗಿದೆ. ತಮಗೆ ಬೇಕಾದ್ದನ್ನು ಒಪ್ಪುವುದು ಮತ್ತು ತಮಗೆ ಬೇಡವಾದ್ದನ್ನು ನಿರಾಕರಿಸುವುದು ಅಷ್ಟು ಆರೋಗ್ಯಕಾರಿಯಾದ ಪ್ರವೃತ್ತಿಯು ಅಲ್ಲ. ಪಠ್ಯವನ್ನು ಬರೀ ವೀಕ್ಷಕ ವಿವರಣೆಯ ಥರ ಮಾಡುವುದೂ ಅಷ್ಟು ಉಪಯುಕ್ತವಲ್ಲ. ಡೆರಿಡಾನಲ್ಲಿ ಓದು ಒಂದು ಬಗೆಯ ಎಚ್ಚರವೂ ಆಗಿದೆ ಎನ್ನುವುದು ಇಲ್ಲಿ ಉಲ್ಲೇಖನೀಯ. ನಮ್ಮ ಕ್ರಿಯೆಗೆ ಅಥವಾ ನಮ್ಮ ಬರಹಕ್ಕೆ ಯಾವುದು ಕಾರಣವಾಗಿದೆಯೋ ಅದರ ಕಡೆಗೆ ನಮ್ಮ ಗಮನವು ಬೇಕಾಗುತ್ತದೆ. ಆದರೆ ಅದು ಎಷ್ಟರ ಮಟ್ಟಿಗೆ ಇರಬೇಕು ಎನ್ನುವುದು ನಮ್ಮ ವಿವೇಕಕ್ಕೆ ಬಿಟ್ಟ ವಿಷಯವೂ ಹೌದು. ವಿಮರ್ಶಾತ್ಮಕವಾದ

ಕುರುಡುತನಕ್ಕೆ ಮತ್ತು ವಿಮರ್ಶಾತ್ಮಕವಾದ ಒಳನೋಟಕ್ಕೆ ವ್ಯತ್ಯಾಸವಿದೆ. ನಾವು ಚಾರಿತ್ರಿಕತೆಯು ಕೂಡಾ ಒಂದು ಹಂತದಲ್ಲಿ ಅನ್ವಯನ್ನು ಒಪ್ಪುತ್ತದೆ. ಆದರೆ ನವ ಚಾರಿತ್ರಿಕತೆಯು ನಮ್ಮನ್ನು ಬೇರೆ ಕಡೆಗೆ ಕರೆದುಕೊಂಡು ಹೋಗುತ್ತದೆ. ಅಂದರೆ ಅದು ವ್ಯಕ್ತಿಯನ್ನು ಕೇಂದ್ರವಾಗಿರಿಸಿಕೊಳ್ಳುತ್ತದೆ. ವ್ಯಕ್ತಿಯ ಪ್ರಾತಿನಿಧಿಕವಾದ ಆಲೋಚನೆಯು ಯಾವ ಬಗೆಯದು ಎನ್ನುವುದು ಅದರ ಮುಖ್ಯವಾದ ಕಾಳಜಿಯೂ ಆಗಿದೆ. ಡೆರಿಡಾ ಮಾತ್ರ ಯಾವುದು ನಮ್ಮನ್ನು ನಿಯಂತ್ರಿಸುತ್ತದೆ ಮತ್ತು ಯಾವುದು ನಮ್ಮ ಆಲೋಚನೆಯು ಆಗಿದೆ ಎಂದು ಚರ್ಚಿಸುತ್ತಾನೆ. ಆಹಜಾರದ್ದು ಬರಹ ಮತ್ತು ಹಾಜರಾಗದೇ ಇರುವುದು ನಮ್ಮ ಆಲೋಚನೆ ಎನ್ನುವುದು ಅವನ ನಿಲುವು ಆಗಿದೆ. ಆದ್ದರಿಂದ ಅವನು ಭಾಷೆಯ ಆಚೆಗೆ ಹೋಗಬೇಕು ಎಂದು ಹೇಳುತ್ತಾನೆ. ಮೂಲ ಮತ್ತು ಅದರ ಹಾಜರಾತಿಯ ನಡುವೆ ಇರುವ ಅಂತರವು ಅವನಿಗೆ ಹೆಚ್ಚು ಮುಖ್ಯ. ನಿರಚನದಲ್ಲಿ ಅನುಭವ ಮತ್ತು ಅದರ ವ್ಯಕ್ತತೆಯು ಬಹಳ ಮುಖ್ಯ. ಬಯಕೆ ಮತ್ತು ಅದರ ಅಭಿವ್ಯಕ್ತಿಯನ್ನು ಅದು ಗಂಭೀರವಾಗಿಯೂ ನೋಡುತ್ತದೆ. ಭಾಷೆ ಮತ್ತು ಅದರ ನಿರೂಪಣೆ, ಭಾವನೆ ಮತ್ತು ಅದರ ಭಾಷೆಯು ಈ ಕಾರಣಗಳಿಂದ ಹೆಚ್ಚು ಮುಖ್ಯವಾಗುತ್ತದೆ. ಆದರೆ ಇಲ್ಲಿ ಬರುವ ಅತ್ಯಂತ ಮುಖ್ಯವಾದ ಪ್ರಶ್ನೆಯೆಂದರೆ ಯಾವುದನ್ನು ನಾವು ನಮ್ಮ ಭಾಷೆಯೆಂದು ಹೇಳುತ್ತೇವೆಯೋ ಅದು ನಿಜವಾಗಿಯು ನಮಗೆ ಒಂದು ವಾಹಕ ಮಾತ್ರವೇ. ಆದ್ದರಿಂದ ಈ ವಾಹಕದಲ್ಲಿ ಉಳಿದವರು ಹೇಗೆ ಮಾತಾಡುತ್ತಾರೆಯೋ ಅದೇ ರೀತಿಯಲ್ಲಿ ಲೇಖಕನೂ ಮಾತಾಡುತ್ತಾನೆ. ಈ ಮಾತು ನಿಜವಾಗಿಯೂ ಒಂದು ಪರಿಕರ ಮಾತ್ರವೇ ಆಗಿರುತ್ತದೆ. ಲೇಖಕ ಮತ್ತು ಅವನ ಮಾತುಗಳು ಒಂದು ವಲಯವನ್ನು ಹೇಳುತ್ತವೆ. ಅದನ್ನು ಹೇಳುವಾಗ ಅದರಲ್ಲಿ ಮಾತಿನ ಸಹಜತೆ ಮತ್ತು ಅದರ ವಿಶಿಷ್ಟತೆಯೆರಡೂ ಕಾಣಿಸಿಕೊಳ್ಳಬಹುದು. ಮತ್ತು ಲೇಖಕನು ನಿರ್ದಿಷ್ಟವಾದ ಚರಿತ್ರೆಯಲ್ಲಿ ನಿಂತು ಮಾತಾಡುತ್ತಾನೆ. ಮಾತು ಅವನಿಗೆ ಅಗತ್ಯವೂ ಆಗುತ್ತದೆ. ಅಂದರೆ ಚರಿತ್ರೆಯು ಅವನಿಗೆ ಮಾತಾಡಲು ಹೇಳಿದೆ. ಆದರೆ ಆಧುನಿಕತಾವಾದವು ಚರಿತ್ರೆಯನ್ನು ಬಿಟ್ಟು ಮಾತಾಡುತ್ತದೆ. ಆದ್ದರಿಂದ ಅದಕ್ಕೆ ಸಮಸ್ಯೆಯು ಇದೆ. ಅದರದ್ದು ಸೈದ್ಧಾಂತಿಕವಾದ ಸಮಸ್ಯೆಯೂ ಹೌದು. ಸ್ವಂತಿಕೆಯನ್ನು ಅದು ಹೆಚ್ಚು ಎತ್ತಿ ಹಿಡಿಯುತ್ತದೆ. ಮೌಲ್ಯವನ್ನು ಅದರ ಸ್ವಂತಿಕೆಯಲ್ಲಿ ಮಾತ್ರವೇ ಹೇಳಬೇಕು ಎನ್ನುವುದು ಅದರ ನಿಲುವು. ಸ್ವಂತ ಮತ್ತು ಅದರ ಮಹತ್ವದ ತೀರ್ಮಾನಗಳನ್ನು ಅದು ಹೆಚ್ಚು ಪ್ರಚುರ ಪಡಿಸುತ್ತದೆ. ಮೌಲ್ಯವನ್ನು ಅದು ಸ್ವಂತಿಕೆಯಲ್ಲಿ ಮಾತ್ರವೇ ಕಾಣುತ್ತದೆ. ಇಲ್ಲಿ ವ್ಯಕ್ತಿಯನ್ನು ಮತ್ತು ಅವನ ಚರಿತ್ರೆಯನ್ನು ನೋಡುವಾಗ ಯಾವುದನ್ನು ಅನುಸರಿಸುತ್ತೇವೆ ಎನ್ನುವುದೂ

ಮುಖ್ಯವಾದ ಸಮಸ್ಯೆಯೂ ಹೌದು. ಸಮಾಜ ಮತ್ತು ಅದರ ಅಧ್ಯಯನವನ್ನು ನಾವು ಒಂದು ರೀತಿಯಲ್ಲಿ ಮಾಡುತ್ತೇವೆ. ಅದರ ಅರ್ಥವನ್ನು ನಿರ್ದಿಷ್ಟವಾದ ಶಿಸ್ತಿನ ಥರ ನೋಡುತ್ತೇವೆ. ಸಾಮಾಜಿಕ ಜೀವನ ಮತ್ತು ಅದರ ಪರಿಣಾಮವನ್ನು ಸಾಹಿತ್ಯದಲ್ಲಿ ನೋಡಬೇಕೇ ಬೇಡವೇ ಎನ್ನುವುದು ಆಧುನಿಕತಾವಾದದ ಪ್ರಶ್ನೆ. ಆಧುನಿಕತೆಯನ್ನು ಈಗ ಒಂದು ಸಿದ್ಧಾಂತ ಮಾಡಲಾಗಿದೆ. ಅದನ್ನು ಸಾಹಿತ್ಯದಲ್ಲಿ ಅತ್ಯಂತ ಮಹತ್ವದ ಪ್ರಶ್ನೆಯೆಂಬಂತೆ ನೋಡಲಾಗಿದೆ. ಅದು ಪಠ್ಯವನ್ನು ನೋಡವ ಮತ್ತು ಗ್ರಹಿಸುವ ಕ್ರಮವು ಬೇರೆ. ಅದು ಪಠ್ಯವನ್ನು ಅದರ ನೇಯ್ಗೆಯ ಮೂಲಕವೇ ನೋಡುತ್ತದೆ. ಅದಕ್ಕಾಗಿ ಕೆಲವು ಪ್ರಮೇಯವನ್ನು ರಚಿಸಿಕೊಳ್ಳುತ್ತದೆ. ಅದು ತಾನು ಸಾಂಪ್ರದಾಯಿಕ ಅಲ್ಲವೆಂದು ಹೇಳಬೇಕಾಗಿತ್ತು. ಮತ್ತು ಅಭಿಜಾತ ಪರಂಪರೆಗೆ ಭಿನ್ನವಾದ ಒಂದು ಧೋರಣೆಯು ಇದೆ ಎಂದು ಪ್ರತಿಪಾದಿಸಬೇಕಾಗಿತ್ತು. ಆದರೆ ಅದು ಅಷ್ಟು ಸುಲಭವಾದ ಪ್ರಕ್ರಿಯೆಯು ಆಗಿರಲಿಲ್ಲ. ಚರಿತ್ರೆಯ ಪ್ರಕ್ರಿಯೆಯೆ ಬಹಳ ಸಂಕೀರ್ಣ.ಆಧುನಿಕತೆಯು ಚರಿತ್ರೆಯ ಸೃಷ್ಟಿಯೂ ಆಗಿದೆ. ಮತ್ತು ಅದರಲ್ಲಿ ಚರಿತ್ರೆಯು ಉತ್ಪಾದನೆ ಮತ್ತು ಅದರ ಬದಲಾವಣೆಯನ್ನು ನಾವು ಕಾಣುತ್ತೇವೆ. ಶಿಸ್ತು ಮತ್ತು ಅದರ ಪರಿಣಾಮವನ್ನು ನಾವು ಆಧುನಿಕತೆಯಲ್ಲಿ ಕಾಣಲು ಸಾಧ್ಯವಾಗುವುದೂ ಇಲ್ಲ. ಅದು ಬದಲಾಗಿದೆ. ಆಧುನಿಕತೆಯ ಉತ್ಪಾದನೆಯ ಶಕ್ತಿಗಳು ಬೆಳೆದ ಕ್ರಮ ನೋಡಿದರೆ ಇದು ತಿಳಿಯುತ್ತದೆ. ಅಂದರೆ ಉತ್ಪಾದನೆಯ ಶಕ್ತಿಗಳು ಮೂಲಭೂತವಾಗಿ ಭಿನ್ನವಾದ ರೀತಿಯಲ್ಲಿ ಬೆಳೆದಿದೆ. ಮತ್ತು ಅದರ ಸ್ವರೂಪ ಮತ್ತು ಸಾಧ್ಯತೆಗಳು ಬದಲಾಗುತ್ತಾ ಬಂದಿದೆ. ಅಂದರೆ ಅದನ್ನು ಈಗ ಭೌತಿಕವಾಗಿ ಒಂದು ರೂಪದ್ದು ಎಂದು ಗಣಿಸಲು ಸಾಧ್ಯವಿಲ್ಲ. ಅದರಲ್ಲಿ ಧನಾತ್ಮಕ ಮತ್ತು ಋಣಾತ್ಮಕವಾದ ಎರಡೂ ಅಂಶಗಳೂ ಇವೆ. ಅದರ ಸಾಧ್ಯತೆಯು ಬೇರೆಯಿದೆ. ವಾಸ್ತವವಾಗಿ ಆಧುನಿಕತೆಯು ಅನೇಕ ಕೊಡುಗೆಯನ್ನು ಕೊಟ್ಟಿದೆ. ಅದರ ಚಾರಿತ್ರಿಕ ಸಾಧ್ಯತೆಯೂ ಬೇರೆಯಿದೆ. ಅಂದರೆ ಅದರಲ್ಲಿ ವ್ಯಕ್ತಿ ಮತ್ತು ಸಮಾಜದ ಸಂಬಂಧವನ್ನು ಅದು ಸಮತೋಲನ ಮಾಡಲು ಯತ್ನವನ್ನು ಮಾಡಿದೆ. ಇದರಿಂದ ಸಾಧ್ಯತೆಗಳು ಬೇರೆಯಾದವು. ಚಿತ್ರ, ಸಂಗೀತ, ಧ್ವನಿಮುದ್ರಣ ಮುಂತಾದವು ಇದರ ಕಾರಣದಿಂದ ಬಂದವು. ಆಧುನಿಕತೆಯು ವ್ಯಕ್ತಿಗಳ ಗುಣ ಮತ್ತು ನಡತೆಯನ್ನು ಬದಲಿಸಿತು. ಹೊಸ ಸಾಧ್ಯತೆಯನ್ನು ಅದು ಹುಟ್ಟುಹಾಕಿತು. ಅದು ತಾತ್ಕಾಲಿಕವೂ ಹೌದು. ಆದರೆ ಅದು ಬದಲಾವಣೆಯನ್ನು ತಂದಿರುವುದು ನಿಜ. ವಾಸ್ತವವಾಗಿ ಆಧುನಿಕತೆಯು ಸ್ವಂತಿಕೆಯನ್ನು ಹೆಚ್ಚು ಪ್ರಚುರಪಡಿಸಿತು. ತನ್ನ ಗಮನವನ್ನು ಗದ್ಯದ ಕಡೆಗೆ ನೀಡಿತು, ಇದನ್ನು ಅದು ಉದ್ದೇಶ ಪೂರ್ವಕವಾಗಿಯೂ ಚಾಲ್ತಿಗೆ ತಂದಿತು. ವಾಸ್ತವವಾಗಿ ಇದನ್ನು ಆಧುನಿಕತೆ

ಮತ್ತು ಅಂತರಾಳದಲ್ಲಿ ಇರುವ ಅನೇಕ ವೈರುದ್ಧ್ಯವನ್ನು ಇಟ್ಟುಕೊಂಡು ನೋಡಬೇಕಾಗುತ್ತದೆ. ಆಧುನಿಕತೆಯು ಅನೇಕ ಸಮಸ್ಯೆಯನ್ನು ಎದುರು ಹಾಕಿಕೊಂಡಿದೆ. ನವ್ಯತೆಯನ್ನು ನೋಡಿದರೆ ಇದರ ವಿವರಗಳು ನಮಗೆ ದೊರೆಯುತ್ತವೆ. ಅಂದರೆ ಇದರಲ್ಲಿ ಮಾತುಗಳು ನಿರ್ದಿಷ್ಟವಾಗಿ ಒಂದು ವರ್ಗಕ್ಕೆ ಮಾತ್ರವೇ ಸೀಮಿತವಾಗಿದೆ. ಅದರದು ಉದ್ದೇಶಿತವಾದ ಸಂಕಥನ. ಸ್ವಲ್ಪ ಮಟ್ಟಿಗೆ ಅದರ ಅರ್ಥವೂ ಅತ್ಯಂತ ಸಂಕೀರ್ಣ. ಅದು ಸಂಗೀತವನ್ನು ನಿರಾಕರಿಸುತ್ತದೆ. ಹೀಗೆ ಗದ್ಯ ಮತ್ತು ಪದ್ಯದ ಪ್ರಭೇದವನ್ನು ಅದು ಹತ್ತಿರಕ್ಕೆ ತಂದಿತು. ಅದರ ಸಂವಹನವು ಬೇರೆಯಾಯಿತು. ನಾವು ಗದ್ಯವನ್ನು ಹೇಗೆಲ್ಲಾ ಉಪಯೋಗ ಮಾಡುತ್ತೇವೆಯೋ ಅದೇ ರೀತಿಯಲ್ಲಿ ಅದು ತನ್ನ ಗದ್ಯವನ್ನು ಬಳಸಿತು. ಇದರ ಪರಿಣಾಮವಾಗಿ ಅದರಲ್ಲಿ ಆಡು ಮಾತು ಹೆಚ್ಚು ಮುಖ್ಯವಾಯಿತು. ಭಾಷಣಗಾರರು ಮತ್ತು ಗದ್ಯ ಲೇಖಕರು ಜೊತೆಯಾದ ರೀತಿಯಲ್ಲಿ ಅವರ ಕವಿತೆಗಳು ಬಂದರೆ ಅಚ್ಚರಿಯು ಇಲ್ಲ. ಗದ್ಯ ಮತ್ತು ಪದ್ಯದ ನಡುವೆ ಉಂಟಾದ ಮೈತ್ರಿಯು ಎದ್ದು ಕಾಣಿಸಿತು. ನವ್ಯರು ಪದ್ಯದ ಲಯಬದ್ಧತೆಯನ್ನು ನಿರಾಕರಿಸಿದರು. ಕಾವ್ಯ ಮತ್ತು ಅದರಲ್ಲಿ ಭಾಷೆಯು ವ್ಯಂಗ್ಯವನ್ನು ಒಳಗೊಂಡಿತು. ಆದರೆ ಸಮಾಜದ ಕೆಲವು ಜನರ ಮಾತುಕತೆಯನ್ನು ಮತ್ತು ಒಂದು ವರ್ಗದ ಜನರ ಅಂತರಾಳವನ್ನು ಮಾತ್ರವೇ ಹಿಡಿದಿಟ್ಟಿತು. ಆದರೆ ಅನುಕರಣೆ ಎನ್ನುವುದನ್ನು ಮಾತ್ರವೇ ಒಪ್ಪಲಿಲ್ಲ. ಅದರಲ್ಲಿ ಅನುಕರಣೆಗಿಂತ ಬೇರೆ ಸಾಧ್ಯತೆಗಳೇ ಹೆಚ್ಚು ಕಾಣಿಸಿಕೊಂಡಿತು. ಹೊರಗಿನ ಜಗತ್ತನ್ನು ಅತ್ಯಂತ ಚೆನ್ನಾಗಿಯೇ ನೋಡಬಹುದು. ಆದರೆ ಅಂತರಂಗವನ್ನು ಅದರ ರೀತಿಯಲ್ಲಿ ನೋಡಲು ಸಾಧ್ಯವಿಲ್ಲವೆಂದು ಅದು ಹೇಳಿತು. ಸ್ವಂತಿಕೆ ಮತ್ತು ಆತ್ಮಕೇಂದ್ರವನ್ನು ಮಾತ್ರವೇ ಅದು ಬರೆಯಿತು. ಅದರ ಪ್ರಾತಿನಿಧಿಕ ಸ್ವರೂಪವೂ ಭಿನ್ನವಾಗಿದೆ. ಖಾಸಗಿತನ ಮತ್ತು ಆಂತರಿಕತೆಯೇ ಮುಖ್ಯವಾದ ಸಂಗತಿಯೂ ಹೌದು. ಸ್ವಂತಿಕೆಯನ್ನು ಭಾಷೆಯಲ್ಲಿ ಹೇಳುವುದು ಹೇಗೆ ಎನ್ನುವುದೂ ಮಾತ್ರವೇ ಅದಕ್ಕೆ ಮುಖ್ಯವಾಯಿತು. ಸ್ವಂತಿಕೆ ಮತ್ತು ಅದರ ವಲಯವನ್ನು ಮಾತ್ರವೇ ನೋಡಿದ್ದರಿಂದ ಅದಕ್ಕೆ ಮಿತಿಗಳು ಬಂದವು. ಒಂದು ವಾಕ್ಯಕ್ಕೆ ಅನೇಕ ಅರ್ಥಗಳು ಬರುವ ತರಹ ನವ್ಯರು ಬರೆದರು. ನವ್ಯವು ವಾಸ್ತವವನ್ನು ನೋಡಿದ ಕ್ರಮಗಳು ಬೇರೆ. ನವ್ಯರಿಗೆ ಸಹಜತೆಯು ಅಷ್ಟು ಮುಖ್ಯವಲ್ಲ. ಪಶ್ಚಿಮದ ನವ್ಯ ಮತ್ತು ಅದರ ಹಿಂದಣ ಅನುಭವಗಳು ಬೇರೆಯಾಗಿವೆ. ಆಧುನಿಕತಾವಾದಿಗಳು ಕ್ರಿಶ್ಚಿಯಾನಿಟಿಯನ್ನು ಅನುಮಾನದಲ್ಲಿ ನೋಡಿದರು. ಆದರೆ ಇಲ್ಲಿ ಹಾಗೆ ಆಗಲಿಲ್ಲ. ಸ್ವಂತಿಕೆ ಮತ್ತು ಜೀವನ ಕ್ರಮದ ಅನೇಕ ತಲ್ಲಣಗಳು ಇಲ್ಲಿ ಪ್ರಧಾನವೂ ಆಗಿತ್ತು. ನವ್ಯರು ಅಸ್ತಿತ್ವ ಮತ್ತು ಅದರ ಕಷ್ಟಗಳನ್ನು ಹೆಚ್ಚು ಹೇಳಿದರು. ಜೀವನ ಮತ್ತು

ಅದರ ಪ್ರಾತಿನಿಧಿಕವಾದ ಅರ್ಥವು ಯಾವ ಬಗೆಯದು ಎಂದು ಹುಡುಕಲು ಪ್ರಾರಂಭಿಸಿದರು. ಕಳೆದು ಹೋದ್ದು ವರ್ತಮಾನದ ಮೇಲೆ ಬೀರುವ ಗಾಢವಾದ ಪರಿಣಾಮವನ್ನು ಅಡಿಗರು ಹೇಳಿದರು. ಅವರ ಭೂತ ಕವಿತೆಯೇ ಇದಕ್ಕೆ ಒಳ್ಳೆಯ ಸಾಕ್ಷಿ. ಭಾಷೆಗೆ ತುಂಬಾ ಶಕ್ತಿಯು ಇದೆ ಎಂದು ಅವರು ಹೇಳಿದರು. ನವ್ಯರ ಮಾತುಗಳು ಹಾರ್ಮೋನಿಯಂನ ಮೇಲೆ ನಿಂತಿಲ್ಲ. ಅನುಭವ ಮತ್ತು ಅದರ ಸ್ವರೂಪವನ್ನು ನವ್ಯರು ವಿವರಿಸಿದ ಕ್ರಮವು ಬೇರೆಯಾಗಿದೆ. ಅವರು ಮಾತನ್ನು ಒಂದು ವಿಶಿಷ್ಟವಾದ ಪ್ರಕ್ರಿಯೆ ಎಂದೇ ಭಾವಿಸಿದರು. ವಿಷಯನಿಷ್ಟತೆಯು ಅವರಿಗೆ ಹೆಚ್ಚು ಮುಖ್ಯವಾಯಿತು. ವ್ಯಕ್ತಿ ಮತ್ತು ಅವನ ಅನುಭವ ಹಾಗೂ ಅವನ ಅಭಿವ್ಯಕ್ತಯನ್ನು ಬಹಳ ಮುಖ್ಯವೆಂದು ಅವರು ಭಾವಿಸಿದರು. ಅನುಭವವನ್ನು ಹೇಳುವುದು ಅಂದರೆ ಅಷ್ಟು ಸುಲಭವಾದ ಪ್ರಕ್ರಿಯೆ ಅಲ್ಲವೆಂದು ಅವರು ಭಾವಿಸಿದ್ದೂ ಮತ್ತೆ ವಾಗ್ವಾದಕ್ಕೆ ಕಾರಣವಾಯಿತು. ಅನುಭವ ಎಂದರೆ ಅತ್ಯಂತ ಸಂಕೀರ್ಣವೆಂದು ಅವರು ಹೇಳಿದರು. ಬುದ್ಧಿಜೀವಿಯು ಯೋಚಿಸುವುದು ಮತ್ತು ಅದರ ಕುರಿತಾಗಿ ಬರೆಯುವುದು ಅತ್ಯಂತ ಕಷ್ಟವೆಂದು ಅವರ ಭಾವನೆ ಅನುಭವ ಮತ್ತು ಅದರ ಸಂಕೀರ್ಣತೆಯನ್ನು ಭಾಷೆಯಲ್ಲಿ ಹೇಳಿಕೊಳ್ಳುವುದು ಕಷ್ಟವೆಂದು ಅವರು ಭಾವಿಸುತ್ತಾರೆ. ಆದರೆ ಅದಕ್ಕೆ ಅವರು ಕಂಡುಕೊಂಡ ಪರಿಹಾರವೆಂದರೆ ಅದನ್ನು ಸಂಕೇತದಲ್ಲಿ ಹೇಳುವುದು. ಮಾತನ್ನು ಅತ್ಯಂತ ವ್ಯವಸ್ಥಿತವಾಗುವಂತೆ ನಿರೂಪಿಸಬೇಕಾದ ಅಗತ್ಯವನ್ನು ಅವರು ಪ್ರತಿಪಾದಿಸುತ್ತಾರೆ. ಅತ್ಯಂತ ಪ್ರತಿಭಾಶಾಲಿಯಾದವನು ಮಾತ್ರವೇ ಸಾಹಿತ್ಯದಲ್ಲಿ ತನ್ನ ಅನನ್ಯತೆಯನ್ನು ಹೇಳಬಲ್ಲ ಎಂದು ಭಾವಿಸುತ್ತಾರೆ. ಕಾವ್ಯವನ್ನು, ಕಾದಂಬರಿಯನ್ನು, ಕತೆಯನ್ನು ಅತ್ಯಂತ ವ್ಯವಸ್ಥಿತವಾಗಿ ಹೇಳಬೇಕಾಗುತ್ತದೆ. ಮತ್ತು ಅದರಲ್ಲಿ ಅಂತರಂಗವನ್ನು ಅತ್ಯಂತ ಧ್ವನಿಪೂರ್ಣವಾಗಿಯೇ ವಿವರಿಸಬೇಕಾಗುತ್ತದೆ ಎಂದು ಅವರ ಭಾವನೆ. ನಿರೂಪಣೆ ಮತ್ತು ಅದರ ಜೋಡಣೆಯು ಮಾತ್ರವೇ ಅವರಿಗೆ ಹೆಚ್ಚು ಮುಖ್ಯವಾದ ಸಂಗತಿ. ಯಾವುದನ್ನು ಕಾವ್ಯದ ಭಾಷೆ ಎಂದು ಹೇಳುತ್ತೇವೆಯೋ ಅದು ಕೂಡಾ ಇಂಥ ವ್ಯವಸ್ಥಿತವಾದ ಒಂದು ಜೋಡಣೆ. ಸಂಕೇತ ಮತ್ತು ಅದರ ಸ್ವರೂಪವೂ ಕೂಡಾ ಎಲ್ಲರಿಗೂ ಅರ್ಥವಾಗಬೇಕೆಂದೇನೂ ಇಲ್ಲ. ಓದುಗನು ಹೆಚ್ಚು ಪ್ರಬುದ್ಧನಾಗಿರಬೇಕಾಗುತ್ತದೆ. ಅವನಿಗೆ ಪದ್ಯವನ್ನು ಓದುವ ಸಾಮರ್ಥ್ಯವೂ ಇರಬೇಕಾಗುತ್ತದೆ. ಹಾಗೆ ನೋಡುವುದಿದ್ದರೆ ಯಾವುದೇ ಅಂತರಂಗದ ಸಂಗತಿಯು ಅಷ್ಟು ಸುಲಭವಾಗಿ ತಿಳಿಯುವುದೂ ಇಲ್ಲ. ತೀರಾ ಸಾಮಾನ್ಯವಾದ ಸತ್ಯವನ್ನು ಹೇಳುವುದು ಅಷ್ಟು ಉಪಯುಕ್ತವಲ್ಲವೆಂದು ಅವರು ಭಾವಿಸುವುದೂ ನಿಜ. ಅಂತರಂಗವನ್ನು ಹೇಳಲು ಸಂಕೇತವೂ ಒಂದು ಸಾಧನ. ಸಂಕೇತಕ್ಕೆ ಸಮಗ್ರತೆಯು

ಇರುತ್ತದೆ. ಅದು ವಿಶ್ವಾತ್ಮಕವೂ ಹೌದು. ಯಾವುದೇ ಒಬ್ಬ ಬುದ್ಧಿಜೀವಿಗೆ ಬರಬಹುದಾದ ಅಸ್ತಿತ್ವವಾದಿ ಚಿಂತನೆಯು ಕ್ಷಿತಿಜದಲ್ಲಿ ಬರುತ್ತದೆ. ಗತಿಸ್ಥಿತಿಯಲ್ಲಿ ಬರುವ ಸಮಸ್ಯೆಯನ್ನು ನಾವು ಪ್ರತ್ಯೇಕ ಮಾಡಬಹುದು. ಅಥವಾ ಅದನ್ನು ವಿಶ್ವಾತ್ಮಕವೂ ಮಾಡಬಹುದು. ಕೃತಿಗೆ ಸೀಮಿತವಾಗಿಯೇ ಸಂಕೇತವು ಬರುತ್ತದೆ ಎಂದು ಭಾವಿಸಬೇಕಾದ ಅಗತ್ಯವಿಲ್ಲವೆಂದು ನವ್ಯವು ಹೇಳುತ್ತದೆ. ಆದರೆ ಪ್ರತೀಕ ಮತ್ತು ಅದರ ಹಿಂದೆ ಇರುವ ಅರ್ಥವನ್ನು ಅದು ಬಿಡುತ್ತದೆ. ಮತ್ತು ಪ್ರತ್ಯೇಕ ಮಾಡುತ್ತದೆ. ಅತ್ಯಂತ ಶಕ್ತಿಶಾಲಿಯಾಗಿರುವ ಕವಿಯು ಮಾತ್ರವೇ ಅನುಭವವನ್ನು ರೂಪಕವಾಗಿ ಅಥವಾ ಪ್ರತೀಕವಾಗಿಯೂ ನೋಡಬಲ್ಲ. ಸಾಮಾನ್ಯವಾದ ಅನುಭವವನ್ನು ಹೇಳಬೇಕಾಗಿಯೇ ಇಲ್ಲ. ಯಾವುದು ನಮ್ಮನ್ನು ನಡುಗಿಸುತ್ತದೆಯೋ ಅದನ್ನು ಮಾತ್ರವೇ ಹೇಳಿದರೆ ಸಾಕು. ಆದರೆ ಅದನ್ನು ಹೇಳಲು ನಾವು ಸಂಕೇತದ ಸಹಾಯವನ್ನು ಪಡೆಯಲೇಬೇಕಾಗುತ್ತದೆ. ವಾಸ್ತವವಾಗಿ ಸಂಕೇತದ ಸಾರ್ವಜನಿಕವಾದ ಉಪಯೋಗವು ಭಿನ್ನ. ಅದು ಸಂಕೇತದ ಶಾಸ್ತ್ರವನ್ನು ಹೇಳುತ್ತದೆ. ಸಂಕೇತಶಾಸ್ತ್ರವು ಈ ದೃಷ್ಟಿಯಿಂದ ಭಿನ್ನವಾದ ಒಂದು ಚಟುವಟಿಕೆಯೆ ಆಗಿದೆ. ಅದನ್ನು ಸಾಹಿತ್ಯದ ಚರಿತ್ರೆಗಳೂ ಹೇಳಿವೆ. ಸಂಕೇತಕ್ಕೆ ಸಮಾಜ ಜೀವನದಲ್ಲಿ ಹೆಚ್ಚು ಮಹತ್ವ ಇದೆ ಎಂದು ಎಲ್ಲರೂ ಒಪ್ಪುತ್ತಾರೆ. ಅದರ ಉಪಯೋಗವು ಭಿನ್ನ, ಆದರೆ ನವ್ಯದಲ್ಲಿ ಸಂಕೇತವು ವ್ಯಕ್ತಿ ಮತ್ತು ಅವನ ಅನುಭವಕ್ಕೆ ಮಾತ್ರವೇ ಸೀಮಿತವಾಯಿತು. ಆದರೆ ರೊಮಾಂಟಿಕ್ ಪರಂಪರೆಯು ಮನಸ್ಸು ಮತ್ತು ನಿಸರ್ಗವನ್ನು ನೋಡಿದ ಕ್ರಮಗಳು ಬೇರೆಯಾಗಿದೆ. ಅದರಲ್ಲಿ ವಿಷಯ ಮತ್ತು ವಸ್ತುಗಳ ಸಮಸ್ಯೆಯೂ ಭಿನ್ನವಾಗುತ್ತದೆ. ಅಂದರೆ ಅದರಲ್ಲಿ ವ್ಯತ್ಯಾಸವಿದೆ. ಮನಸ್ಸು ಮತ್ತು ನಿಸರ್ಗವನ್ನು ಕೇಂದ್ರದ ವೈರುಧ್ಯವಾಗಿಯೂ ನೋಡುತ್ತದೆ. ನವ್ಯದಲ್ಲಿ ಸಂಕೇತಕ್ಕೆ ಹೆಚ್ಚಿನ ಆದ್ಯತೆಯು ಇದೆ. ಸಂಕೇತವನ್ನು ಅದು ನೋಡುವ ಮತ್ತು ಗ್ರಹಿಸುವ ಕ್ರಮವು ಭಿನ್ನವಾಗಿದೆ. ಅದರಲ್ಲೂ ಅದು ಸಂಕೇತವನ್ನು ನೋಡುವುದು; ಗ್ರಹಿಸುವುದು ಮೂಲಭೂತವಾಗಿ ಒಂದು ಆಶಯವನ್ನು ಕೇಂದ್ರ ಲಕ್ಷ್ಯದಲ್ಲಿ ಇರಿಸಿಕೊಂಡು. ಮತ್ತೆ ಹೇಳಬೇಕೆಂದರೆ ಅದರಲ್ಲಿ ಸಂಕೇತವು ಅತ್ಯಂತ ಮಹತ್ವದ ಪಾತ್ರವನ್ನು ವಹಿಸುತ್ತದೆ. ಅದರಲ್ಲಿ ಸಂಕೇತವು ಮುಖ್ಯವಾದ ಆಶಯ. ಅದು ಹೇಗೆ ಇದೆಯೋ ಅದಕ್ಕೆ ಅನುಸಾರವಾಗಿಯೇ ರಚಿತವಾಗಿರುತ್ತದೆ. ಮತ್ತು ಇದರ ಪರಿಣಾಮವಾಗಿ ನಾವು ಸಂಕೇತವನ್ನು ಸರಿಯಾದ ರೀತಿಯಲ್ಲಿ ಅರ್ಥ ಮಾಡಿಕೊಳ್ಳದೆ ಹೋದರೆ ನಮಗೆ ಕವಿತೆಯು ಅರ್ಥವಾಗಲಾರದು. ಸಂಕೇತಕ್ಕೆ ಈ ಕಾರಣದಿಂದ ಹೆಚ್ಚು ಶಕ್ತಿಯು ಇದೆ. ಸಂಕೇತವನ್ನು ಅದು ಹೆಚ್ಚು ಅಧಿಕೃತಮಾಡುತ್ತದೆ. ಅದರಲ್ಲಿ ಸಂಕೇತಕ್ಕೆ ಅತ್ಯಂತ ಹೆಚ್ಚು ಶಕ್ತಿಯೂ ಇದೆ.

ಅಡಿಗೆ ಶ್ರೀರಾಮನವಮಿಯ ದಿವಸದಂಥ ಕವಿತೆಗಳಿಗೆ ನೈತಿಕತೆ ಮತ್ತು ಆಧ್ಯಾತ್ಮಿಕತೆಯು ಇದೆ. ರೊಮಾಂಟಿಕ್ ಪರಂಪರೆಯಲ್ಲಿ ನಿಸರ್ಗವು ಬರೀ ನಿಸರ್ಗವಲ್ಲ. ಅದು ಬಾಹ್ಯವೂ ಹೌದು. ಮತ್ತು ಅಂತರಂಗವೂ ಹೌದು. ಕುವೆಂಪು ಈ ಮಾದರಿಲ್ಲಿ ಬರೆದರು. ಮತ್ತು ಅವರಿಗೆ ಅದು ಅತ್ಯಂತ ಹೆಚ್ಚು ಶಕ್ತಿಯನ್ನು ಕೊಟ್ಟಿತ್ತು. ಕುವೆಂಪು ಮೂಲಭೂತವಾಗಿ ಕೆಲವನ್ನು ಗ್ರಹಿಸಿದರು. ಅವರ ಕವಿತೆಗಳಲ್ಲಿ ಬಾಹ್ಯವು ವಿಶಿಷ್ಟವಾಗಿದೆ. ನವೋದಯದಲ್ಲಿ ಪ್ರಜ್ಞೆ ಮತ್ತು ಅದರ ಸ್ವಭಾವವೂ ಬೇರೆಯಾಗಿದೆ. ಅಂದರೆ ಅದರಲ್ಲಿ ವ್ಯಕ್ತಿಯು ನಿಸರ್ಗವನ್ನು ನಿಜವಾಗಿಯೂ ನೋಡಬಲ್ಲ. ಮತ್ತು ಅದರಲ್ಲಿ ವ್ಯಕ್ತಿ ಮತ್ತು ನಿಸರ್ಗದ ಪ್ರಶ್ನೆಯು ಅತ್ಯಂತ ಹೆಚ್ಚು ಸಂಕೀರ್ಣವೂ ಆಗಿದೆ. ವ್ಯಕ್ತಿಯನ್ನು ನಿಸರ್ಗದ ಜೊತೆಗೆ ನೋಡುವುದು ಸಾಧ್ಯ ಎನ್ನುವುದನ್ನು ಅದು ಹೇಳುತ್ತದೆ. ಕುವೆಂಪು ಪ್ರಜ್ಞೆಯನ್ನು ರೂಪಿಸಿದ್ದೇ ಮಲೆನಾಡು. ಆದ್ದರಿಂದ ಅವರ ಕವಿತೆಯಲ್ಲಿ ಬರುವ ಸ್ವಂತಿಕೆಯನ್ನು ನಾವು ನಿಸರ್ಗದ ಜೊತೆಗೆ ಗುರುತಿಸಬೇಕಾಗುತ್ತದೆ. ನವೋದಯ ಕವಿತೆಯು ನಿಸರ್ಗವನ್ನು ತನ್ನ ಆದ್ಯತೆಯಾಗಿಯೂ ನೋಡುತ್ತದೆ. ಆದರೆ ಅದು ಸೀಮಾತೀತವಾಗುತ್ತದೆ. ಅದು ಶಕ್ತಿಶಾಲಿಯಾಗುತ್ತದೆ. ಮನುಷ್ಯನನ್ನು ತನ್ನ ತೋಳಿನತೊಟ್ಟಿಲಲ್ಲಿ ತೂಗುತ್ತದೆ. ಇದರಲ್ಲಿ ನಾವು ಗಮನಿಸಬೇಕಾದ ಬೇರೆ ಅಂಶಗಳೂ ಇವೆ. ಯಾವುದನ್ನು ನಾವು ಈವತ್ತು ರಮ್ಯವೆಂದು ನವೋದಯದವರನ್ನು ದೂರ ಇಡುತ್ತೇವೆಯೋ ಅದರ ಸ್ವರೂಪವು ಅಷ್ಟು ಸೀಮಿತವಾಗಿ ಇಲ್ಲ. ನವೋದಯ ಮತ್ತು ಅದರ ಪರಿಣಾಮವನ್ನು ಈವತ್ತು ನಾವು ಬೇರೆ ರೀತಿಯಲ್ಲಿಯೂ ನೋಡಬೇಕಾಗಿದೆ. ಅವರು ಬರೆದದ್ದು ರಾಷ್ಟ್ರ ಮತ್ತು ಭಾಷೆಯ ಅತ್ಯಂತ ಸಮಸ್ಯೆಯ ಕಾಲದಲ್ಲಿ. ರಾಷ್ಟ್ರವನ್ನು ಹೊಸತಾಗಿ ವ್ಯಾಖ್ಯಾನಿಸಿದ ಕ್ರಮವನ್ನು ನವೋದಯದ ಲೇಖಕರಲ್ಲಿ ನಾವು ಕಾಣುತ್ತೇವೆ. ಅದು ಮುಖ್ಯ. ರಾಷ್ಟ್ರೀಯತೆಯ ವ್ಯಾಖ್ಯೆಯನ್ನು ಗಾಂಧಿ ಮತ್ತು ಅನೇಕರು ಹೇಳಿದ ಕ್ರಮವನ್ನು ಕನ್ನಡದಲ್ಲಿ ಕುವೆಂಪು ಬೇಂದ್ರೆ ಮುಂತಾದವರು ಸಾಂಸ್ಕೃತಿಕವಾಗಿ ನೋಡಿದರು. ನಿಸರ್ಗವು ಅವರಿಗೆ ಬರೀ ಒಂದು ನಿಸರ್ಗವೇ ಆಗಿರಲಿಲ್ಲ. ಅದು ಅವರ ಶಕ್ತಿಯೂ ಆಗಿತ್ತು. ಅವರು ಅದನ್ನು ನೋಡಿದ ಮತ್ತು ಅದನ್ನು ಅನುಭವಿಸಿದ ಕ್ರಮವು ಬೇರೆಯೂ ಆಗಿತ್ತು. ವ್ಯಕ್ತಿ ಮತ್ತು ನಿಸರ್ಗದ ಸಂಬಂಧವು ಬದಲಾಗುತ್ತದೆ. ಮತ್ತು ಅದಕ್ಕೆ ಒಂದು ಸ್ಥಿರವಾದ ಅರ್ಥ ಮಾತ್ರವೇ ಇರುವುದಿಲ್ಲವೆಂದು ಅವರು ನಂಬಿದ್ದರು. ಆದ್ದರಿಂದಲೇ ಕುವೆಂಪು ಮತ್ತು ಕಾರಂತರು ನಿಸರ್ಗವನ್ನು ನೋಡುವ ಮತ್ತು ಗ್ರಹಿಸುವ ಕ್ರಮವು ಬೇರೆಯಾಗುತ್ತದೆ. ಒಂದು ರೀತಿಯಿಂದ ಅವರು ನಿಸರ್ಗವನ್ನು ಕ್ರೋಢೀಕರಣ ಮಾಡುತ್ತಾರೆ. ಅದರ ಸಾರವನ್ನು ನಮಗೆ ಕೊಡುತ್ತಾರೆ. ಅವರ ದೃಷ್ಟಿಯಲ್ಲಿ ವಸ್ತು ಮತ್ತು ವಿಷಯವು

ಬೇರೆಯಾಗುತ್ತದೆ. ಅದರಲ್ಲಿ ಭಿನ್ನತೆಗಳು ಇವೆ. ಕುವೆಂಪು ನಿಸರ್ಗವನ್ನು ನೋಡುವುದು ಬರೀ ಒಂದು ವಸ್ತುವಾಗಿ ಅಲ್ಲ. ಅವರು ಅದನ್ನು ಸಂವಾದಿಯಾದ ವಿಷಯವಾಗಿಯೂ ನೋಡುತ್ತಾರೆ. ವಿಷಯ ನಿಷ್ಟವಾದ ಒಂದು ಸ್ಥಿತಿಯಿಂದ ಅವರು ಬರೆಯುತ್ತಾರೆ. ಅದರಲ್ಲಿ ಅದು ವೇಗವಾಗಿ ಮತ್ತು ನೋಟಕ್ಕೆ ಅನುಸಾರವಾಗಿಯೇ ಪಲ್ಲಟವನ್ನು ಕಾಣುತ್ತದೆ. ಕುವೆಂಪು ದೇವರನ್ನು ಕಾಣುವುದು ನಿಸರ್ಗದಲ್ಲಿ. ಅದರಲ್ಲಿ ಸಂಭ್ರಮವೂ ಇದೆ. ನಿಸರ್ಗವು ಅವರಿಗೆ ಮಿತ್ರನೂ ಹೌದು. ಅವರು ನಿಸರ್ಗವನ್ನು ನೋಡುವಾಗ ಆಶ್ಚರ್ಯವನ್ನೂ ಪಡುತ್ತಾರೆ. ಅದರ ಸ್ವರೂಪದಲ್ಲಿ ನಿಗೂಢತೆಯೂ ಇದೆ. ದೇವರ ದಯ ಕಾಣೋ ಎಂದು ಹೇಳಿಕೊಳ್ಳುವಾಗ ಕುವೆಂಪು ಯಾವುದೇ ಸಂಕೋಚವನ್ನು ಪಡೆಯುವುದೂ ಇಲ್ಲ. ದೇವರು ರುಜು ಮಾಡುವುದು ಅಲ್ಲವೆಂದು ಅವರಿಗೆ ಗೊತ್ತಿದೆ. ಆದರೆ ಅದನ್ನು ಅವರು ಹಾಗೆ ಹೇಳುತ್ತಾ ಇಲ್ಲ. ಅದರಲ್ಲಿ ಅವರು ಕಟ್ಟಿಕೊಡುವ ಪ್ರತಿಮೆಯೇ ಅತ್ಯಂತ ವಿಶಿಷ್ಟ. ನಿಸರ್ಗ ಮತ್ತು ಕಲ್ಪನೆಗಳಿಗೆ ಅದರಲ್ಲಿ ಹೇರಳವಾದ ಅವಕಾಶವೂ ಇದೆ. ಸೌಂದರ್ಯ ಮತ್ತು ಅದರ ಚಹರೆಗಳು ಅದರಲ್ಲಿ ವ್ಯಕ್ತವಾಗುವ ಕ್ರಮಗಳು ಬೇರೆಯಾಗಿವೆ. ಬೇಂದ್ರೆಯವರು ಹೇಳಿದ ಮಾತನ್ನು ಇಲ್ಲಿ ಗಮನಕ್ಕೆ ತಂದುಕೊಳ್ಳಬೇಕಾಗುತ್ತದೆ. ಬೇಂದ್ರೆಯವರು ಹೇಳಿಕೊಂಡ ಬಹಳ ದೊಡ್ಡ ಮಾತುಗಳು ಅವರು ನಿಸರ್ಗವನ್ನು ಹೇಗೆ ನೋಡಿದರು ಎಂಬುದನ್ನು ಸೂಚಿಸುತ್ತದೆ. ಅವರ ಪ್ರಕಾರ ಮೂಡಲ ಮನೆ ಮತ್ತು ಮುತ್ತಿನ ನೀರು ಹೊಸ ಸಂವೇದನೆಯನ್ನು ಹೇಳುತ್ತದೆ. ಅದು ಅವರಿಗೆ ಬಹಳ ಮುಖ್ಯ. ಮನಸ್ಸು ಮತ್ತು ನಿಸರ್ಗವು ಈ ದೃಷ್ಟಿಯಿಂದ ನವೋದಯದ ಕವಿಗಳಲ್ಲಿ ವಿಶಿಷ್ಟವಾದ ಒಂದು ತಾತ್ವಿಕತೆಯೇ ಆಗುತ್ತದೆ. ನಿಸರ್ಗವನ್ನು ಬಿಟ್ಟು ಅವರು ಬರೆಯಲಾರರು. ಅದರಲ್ಲಿ ಕಂಡು ಬರುವ ಮತ್ತೊಂದು ಪ್ರಕ್ರಿಯೆಯು ಮೂಲಭೂತವಾಗಿ ಅವರ ಚಿಂತನೆಯನ್ನು ಹೇಳುತ್ತದೆ. ಅದು ಮನೋಭಾವದ ಬದಲಾವಣೆಯನ್ನು ಸೂಚಿಸುತ್ತದೆ. ಹಾಗೆ ನೋಡುವುದಿದ್ದರೆ ಕುಮಾರ ವ್ಯಾಸ, ಲಕ್ಷ್ಮೀಶ ಮುಂತಾದವರ ರೀತಿಯಲ್ಲಿ ನವೋದಯದ ಲೇಖಕರು ಬರೆಯುವುದೂ ಇಲ್ಲ. ನವೋದಯದ ಲೇಖಕರ ಮನೋಸ್ಥಿಯು ಬದಲಾಗಿದೆ. ಬೇಂದ್ರೆ ಮತ್ತು ಕುವೆಂಪು ಮುಂತಾದವರ ಬರಹಗಳಲ್ಲಿ ನಿಸರ್ಗವು ನಿಶ್ಚಿತವಾದ ಸಂಗತಿಯನ್ನೂ ಹೇಳುತ್ತದೆ. ದೇವರನ್ನು ನೋಡುವುದು ಅವನನ್ನು ನಿಸರ್ಗದಲ್ಲಿ ಗ್ರಹಿಸುವುದು ಮೂಲಭೂತವಾಗಿ ಕುವೆಂಪುರವರಲ್ಲಿ ಪಾಪ ಪ್ರಜ್ಞೆಗೆ ಕಾರಣವೂ ಆಗುವುದೂ ಇಲ್ಲ. ಅದರ ಮೂಲಕವೇ ಕುವೆಂಪು ಕೆಲವು ಪ್ರಶ್ನೆಗಳನ್ನು ಎತ್ತುತ್ತಾರೆ. ಅವರಿಗೆ ಅದು ಮುಖ್ಯವಾಗುತ್ತದೆ. ತಮ್ಮ ಅನೇಕ ಕವಿತೆಗಳಲ್ಲಿ ಕುವೆಂಪು ನಿಸರ್ಗವನ್ನು ಕುರಿತು ಬರೆದರು. ಅದರಲ್ಲಿ

ಅವರು ಸ್ವತಃ ಶಕ್ತಿಯನ್ನು ಕಂಡರು. ಆದ್ದರಿಂದಲೇ ಅವರ ಕವಿತೆಗಳಲ್ಲಿ ನೈಜತೆ ಅಥವಾ ನಿಸರ್ಗವಾದವು ಅತ್ಯಂತ ಸಂಕೀರ್ಣವೂ ಆಗುತ್ತದೆ. ಇಲ್ಲಿ ನೋಡಬೇಕಾದ ಮತ್ತೊಂದು ಪ್ರಶ್ನೆಯು ಮೂಲಭೂತವಾಗಿ ನಿಸರ್ಗ ಮತ್ತು ಅದರ ವೈರುಧ್ಯವನ್ನು ಹೇಳುತ್ತದೆ. ನಿಸರ್ಗ ಮತ್ತು ಮನುಷ್ಯರು ಹೇಗೆ ಜೊತೆಯಾಗಿ ಬಾಳಬಲ್ಲರು ಎನ್ನುವುದನ್ನೇ ಕುವೆಂಪು ಹೇಳುತ್ತಾರೆ. ಕಾರಂತರು ನಿಸರ್ಗದ ಸಮಾಜವನ್ನು ನೋಡುವುದೂ ಇದೇ ಕಾರಣದಿಂದ. ನಿಸರ್ಗದ ಸಮಾಜಶಾಸ್ತ್ರವೆಂದು ಯಾವುದನ್ನಾದರೂ ಕರೆಯುವುದಿದ್ದರೆ ಅದು ಕಾರಂತರ ಕಾದಂಬರಿಗಳನ್ನೆ ನೋಡಿಹೇಳಬೇಕೆಂದು ಕಾಣುತ್ತದೆ. ಬೇಂದ್ರೆಯವರಲ್ಲಿ ನಿಸರ್ಗವು ಸಹಜವೂ ಹೌದು. ಅದು ಸುಂದರವೂ ಹೌದು. ಆದರೆ ನಿಸರ್ಗವನ್ನು ನೋಡುವುದು ಬೇರೆ ಅದನ್ನು ಬರಹದಲ್ಲಿ ಚಿತ್ರಿಸುವುದು ಬೇರೆ. ಬರಹವನ್ನು ಈ ದೃಷ್ಟಿಯಿಂದ ಹೆಚ್ಚು ದುಡಿಸಿಕೊಳ್ಳಬೇಕಾಗುತ್ತದೆ. ನಿಸರ್ಗವು ಬೇಂದ್ರೆಯವರಲ್ಲಿ ನಮ್ಮ ಕಣ್ಣಿಗೆ ಕಟ್ಟುತ್ತದೆ. ಕುವೆಂಪುರವನ್ನು ಓದಿದಾಗ ನಮಗೆ ಮಲೆನಾಡಿಗೆ ಹೋಗಬೇಕೆಂದು ಅನಿಸುತ್ತದೆ. ಬಾಹ್ಯ ಮತ್ತು ಅಂತರಂಗವೆರಡೂ ಅದರಲ್ಲಿ ಸಮಾನವಾಗಿಯೇ ಮಿಳಿತ ಹೊಂದುತ್ತದೆ. ಸ್ವಂತ ಮತ್ತು ಸಮಾಜವೆರಡೂ ಜೊತೆಯಲ್ಲಿ ಹೋಗುತ್ತವೆ. ಸ್ವಂತಿಕೆಯು ಇದರಲ್ಲಿ ಎದ್ದು ಕಾಣಿಸುತ್ತದೆ. ಬಾಹ್ಯವನ್ನು ಅವರು ಕೇಂದ್ರ ಮಾಡಿದ್ದು ಬೇರೆ ಕಾರಣಕ್ಕಾಗಿಯೂ ಹೌದು. ಸ್ವಂತಿಕೆಯ ಕೆಲಸವು ಬೇರೆ ರೀತಿಯದು ಎಂದು ಅವರು ಭಾವಿಸಿದ್ದರು. ಅವರು ನಿಸರ್ಗವನ್ನು ನೋಡಿದರು ಮತ್ತು ಅದನ್ನು ಸ್ವಂತಿಕೆಯ ಬೆಳಕಿನಲ್ಲಿ ಕಂಡರು. ಅವರು ಮಾಡಿದ ಅನ್ವಯಕ್ಕೆ ಬಹಳ ದೊಡ್ಡ ಶಕ್ತಿಯೂ ಇದೆ. ಅದನ್ನು ಅನ್ವಯ ಎಂದರೂ ಅದರಲ್ಲಿ ಬೇರೆ ನೆಲೆಗಳೂ ಇದ್ದವು. ವ್ಯಕ್ತಿ ಮತ್ತು ಅವನ ಪ್ರಶ್ನೆಗಳು, ಪ್ರದೇಶದ ಪ್ರಶ್ನೆಗಳು, ದೇಶಭಾಷೆಗಳ ಪ್ರಶ್ನೆಗಳು ಹೀಗೆ ಬೇರೆ ಬೇರೆ ಅವತರಿಣಿಕೆಯನ್ನು ಅವುಗಳು ಪಡೆದಿದ್ದವು. ನಿಸರ್ಗವನ್ನು ಅತ್ಯಂತ ವ್ಯಾಮೋಹದಿಂದ ನವೋದಯದವರು ಬರೆದರೂ ಎನ್ನುವುದೂ ಅಷ್ಟೇ ನಿಜ. ಮತ್ತು ಇದರಲ್ಲಿ ಮತ್ತೆ ಹೇಳಬೇಕೆಂದರೆ ಇದರಲ್ಲಿ ವ್ಯಕ್ತವಾಗುವ ಸಂಗತಿಗಳು ಹತ್ತೊಂಬತ್ತನೆಯ ಶತಮಾನದ ಮಹತ್ವದ ಪ್ರಶ್ನೆಗಳೂ ಆಗಿವೆ ಎನ್ನುವುದನ್ನು ಮರೆಯಬಾರದು. ವಸಾಹತುಶಾಹಿ ಮತ್ತು ಪರಿಣಾಮವನ್ನು ಹಾಗೂ ನಿಸರ್ಗವನ್ನು ಒಟ್ಟಿಗೆ ನೋಡುವ ಕ್ರಮವು ಅನನ್ಯವೂ ಆಗಿದೆ. ಅದರಲ್ಲಿ ಇದನ್ನು ನಾವು ಗ್ರಹಿಸಬೇಕಾದ ಅಗತ್ಯವೂ ಇದೆ. ನಿಸರ್ಗವನ್ನು ಒಂದು ದೃಶ್ಯವಾಗಿ ಕಾಣುವ ಕ್ರಮವು ಕೂಡಾ ಅತ್ಯಂತ ಮಹತ್ವದ್ದು ಆಗಿದೆ. ಕಣ್ಣಿಗೆ ಕಾಣುವ ಸತ್ಯ ಮತ್ತು ಅದರ ಸ್ವರೂಪದಾಳದಲ್ಲಿ ಇರುವ ಶಿವ ಹಾಗೂ ಸುಂದರತೆಯು ಮಹತ್ವದ್ದೂ ಆಗಿದೆ. ಲೇಖಕರು ಸತ್ಯಂ, ಶಿವಂ, ಸುಂದರಂ ಎನ್ನುವುದನ್ನು ಮಹತ್ವದ

ತತ್ವವಾಗಿಯೂ ಕಾಣುತ್ತಾರೆ. ಮಾತಿನಲ್ಲಿ ಕೆಲವೆಡೆಗೆ ಬರುವ ನಾಟಕೀಯತೆಯೂ ಈ ದೃಷ್ಟಿಯಿಂದ ಅತ್ಯಂತ ಮಹತ್ವದ್ದು. ಕಾರಂತರು ಕಾದಂಬರಿಗಳಲ್ಲಿ ಕಾಣುವ ವಿವರಗಳು ಮತ್ತೊಂದು ಬಗೆಯವು. ಅವರು ಅದನ್ನು ನೋಡುವುದು ಒಂದು ಆಂತರಿಕವಾದ ಹಿನ್ನೆಲೆಯಲ್ಲಿ. ವ್ಯಕ್ತಿ ಮತ್ತು ನಿಸರ್ಗವನ್ನು ಕಾರಂತರು ದ್ವಂದ್ವಾತ್ಮಕವಾದ ಕ್ರಮದಲ್ಲಿಯೂ ನೋಡುತ್ತಾರೆ. ನಿಸರ್ಗ ಮತ್ತು ಮತ್ತು ಅದರ ಅಂತರಂಗವು ಅವರಿಗೆ ಹೆಚ್ಚು ಮುಖ್ಯ. ವ್ಯಕ್ತಿಯು ನಿಸರ್ಗವನ್ನು ನೋಡುವ ಮತ್ತು ಗ್ರಹಿಸುವ ಕ್ರಮಗಳು ಕಾರಂತರಿಗೆ ಹೆಚ್ಚು ಮುಖ್ಯ. ಈ ದೃಷ್ಟಿಯಿಂದ ಕಾರಂತರ ಬೆಟ್ಟದ ಜೀವ ಮತ್ತು ಕುಡಿಯರ ಕೂಸು ಕಾದಂಬರಿಗಳಲ್ಲಿ ನಿಸರ್ಗವು ಅತ್ಯಂತ ಮಹತ್ವದ್ದೂ ಆಗಿದೆ. ಬೆಟ್ಟದ ಜೀವದಲ್ಲಿ ವ್ಯಕ್ತಿ ಮತ್ತು ಅವನ ಭಾವನೆಗಳಿಗೆ ವಿಶೇಷವಾದ ಅರ್ಥವೂ ಇದೆ. ಕುಡಿಯರ ಕೂಸು ಮತ್ತು ಬೆಟ್ಟದಜೀವ ಕಾದಂಬರಿಗಳಲ್ಲಿ ಕೃಷಿಗೆ ಕಾಡು ಪರಿವರ್ತನೆಯೂ ಆಗುತ್ತದೆ. ಅಂದರೆ ಅದರಲ್ಲಿ ವ್ಯಕ್ತಿ ಮತ್ತು ಆಹಾರ ಹಾಗೂ ಅವನ ಆರ್ಥಿಕತೆಯು ಅತ್ಯಂತ ಮಹತ್ವದ್ದೂ ಹೌದು. ನಿಸರ್ಗ, ವಾಸ್ತವ, ಮನುಷ್ಯ ಹಾಗೂ ಅವನ ಸಂಸ್ಕೃತಿಗಳು ಅತ್ಯಂತ ಮಹತ್ವದ ಪಾತ್ರವನ್ನು ವಹಿಸುತ್ತವೆ. ನಿಸರ್ಗದ ನಡುವೆ ವ್ಯಕ್ತಿಯು ತನ್ನ ಪಾಡಿಗೆ ನಿಸರ್ಗದ ಮಡಿಲಿನಲ್ಲಿ ಸುಖವನ್ನು ಅನುಭವಿಸಬಲ್ಲ. ನಿಸರ್ಗಕ್ಕೆ ಯಾವದೇ ರೀತಿಯಲ್ಲಿ ಯಾವುದೇ ಕೀಲಿಕೈ ಇಲ್ಲವೆನ್ನುವುದು ಇಲ್ಲಿಯ ಮುಖ್ಯವಾದ ತತ್ವ ಕುವೆಂಪು ಕಾವ್ಯದಲ್ಲಿ ಹೇಳುವ ಹಕ್ಕಿಗಳು, ಹಣ್ಣುಗಳು, ಮರಗಳು ಆಕಸ್ಮಿಕವೂ ಅಲ್ಲ. ಅದಕ್ಕೆ ಅವರ ಕವಿತೆಗಳಲ್ಲಿ ಹೆಚ್ಚು ಒತ್ತು ಇದೆ. ಅದರಲ್ಲಿ ಅತ್ಯಂತ ಮಹತ್ವದ ಸಂಗತಿಗಳು ಇವೆ. ಕಾರಂತರ ನಿಸರ್ಗದ ಪ್ರಜ್ಞೆಯು ಕುವೆಂಪುರವರ ಕವಿತೆಗಳಲ್ಲಿ ಬರುವ ನಿಸರ್ಗದ ಪ್ರಜ್ಞೆಗಿಂತ ಭಿನ್ನವಾಗಿದೆ. ನಿಸರ್ಗವು ಈ ದೃಷ್ಟಿಯಿಂದ ಅತ್ಯಂತ ಮಹತ್ವದ್ದಾಗುವುದು .ಹಾಗೆ ನೋಡುವುದಿದ್ದರೆ ಕನ್ನಡದ ಕಾವ್ಯದಲ್ಲಿ ನವೋದಯಕ್ಕಿಂತ ಪೂರ್ವದಲ್ಲಿ ಇಂಥ ದಟ್ಟವಾದ ನಿಸರ್ಗವನ್ನು ನಾವು ನೋಡುವುದೂ ಇಲ್ಲ. ಕಾರಂತರು ಹೇಳುವ ನಿಸರ್ಗದಲ್ಲಿ ಮತ್ತೊಂದು ಅಂಶವನ್ನು ಕಾಣುತ್ತೇವೆ. ಅದು ನಿಸರ್ಗವನ್ನು ಧರ್ಮವನ್ನು ಒಟ್ಟಿಗೆ ಕಾಣುತ್ತದೆ. ಕುವೆಂಪು ಕಾದಂಬರಿಗಳಲ್ಲಿ ನಿಸರ್ಗದ ವಿವಿಧ ಕ್ರಿಯೆಗಳನ್ನು ನಾವು ಕಾಣಬಹುದು. ವ್ಯಕ್ತಿ ಮತ್ತು ಅವನ ಹೊಸ ಮಾದರಿಯ ಚಟುವಟಿಕೆಯು ನವೋದಯದಲ್ಲಿ ಎದ್ದುಕಾಣುತ್ತದೆ. ನಿಸರ್ಗದ ಎದುರು ವ್ಯಕ್ತಿಗಳು ವ್ಯಾಖ್ಯೆಗೆ ಗುರಿಯಾಗುತ್ತಾರೆ. ನಿಸರ್ಗವನ್ನು ವ್ಯಕ್ತಿಯು ನೋಡುವುದು ಮತ್ತು ಅದನ್ನು ಗ್ರಹಿಸುವುದು ಬಹಳ ಮುಖ್ಯವಾಗುತ್ತದೆ. ಈ ಅರ್ಥದಲ್ಲಿ ಒಂದು ಅಥೆಂಟಿಸಿಟಿಯು ವ್ಯಕ್ತವಾಗುತ್ತದೆ. ನಿಸರ್ಗದ ಶಬ್ದಚಿತ್ರವು ಕುವೆಂಪುಗೆ ಹೆಚ್ಚು ಅಗತ್ಯವಾಗುತ್ತದೆ. ಮಲೆನಾಡನ್ನು ಅವರು ಹೆಚ್ಚು

ಸಂಯೋಜನೆಯನ್ನು ಮಾಡುತ್ತಾರೆ. ಅವರು ಹೇಳುವುದು ಮತ್ತು ಅವರು ಗ್ರಹಿಸುವುದು ಕನ್ನಡಕ್ಕೆ ಆಗ ಹೆಚ್ಚು ಅಗತ್ಯವಾಗಿತ್ತು. ನಿಸರ್ಗವನ್ನು ಹೆಚ್ಚು ವಿವರಿಸುವ ಪಂಜೆಯವರು ಮತ್ತೊಂದು ಮಾದರಿಯನ್ನು ನಮ್ಮ ಮುಂದೆ ಇಡುತ್ತಾರೆ. ಮಲೆನಾಡನ್ನು ಅನ್ವಯಿಸುವ ಕುವೆಂಪು ಅದನ್ನು ನಮಗೆ ವಿವರಣಾತ್ಮಕವಾಗಿಯೂ ನೀಡುತ್ತಾರೆ. ಕಾರಂತರು ಬಳಸುವ ಭಾಷೆ ಮತ್ತು ಅದರ ಸ್ಥಳಕ್ಕೆ ಸಂಬಂಧವಿದೆ. ಅದನ್ನು ನೋಡುವಾಗ ಆ ಪ್ರದೇಶಗಳು ಬದಲಾಗುತ್ತವೆ. ಆದರೆ ಬೇಂದ್ರೆ ಪ್ರದೇಶ ಮತ್ತು ಭಾಷೆಯನ್ನು ನೋಡುವಾಗ ಹೆಚ್ಚು ಸೆಕ್ಯುಲರ್ ಆಗುತ್ತಾರೆ. ನವೋದಯದಲ್ಲಿ ಒಂದು ಅನುಭವ ಕೇಂದ್ರಿತವಾದ ಜಗತ್ತು ಇದೆ. ಮತ್ತೊಂದು ಅವರ ಸೃಜನಾತ್ಮಕವಾಗಿ ಕಟ್ಟಿದ ಜಗತ್ತು ಇದೆ. ಮತ್ತು ನವೋದಯದ ಕವಿಗಳು ನಿಸರ್ಗಕ್ಕೆ ಅತ್ಯಂತ ಹೆಚ್ಚು ಗೌರವವನ್ನು ಕೊಡುತ್ತಾರೆ. ಆದರೆ ಮಲೆನಾಡನ್ನು ಅನಂತಮೂರ್ತಿಯವರು ನೋಡುವಾಗ ಅದರ ಕ್ರಮವು ಬೇರೆಯಾಗುತ್ತದೆ. ಅದಕ್ಕೆ ಒಂದು ಸಾಂಕೇತಿಕವಾದ ಅನನ್ಯತೆಯು ಬರುತ್ತದೆ. ವ್ಯಕ್ತಿ ಮತ್ತು ಅವನ ಶಕ್ತಿಯು ಬೇರೆ ರೀತಿಯಲ್ಲಿ ವ್ಯಕ್ತವಾಗುತ್ತದೆ. ವ್ಯಕ್ತಿಯನ್ನು ಕಾರಂತರು ನೋಡುವ ಕ್ರಮಕ್ಕೂ ಅನಂತಮೂರ್ತಿಯವರು ನೋಡುವ ಕ್ರಮಕ್ಕೂ ವ್ಯತ್ಯಾಸವಿದೆ. ಹಾಗೆ ನೋಡುವುದಿದ್ದರೆ ನವ್ಯದಲ್ಲಿ ವ್ಯಂಗ್ಯ ಮತ್ತು ಅದರ ಪರಿಣಾಮಗಳು ಬೇರೆಯಾಗುತ್ತವೆ. ವ್ಯಂಗ್ಯವು ನವ್ಯದಲ್ಲಿ ಹೊಸ ಅರ್ಥವನ್ನು ಕೊಡುತ್ತವೆ. ಅದರಲ್ಲಿ ವಿರೋಧಾಭಾಸಗಳು ಬೇರೆಯಾಗುತ್ತವೆ. ವ್ಯಂಗ್ಯವನ್ನು ನವ್ಯರು ಬಳಸಿಕೊಂಡ ಕ್ರಮವು ಬೇರೆಯಾಗಿದೆ. ನವ್ಯರು ಬಳಸಿಕೊಂಡ ವ್ಯಂಗ್ಯಕ್ಕೆ ಅತ್ಯಂತ ಹೆಚ್ಚಿನ ಪ್ರಾಶಸ್ತ್ಯವಿದೆ. ಅದಕ್ಕೆ ಬಹಳ ದೊಡ್ಡದಾದ ಚಾರಿತ್ರಿಕವಾದ ಹಿನ್ನೆಲೆಯೂ ಇದೆ. ವ್ಯಂಗ್ಯವನ್ನು ಅವರು ಒತ್ತುಕೊಟ್ಟು ನೋಡಿದರು. ಸಂಕೇತವನ್ನು ಮತ್ತು ಅದರ ಚಿಹ್ನೆಯನ್ನು ಗ್ರಹಿಸಿದ ಕ್ರಮವು ಬೇರೆಯಾಗಿದೆ. ಸಂಕೇತ ಮತ್ತು ಅದರ ಪರಿಣಾಮವೂ ಬೇರೆಯಾಗಿದೆ. ಹೇಳುವುದು ಒಂದು ಆಗುವುದು ಮತ್ತೊಂದು ಎನ್ನುವುನ್ನು ವ್ಯಂಗ್ಯವು ಹೇಳುತ್ತದೆ. ಆದರೆ ಅದರ ಅರ್ಥವೂ ಬೆರೆಯಾಗುತ್ತದೆ. ನಿಷೇಧಾತ್ಮಕವಾದ ಸಂಗತಿಗಳೂ ಕೂಡಾ ಹೊಸದಾದ ಅರ್ಥವನ್ನು ವಿವರಿಸುತ್ತದೆ. ಅಡಿಗರ ಪ್ರಾರ್ಥನೆ ಕವಿತೆಯಲ್ಲಿ ಬರುವ ಹೊಗಳು ಭಟ್ಟ ಖಂಡಿತಾ ನಾನಲ್ಲ ಎನ್ನುವ ಮಾತಿಗೆ ಇರುವ ವಿಶೇಷವಾದ ಮಹತ್ವವನ್ನು ಇಲ್ಲಿ ಗಮನಿಸಬೇಕಾಗುತ್ತದೆ. ಸಂಕೇತ ಮತ್ತು ಅದರ ಅರ್ಥವು ಬೇರೆಯಾಗುತ್ತದೆ. ಸಂಕೇತ ಮತ್ತು ಅದರ ಧ್ವನಿಯೂ ಅದರಲ್ಲಿ ಭಿನ್ನವಾಗುತ್ತದೆ. ಭೂಮಿಗೀತದಲ್ಲಿ ಸಂಕೇತವು ಬಿಡಿಯಾಗುತ್ತವೆ. ಪ್ರಾರ್ಥನೆಯಲ್ಲಿ ಬಯ್ಯುವುದರ ಮೂಲಕ ಹೊಗಳುವುದು ಮತ್ತು ಹೊಗಳುವುದರ ಮೂಲಕ ಬಯ್ಯವುದು ಬೇರೆ ಅರ್ಥವನ್ನೂ ಹೊರಡಿಸುತ್ತವೆ. ನವ್ಯದ ಒಂದು

ವಿಶಿಷ್ಟವಾದ ಕವಿತೆಯೂ ಹೌದು. ಅದು ಬರೀ ಒಂದು ನೋಟವನ್ನು ಮಾತ್ರವೇ ಕೊಡುತ್ತಿಲ್ಲ. ಅದರಲ್ಲಿ ವ್ಯಕ್ತಿಯ ಪ್ರಶ್ನೆಗಳು ಇವೆ. ಅದೇ ರೀತಿಯಲ್ಲಿ ಪರಂಗಿಯವರ ಪ್ರಶ್ನೆಗಳೂ ಇವೆ. ಅಡಿಗರ ಮತ್ತೊಂದು ಅತ್ಯಂತ ಸುಪ್ರಸಿದ್ಧವಾದ ಕವಿತೆಯನ್ನು ಇಲ್ಲಿ ಗಮನಿಸಬಹುದು. ಅವರು ಭೂಮಿಗೀತವನ್ನು ಅತ್ಯಂತ ವಿಶಿಷ್ಟವಾಗಿಯೇ ಬರೆದರು. ಅದರಲ್ಲಿ ನಿಸರ್ಗವಿದೆ. ಭೂಮಿಯಿದೆ. ಕಡಲೂ ಇದೆ. ಆದರೆ ಆ ಯಾವ ಸಂಗತಿಯೂ ಮೂಲಭೂತವಾಗಿ ನವೋದಯದವರು ಹೇಳಿದ ರೀತಿಯಲ್ಲಿ ಇಲ್ಲ. ನಿಸರ್ಗವನ್ನು ಅಡಿಗರು ವೈಭವೀಕರಿಸುವುದೂ ಇಲ್ಲ. ಅವರಿಗೆ ನಿಸರ್ಗದ ವ್ಯಾಮೋಹವೂ ಇಲ್ಲ. ಅದರಲ್ಲಿ ನಿಸರ್ಗವೇ ಭಿನ್ನವಾಗಿದೆ. ಅದನ್ನು ಅಡಿಗರು ನೋಡುವ ಮತ್ತು ಗಮನಿಸುವ ವಿಧಾನವೂ ಬೇರೆ ರೀತಿಯದೂ ಹೌದು. ವ್ಯಕ್ತಿ ಮತ್ತು ನಿಸರ್ಗದ ಸಂಬಂಧವನ್ನು ಒಂದು ಸಾರ ರೂಪವಾಗಿ ಅವರು ನೋಡುವುದೂ ಇಲ್ಲ. ನಿಸರ್ಗ ಮತ್ತು ಮನುಷ್ಯನಿಗೆ ನಡುವೆ ಸಂಘರ್ಷವೂ ಇದೆ. ಅದು ಮಹತ್ತ್ವದ್ದೂ ಹೌದು. ನವೋದಯವು ನಿಸರ್ಗವನ್ನು ನೋಡಿದ್ದು ಹೊಸದಾದ ಬೆಳಕಿನಲ್ಲಿ. ಅದು ಹತ್ತೊಂಬತ್ತನೆಯ ಶತಮಾನವನ್ನು ಸೂಚಿಸುತ್ತದೆ. ಯಾವುದನ್ನು ನವೋದಯಪವರು ಹೇಳಿಕೊಂಡರೋ ಅದನ್ನು ನವ್ಯರು ಒಪ್ಪಲಿಲ್ಲ. ಅವರಿಗೆ ಅದರಲ್ಲಿ ಭಿನ್ನಾಭಿಪ್ರಾಯವೂ ಇತ್ತು. ಮತ್ತು ಅದನ್ನು ನೋಡವಾಗ ನವ್ಯರಿಗೆ ವ್ಯಕ್ತಿ ಮತ್ತು ಅವನ ಅನುಭವ ಮಾತ್ರವೇ ಮುಖ್ಯವಾಯಿತು. ನವ್ಯರು ಹೇಳಿದ ವಿವರಗಳು ಮೂಲಭೂತವಾಗಿಯೇ ಬೇರೆಯಾಗಿದೆ. ನಿಸರ್ಗದ ವಿವಿಧ ಬಣ್ಣಗಳು; ಅದರ ದೃಶ್ಯಾವಳಿಗಳು ಕುವೆಂಪುಗೆ ಹೆಚ್ಚು ಮುಖ್ಯವಾಗುತ್ತದೆ. ದೃಶ್ಯ ಮತ್ತುಅದರ ವಿವರಣೆಯನ್ನು ನವೋದಯದ ಕವಿಗಳು ಹೆಚ್ಚು ಬಣ್ಣಿಸುತ್ತಾರೆ. ಅವರು ಅದನ್ನು ಕಲ್ಪನೆಯ ಮೂಲಕವೇ ಹೇಳುತ್ತಾರೆ. ವ್ಯಕ್ತಿ ಮತ್ತು ಅವನ ಕಲ್ಪನೆಯ ಸಾಮರ್ಥ್ಯವು ನವೋದಯದಲ್ಲಿ ಹೆಚ್ಚು ಮುಖ್ಯವಾಗುತ್ತದೆ. ನಾಟಕೀಯತೆಯೂ ಜೊತೆಗೆ ಇರುವುದರಿಂದ ಅದರ ಅರ್ಥವು ಬೇರೆಯಾಗುತ್ತದೆ. ಅದನ್ನು ನಾವು ಅವರ ಕವಿತೆಗಳಲ್ಲಿ ಕಾಣಬಹುದು. ಕಾರಂತರ ಕಾದಂಬರಿಗಳಲ್ಲಿ ಮತ್ತೆ ಕೆಲವು ವಿಷಯಗಳು ನಮ್ಮ ಗಮನಕ್ಕೆ ಬರುತ್ತವೆ. ಅವರಲ್ಲಿ ನಿಸರ್ಗವು ಆಂತರಿಕವಾದ ಒಂದು ಶಕ್ತಿಯೂ ಆಗುತ್ತದೆ. ವ್ಯಕ್ತಿಯು ನಿಸರ್ಗವನ್ನು ಅರ್ಥ ಮಾಡಿಕೊಳ್ಳುವ ಕ್ರಮಗಳು ಕಾರಂತರಲ್ಲಿ ಬೇರೆಯಾಗುತ್ತವೆ. ವಾಸ್ತವವಾಗಿ ಕಾರಂತರು ನಿಸರ್ಗವನ್ನು ನೋಡುವುದು ವೀಕ್ಷಕನ ರೀತಿಯಲ್ಲಿಯೇ ಎನ್ನುವುದೂ ಇಲ್ಲಿ ಗಮನಾರ್ಹವಾಗಿದೆ. ಮತ್ತು ಅದನ್ನು ವ್ಯಕ್ತಿಯು ಹೇಗೆ ಕಾಣುತ್ತಾನೆ ಎನ್ನುವುದೇ ಕಾರಂತರಿಗೆ ಹೆಚ್ಚು ಮುಖ್ಯ. ಅವರ ಬೆಟ್ಟದ ಜೀವ ಕಾದಂಬರಿಯಲ್ಲಿ ಅತ್ಯಂತ ಸಮೃದ್ಧವಾದ ಒಂದು ನಿಸರ್ಗವು ಇದೆ. ಅದರೊಂದಿಗೆ ಮನುಷ್ಯನ ಭಾವನೆಗಳೂ

ಇವೆ. ಕೃಷಿಗಾಗಿ ವ್ಯಕ್ತಿಯು ನಿಸರ್ಗವನ್ನು ತನಗೆ ಬೇಕಾದ ರೀತಿಯಲ್ಲಿ ಪರಿವರ್ತಿಸುತ್ತಾನೆ. ಪರಿವರ್ತನೆಯು ಉದ್ದೇಶಿತವೂ ಹೌದು. ಅದರಲ್ಲಿ ಕಾರಣವಿದೆ. ಹಾಗೆ ನೋಡುವುದಿದ್ದರೆ ಯಾವುದೇ ಕಾರಣವೂ ಇಲ್ಲದೆ ವ್ಯಕ್ತಿಯು ಯಾವುದೇ ಹೊಸರಚನೆಯನ್ನು ಮಾಡಲಾರ. ನಿಸರ್ಗ ಮತ್ತು ವಾಸ್ತವ, ನಿಸರ್ಗ ಮತ್ತು ವ್ಯಕ್ತಿಗಳ ನಡುವೆ ಅನೇಕ ದ್ವಂದ್ವಗಳಿವೆ. ಆದರೆ ನಿಸರ್ಗವನ್ನು ಬರಹದ ವ್ಯಂಗ್ಯಕ್ಕಾಗಿಯೇ ಅವರು ಬಳಸಿಲ್ಲ. ಆದರೆ ನವ್ಯದಲ್ಲಿ ಯಾವುದು ವ್ಯಂಗ್ಯವೆಂದು ಅನಿಸಿತೋ ಅದರ ಅರ್ಥವು ವಿಶಾಲವೂ ಆಯಿತು. ವ್ಯಂಗ್ಯವು ಕೃತಿಯಲ್ಲಿ ಅತ್ಯಂತ ವಿಶಾಲವಾದ ಅರ್ಥವನ್ನು ಪಡೆದದ್ದು ನವ್ಯದಲ್ಲಿಯೇ. ಸಂಕೇತ ಮತ್ತು ಅದರ ಅರ್ಥದ ಸ್ವರೂಪವನ್ನು ಅವರು ಬದಲಿಸಿದರು. ಆದ್ದರಿಂದ ನಿಸರ್ಗ ಮತ್ತು ಮನುಷ್ಯರ ನಡುವಣ ಸಂಬಂಧಕ್ಕೆ ಅತ್ಯಂತ ಭಿನ್ನವಾದ ಒಂದು ಚೌಕಟ್ಟನ್ನು ನವ್ಯರು ಕೊಟ್ಟರು. ಸಮಕೇತ ಮತ್ತು ಅದರ ಸ್ವರೂಪವನ್ನು ಬದಲಿಸಿ ಅದಕ್ಕೆ ಹೊಸದಾದ ಅರ್ಥವನ್ನು ಅವರು ಕೊಟ್ಟರು ಮಾತ್ರವೇ ಅಲ್ಲದೆ ಅದರಲ್ಲಿ ಭಿನ್ನತೆಯನ್ನು ಸ್ಥಾಪಿಸಿದರು. ಕಾದಂಬರುಗಳಲ್ಲಿಯೂ ನಾವು ಇದನ್ನು ಕಾಣುತ್ತೇವೆ. ಸಂಸ್ಕಾರ ಕಾದಂಬರಿಯಲ್ಲಿ ಒಂದು ವ್ಯಂಗ್ಯವಿದೆ. ಅದು ಅದರ ಸಂವಿಧಾನದಲ್ಲಿ ಮತ್ತು ಅದರ ವಸ್ತುವಿನಲ್ಲಿ ಕಾಣುತ್ತೇವೆ. ಅಂದರೆ ಸಂಸ್ಕಾರದಲ್ಲಿ ಪ್ರಾಣೇಶಾಚಾರ್ಯ ಮತ್ತು ಅವರ ಸಂಸ್ಕಾರವು ಒಂದು ಬಗೆಯದು. ನಾರಣಪ್ಪ ಮತ್ತು ಅವನ ನಿಲುವು ಬೇರೆ ಬಗೆಯದು. ಅದರಲ್ಲಿ ವ್ಯತ್ಯಾಸವಿದೆ. ಅದು ವ್ಯಂಗ್ಯವೂ ಹೌದು. ಸಂಸ್ಕಾರಕ್ಕೆ ಒಂದು ವಿಶಿಷ್ಟತೆಯು ಬರುತ್ತದೆ. ಅದನ್ನು ಅನಂತಮೂರ್ತಿಯವರು ಹೇಳುತ್ತಾರೆ. ಅವರಿಗೆ ಅದು ಮುಖ್ಯವಾದ್ದೂ ಹೌದು. ಕಾದಂಬರಿ ಮತ್ತು ಅದರ ನಿರೂಪಣೆಯಲ್ಲಿಯೂ ನಾವು ಅದನ್ನು ಕಾಣಬಹುದು. ವಾಸ್ತವವಾಗಿ ಅನಂತಮೂರ್ತಿ, ಲಂಕೇಶ್, ದೇಸಾಯಿ, ಚಿತ್ತಾಲರು ರೂಪಿಸದ ಹಾದಿಯೇ ಅತ್ಯಂತ ವಿಶಿಷ್ಟವಾದದ್ದು. ವಾಸ್ತವವಾಗಿ ನವ್ಯತೆಯ ನಿಸರ್ಗವನ್ನು ನೋಡುವುದು ಮತ್ತು ಗ್ರಹಿಸುವುದು ಭಿನ್ನವಾದ ಒಂದು ಕ್ರಮದಲ್ಲಿ. ಸಂಸ್ಕಾರ ಕಾದಂಬರಿಯು ಅತ್ಯಂತ ಮಹತ್ವದ ಚರ್ಚೆಯನ್ನು ಎತ್ತಿಕೊಡಿದೆ. ಮತ್ತು ಅದರಲ್ಲಿ ಅವರು ಮನುಷ್ಯ ಮತ್ತು ಅವನ ಜೀವನದ ಹುಡುಕಾಟವನ್ನು ನೋಡಿದ ಕ್ರಮಗಳು ಬೇರೆಯಾಗಿದೆ. ಸಂಸ್ಕಾರ ಕಾದಂಬರಿಯು ಕನ್ನಡದಲ್ಲಿ ಅತ್ಯಂತ ಮಹತ್ವದ ತಿರುವನ್ನು ಸೂಚಿಸುತ್ತದೆ. ಈ ಮಾತು ಶಿಕಾರಿ, ಮುಕ್ತಿ ಕಾದಂಬರಿಗಳಿಗೂ ಅನ್ವಯವಾಗುತ್ತವೆ. ಮನುಷ್ಯ ಮತ್ತು ಅವನ ಅಸ್ತಿತ್ವದ ಪ್ರಶ್ನೆಗಳನ್ನು ಮತ್ತು ಅದರ ಅರ್ಥದ ಹುಡುಕಾಟವನ್ನು ಕಾರ್ನಾಡರು ಮತ್ತು ದೇಸಾಯಿಯವರು ತಮ್ಮ ಕೃತಿಗಳಲ್ಲಿ ನಡೆಸಿದರು. ಅರ್ಥವು ಇಲ್ಲದೆಯೂ ಜೀವನವು ಇರಬಹುದೇ ಇಲ್ಲವೇ ಎಂದು ಹುಡುಕಿದರು. ಅವರ

ಪ್ರಕಾರ ಅದು ಮಹತ್ವದ ಪ್ರಶ್ನೆಯೂ ಆಗಿತ್ತು. ನಾವು ಮಾಡುವ ಕೆಲಸ ಮತ್ತು ಅದರ ಅರ್ಥವನ್ನು ಅವರು ಶೋಧಿಸಿದ ಕ್ರಮವು ಭಿನ್ನವಾಗಿತ್ತು. ಜೀವನ ಮತ್ತು ಅದರ ಅರ್ಥವನ್ನು ಕಾರ್ನಾಡರ ತುಘಲಕ್ ನಾಟಕವು ಎತ್ತಿಕೊಳ್ಳುವ ಕ್ರಮವು ಬೇರೆ. ಅರ್ಥವಿಲ್ಲದೆಯೂ ಜೀವನವು ಇರಬಹುದೇ; ಇಲ್ಲದಿರಬಹುದೇ ಎನ್ನುವುದು ಮೂಲಭೂತವಾದ ಪ್ರಶ್ನೆ. ವಾಸ್ತವವಾಗಿ ತುಘಲಕ್ ಮತ್ತು ಅವನ ಕ್ರಿಯೆಗಳಲ್ಲಿ ಬೇರೆ ಬೇರೆ ವ್ಯಂಗ್ಯಗಳೂ ಇವೆ. ಕ್ರಿಯೆ ಮತ್ತು ಅದರ ಅರ್ಥ ಹೀನತೆಯನ್ನು ಅದು ಮುಖ್ಯವಾಗಿ ಎತ್ತಿಕೊಳ್ಳುತ್ತದೆ. ಹಾಗಿದ್ದರೆ ಈ ಪ್ರಶ್ನೆಗಳು ಯಾಕೆ ಬಂದವು ಎನ್ನುವುದೂ ಬಹಳ ಮುಖ್ಯ. ಇದರ ಮೊದಲ ಕಾರಣವೂ ಸ್ಪಷ್ಟವಾಗಿದೆ. ವಸಾಹತೋತ್ತರಕಾಲದ ಅನೇಕ ಪ್ರಶ್ನೆಗಳು ನಮ್ಮ ಲೇಖಕರನ್ನು ಕಾಡಿದ್ದು ಸ್ಪಷ್ಟವಾಗಿದೆ. ಹೊಸರೀತಿಯ ವ್ಯಕ್ತಿಗಳು ಮತ್ತು ಅವರ ಸಂಬಂಧಗಳ ನಿರೂಪಣೆಯೆ ಬಹಳ ಮುಖ್ಯವಾದವು. ಕ್ಷಿತಿಜ ಕತೆಯಲ್ಲಿ ಬರುವ ಪ್ರಶ್ನೆಗಳು ಈ ಮಾದರಿಯವೂ ಹೌದು. ಅದರಲ್ಲಿ ಜೀವನ ಮತ್ತು ಅದರ ದೃಷ್ಟಿಕೋನವು ವಿಶಿಷ್ಟವಾದ ಚರ್ಚೆಗೆ ಗುರಿಯಾಗುತ್ತದೆ. ಆದರೆ ಆ ಕತೆಯಲ್ಲಿ ಬರುವ ಸಂಘರ್ಷವು ಮತ್ತೊಂದು ದೃಷ್ಟಿಕೋನದಲ್ಲಿ ಪೂರ್ವ ಮತ್ತು ಪಶ್ಚಿಮವನ್ನು ಹೇಳುತ್ತದೆ. ಈ ಮಾದರಿಯ ಪ್ರಶ್ನೆಯು ಅನಂತಮೂರ್ತಿಯವರ ಘಟಶ್ರಾದ್ಧದಲ್ಲಿಯೂ ಬರುತ್ತದೆ. ವೈಚಾರಿಕತೆ ಮತ್ತು ಅದರ ಸಂಘರ್ಷವೇ ಇವುಗಳಲ್ಲಿ ಮುಖ್ಯ. ನಮ್ಮ ಆಧುನಿಕತೆಯ ಪ್ರಶ್ನೆಯು ಎಷ್ಟು ಸಂಕೀರ್ಣವಾಗಿದೆ ಎಂದು ಅವುಗಳು ಹೇಳುತ್ತವೆ. ಮನುಷ್ಯ ಮತ್ತು ಅವನ ಮನೋಸಮಸ್ಯೆಯು ಹೇಗೆ ವ್ಯಕ್ತವಾಗುತ್ತವೆ ಎನ್ನುವುದನ್ನು ಈ ಕತೆಗಳು ನಮಗೆ ಸಾಬೀತು ಮಾಡುತ್ತವೆ. ಕ್ರಿಯೆ ಮತ್ತು ಅದರ ಸಾಧ್ಯತೆ ಮತ್ತು ಕ್ರಿಯೆ ಹಾಗೂ ಅದರ ಅರ್ಥಹೀನತೆಗಳ ನಡುವೆ ಬೇರೆ ಬೇರೆ ವಾಗ್ವಾದವನ್ನು ಇವುಗಳು ಎತ್ತಿಕೊಳ್ಳುತ್ತವೆ. ಪರೋಕ್ಷವಾಗಿ ಇವುಗಳು ನಮ್ಮ ಚಾರಿತ್ರಿಕ ಬೆಳವಣಿಗೆಯನ್ನೇ ಹೇಳುತ್ತವೆ. ಒಂದು ಸಮೂಹದಲ್ಲಿ ಏನು ಮಾರ್ಪಾಡು ಆಗುತ್ತದೆಯೋ ಅದನ್ನು ನೋಡುವುದು ಮತ್ತು ಗ್ರಹಿಸಿಕೊಳ್ಳುವುದರಲ್ಲಿ ಉಂಟಾಗುವ ವ್ಯತ್ಯಾಸವನ್ನು ನವ್ಯರು ಹಿಡಿದಿಡಲು ಯತ್ನವನ್ನು ಮಾಡಿದರು. ಅದರಲ್ಲಿ ಮನುಷ್ಯ ಮತ್ತು ಅವನ ಸಾಧ್ಯತೆ ಮತ್ತು ಅವನ ದೌರ್ಬಲ್ಯವು ಎದ್ದುಕಾಣುತ್ತದೆ. ಅಂದರೆ ವ್ಯಕ್ತಿಯು ಕೆಲವನ್ನು ಜಯಿಸಲಾರ. ಅವನಗೆ ಅವನದೇ ಆದ ಕೆಲವು ಮಿತಿಗಳು ಇವೆ. ಅವನು ಸಂಕೋಚ ಪಡುತ್ತಾನೆ. ಅವನಿಗೆ ಒಂಟಿತನದ ದುಃಖವಿದೆ. ಅವನು ಕಾಮವನ್ನು ನಿಗ್ರಹಿಸಲಾರ. ಅವನಿಗೆ ಹೆಚ್ಚು ನಿರಾಶೆಯೂ ಇದೆ. ಈ ಎಲ್ಲಾ ಸಂಗತಿಗಳನ್ನು ನವ್ಯರು ಹೇಳುತ್ತಾರೆ. ಆದರ್ಶ ವ್ಯಕ್ತಿಯ ಪ್ರಶ್ನೆಯು ನವ್ಯಕ್ಕೆ ಮುಖ್ಯವಲ್ಲ. ಆದರೆ ಈ ಪ್ರಶ್ನೆಗಳನ್ನು ನಾವು ಒಂದು ಮನೋಸ್ಥಿತಿಯೆಂದು ಹೇಳಬೇಕಾಗುತ್ತದೆ. ಇದನ್ನು

ನಾವು ಎಲ್ಲಾ ವ್ಯಕ್ತಿಗಳಲ್ಲಿ ನೋಡಲು ಸಾಧ್ಯವೂ ಆಗುವುದೂ ಇಲ್ಲ. ಪಲಾಯನವಾದವನ್ನು ನಾವು ಗತಿಸ್ಥಿತಿಯಲ್ಲಿ ಕಾಣುತ್ತೇವೆ. ಅದನ್ನು ನಾವು ಸಹಜವೆಂದು ಹೇಳಲು ಬರುವುದೂ ಇಲ್ಲ. ನಾವು ಒಂದು ಊರನ್ನು ತೆಗೆದುಕೊಂಡರೆ ಏನಾಗುತ್ತದೆ. ಮತ್ತು ಅದರಲ್ಲಿ ಏನೇನು ಇರುತ್ತದೆ, ವಸಾಹತೋತ್ತರ ಸನ್ನಿವೇಶದ ಹಳ್ಳಿಗಳಲ್ಲಿ ಏನು ನಡೆಯುತ್ತದೆ ಎಂದು ಲಂಕೇಶರು ಮುಸ್ಸಂಜೆಯ ಕಥಾ ಪ್ರಸಂಗದಲ್ಲಿ ಹೇಳುತ್ತಾರೆ. ಬೇಡವೆಂದರೂ ಜನರು ಅನೇಕ ವಿಷಯಗಳಲ್ಲಿ ಮಗ್ನರಾಗಿದ್ದಾರೆ. ಅವರಿಗೆ ಅದರಿಂದ ತಪ್ಪಿಸಿಕೊಳ್ಳಲು ಆಗುತ್ತಿಲ್ಲ ಎಂದೇ ಆ ಕಾದಂಬರಿಯು ಹೇಳುತ್ತದೆ. ಅದು ಜೀವನದ ಅತ್ಯಂತ ಸಣ್ಣದಾದ ಕ್ಷಣವನ್ನು ಭಿನ್ನವಾಗಿಯೇ ಹೇಳುತ್ತದೆ. ಹಾಗೆ ನೋಡುವುದಿದ್ದರೆ ಜೀವನ ಮತ್ತು ಅದರ ಸ್ವರೂಪದ ಸಂಕೀರ್ಣತೆಯು ಬರೀ ಆದರ್ಶ ಮಟ್ಟದಲ್ಲಿ ಉಳಿಯುವುದೂ ಇಲ್ಲ ಎಂದು ಅದು ಹೇಳುತ್ತದೆ. ಆಣೆಬಡ್ಡಿ ರಂಗಮ್ಮನನ್ನು ಯಾರೂ ಆದರ್ಶವೆಂದು ಹೇಳಲಾರರು. ನವೋದಯ ಕಾಲದ ಯಜಮಾನಿಕೆ ಮತ್ತು ಆಳಿನ ಪ್ರಶ್ನೆಯು ನವ್ಯದಲ್ಲಿ ಕಾಣಿಸುವುದಿಲ್ಲ. ಅದು ಬದಲಾಗುತ್ತದೆ. ಸ್ವಂತಿಕೆ ಮತ್ತು ಅದರ ಚಹರೆಗಳು ಯಾವ ಮಾದಿಯಲ್ಲಿ ಇರುತ್ತದೆ ಮತ್ತು ಅದಕ್ಕೂ ಜೀವನಕ್ಕೂ ಯಾವ ಮಾದರಿಯ ಸಂಬಂಧವು ಇರುತ್ತದೆ ಎಂದೇ ನವ್ಯ ಕಾದಂಬರಿಗಳು ಹುಡುಕುತ್ತವೆ. ತೇಜಸ್ವಿಯ ಹತ್ತಿರ ಬರುವಾಗ ನಿಸರ್ಗ ಮತ್ತು ಮನುಷ್ಯರ ಸಂಬಂಧವು ಬೇರೆಯಾಗುತ್ತದೆ. ನಿಸರ್ಗದ ಆಂತರಿಕ ಶಕ್ತಿಯೇ ಬಹಳ ಮುಖ್ಯ. ಅವರ ಸ್ವರೂಪ ಮತ್ತು ನಿಗೂಢ ಮನುಷ್ಯರು ಕಾದಂಬರಿಗಳು ಎತ್ತಿಕೊಂಡ ಪ್ರಶ್ನೆಗಳು ಮುಖ್ಯವಾಗಿ ಭಿನ್ನವಾದ ನೆಲೆಯನ್ನು ಹೇಳುತ್ತವೆ. ಸ್ವಂತಿಕೆಯನ್ನು ; ವ್ಯಕ್ತಿಯ ವಿಶಿಷ್ಟತೆಯನ್ನು ಉಳಿಸಿಕೊಳ್ಳುವುದು ಮುಖ್ಯವಾದ ನೆಲೆಯೂ ಹೌದು. ಅಂದರೆ ಸ್ವಂತಿಕೆ ಮತ್ತು ಅದನ್ನು ಕಾಪಾಡಿಕೊಳ್ಳುವುದರ ಸಮಸ್ಯೆಯು ಮುಖ್ಯ. ಆದರೆ ನವ್ಯದ ಎಲ್ಲಾ ಕಾದಂಬರಿಗಳನ್ನು ನೋಡಿದರೆ ಅದರಲ್ಲಿ ಬರುವ ಸ್ವಂತಿಕೆ ಮತ್ತು ಅದರ ವೈವಿಧ್ಯತೆಯು ನಮಗೆ ಅರ್ಥವಾಗುತ್ತದೆ. ವ್ಯಕ್ತಿ ಸಂಬಂಧಗಳು ಮತ್ತು ಅವುಗಳ ಸಂಘರ್ಷವನ್ನು ಸಂಸ್ಕಾರ ಕಾದಂಬರಿಯು ಹೇಳುತ್ತದೆ. ಅದರಲ್ಲಿ ಯಾರು ಶ್ರೇಷ್ಠರು ಎನ್ನುವುದೂ ಮುಖ್ಯ. ತುಳಸಿಕಟ್ಟೆಗೆ ನೀರು ಹಾಕುವುದನ್ನು ಅನಂತಮೂರ್ತಿಯವರು ಬಹಳ ಮುಖ್ಯವಾದ ಪರಿಕಲ್ಪನೆಯಂತೆ ನಮ್ಮ ಎದುರು ಮಂಡಿಸುತ್ತಾರೆ. ವಾಸ್ತವವಾಗಿ ಅದು ಅತ್ಯಂತ ಸಣ್ಣದಾದ ಒಂದು ವಿವರ ಮಾತ್ರವೇ ಆಗಿದೆ. ಆದರೆ ಅದರಲ್ಲಿ ಮತ್ತೆ ಹೆಚ್ಚು ಅರ್ಥಗಳನ್ನು ಅವರು ಸಾಧಿಸುತ್ತಾರೆ. ನಾರಣಪ್ಪನಿಗೆ ತುಳಸಿಕಟ್ಟೆಯು ಮುಖ್ಯವಲ್ಲ. ಅವನು ಹಾದಿ ತಪ್ಪಿದವನು. ಆದರೆ ಪ್ರಾಣೇಶಾಚಾರ್ಯನು ಬೇರೆ ರೀತಿಯವನು. ಎರಡು ಭಿನ್ನವಾದ ದಿಕ್ಕುಗಳಂತೆ ವಾಸಿಸುವ ಅವರಿಬ್ಬರ

ನಡುವೆ ಬರುವವಳು ಚಂದ್ರಿ. ಯಾರು ದೊಡ್ಡವರಾಗುತ್ತಾರೆ ಎಂದರೆ ಇದೇ ಚಂದ್ರಿ. ಅದು ಕಾದಂಬರಿಯ ಕ್ರಿಯೆಯಲ್ಲಿ ಕಾಣಿಸುತ್ತದೆ. ಪ್ರಾಣೇಶಾಚಾರ್ಯನೂ ತನ್ನ ಇಂದ್ರಿಯವನ್ನು ಗೆಲ್ಲಲಾಗುವುದೆ ಇಲ್ಲ. ಅಂದರೆ ಈ ಸಂಗತಿಗಳು ಭಿನ್ನವಾದ ಸಂಗತಿಗಳನ್ನು ಹೇಳುತ್ತವೆ. ವ್ಯಕ್ತಿ ಮತ್ತು ಅವನ ಮುಖವಾಡವು ಕಳಚಿದರೆ ಉಳಿಯುವುದು ಏನೆಂಬುದೆ ಸಂಸ್ಕಾರ ಕಾದಂಬರಿಯ ಪ್ರಧಾನವಾದ ಪ್ರಶ್ನೆ. ಅದುವೇ ವ್ಯಂಗ್ಯದಂತೆ ಕಾಣಿಸುತ್ತದೆ. ಕೊನೆಗೆ ಪ್ರಾಣೇಶಾಚಾರ್ಯನು ತನ್ನನ್ನು ತಾನೇ ಗೆಲ್ಲಲು ಆಗುವುದೂ ಇಲ್ಲ. ಆದರೆ ಸಂಸ್ಕಾರವು ಅತ್ಯಂತ ಗಂಭೀರವಾದ ಒಂದು ಕಾದಂಬರಿ. ತೇಜಸ್ವಿಯವರು ಇದಕ್ಕಿಂತ ಬೇರೆ ಹಾದಿಯನ್ನು ಹಿಡಿದಿದ್ದಾರೆ. ಅವರು ಹೇಳುವುದು ಮನುಷ್ಯ ಮತ್ತು ಪ್ರಕೃತಿಯಲ್ಲಿ ಯಾವ ಮಾದರಿಯ ವೈರುದ್ಧ್ಯಗಳು ಇವೆ ಎಂದು ಮಾತ್ರವೇ. ಮನುಷ್ಯ ಮತ್ತು ಅದರ ಸಂಬಂಧದ ದ್ವಂದ್ವಾತ್ಮಕತೆಯೆ ತೇಜಸ್ವಿಯವರಿಗೆ ಮುಖ್ಯ. ಮನುಷ್ಯನ ಕೆಲಸ ಮತ್ತು ನಿಸರ್ಗದ ಕೆಲಸಗಳು ಬೇರೆಯಾಗಿರುತ್ತವೆ ಎಂದು ತೇಜಸ್ವಿಯವರು ಹೇಳುತ್ತಾರೆ. ಮೇಲುನೋಟಕ್ಕೆ ಯಾವುದೇ ತತ್ವಜ್ಞಾನವು ಇಲ್ಲದ ಜಗತ್ತನ್ನು ತೇಜಸ್ವಿಯವರು ಹೇಳುತ್ತಾರೆ. ವ್ಯಕ್ತಿ ಮತ್ತು ಅವನ ದ್ವಂದ್ವವು ತೇಜಸ್ವಿಯವರಿಗೆ ಹೆಚ್ಚು ಮುಖ್ಯವಲ್ಲ. ಆದರೆ ಅವರಲ್ಲಿ ವ್ಯಕ್ತಿಯ ಅಸ್ತಿತ್ವದ ಸಮಸ್ಯೆಯು ಬೇರೆ ರೀತಿಯಲ್ಲಿಯೂ ಬರುತ್ತದೆ. ವ್ಯಕ್ತಿಯ ದಿನನಿತ್ಯದ ಸಮಸ್ಯೆಯನ್ನು ಅವರು ಹೇಳುವ ಕ್ರಮವು ಅನನ್ಯವಾಗಿದೆ. ಅದರಲ್ಲಿ ಬುದ್ಧಿಜೀವಿಗಳು ಮುಖ್ಯವಲ್ಲ. ಆದರ್ಶವಾದಿಗಳೂ ಮುಖ್ಯವಲ್ಲ. ಅದರಲ್ಲಿ ನೋಡುವ ಸಂಗತಿಗಳು ನಿತ್ಯವನ್ನು ಸೂಚಿಸುತ್ತದೆ. ಸಾಮಾನ್ಯರ ಬದುಕು ಅವರ ಮನೋಸ್ಥಿತಿಯು ಅವರಿಗೆ ಹೆಚ್ಚು ಮುಖ್ಯವಾಗುತ್ತದೆ. ಮೀನು ಮಾರುವವರು, ಮರಕಳ್ಳರು, ತರಕಾರಿ ಅಂಗಡಿವರೂ ತೇಜಸ್ವಿಯವರ ಕಾದಂಬರಿಗಳಲ್ಲಿ ಬರುತ್ತಾರೆ. ತೇಜಸ್ವಿಯವರದು ಈ ದೃಷ್ಟಿಯಿಂದ ಭಿನ್ನವಾದ ನಿಲುವೂ ಹೌದು. ಅವರು ಜೀವನವನ್ನು ನೋಡುವುದೂ ಬೇರೆ ರೀತಿಯಲ್ಲಿ. ಅವರಿಗೆ ಸಾಮಾನ್ಯರೂ ಬಹಳ ಮುಖ್ಯರಾಗಿದ್ದಾರೆ. ಮತ್ತೆ ಹೇಳಬೇಕೆಂದರೆ ಯಾವುದನ್ನು ತೇಜಸ್ವಿಯವರು ಹೇಳಲು ಹೊರಟಿದ್ದಾರೆಯೋ ಅದು ವಿನೂತನವೂ ಆಗಿತ್ತು, ಅದರಲ್ಲಿ ಬರುವ ಸಾಮಾನ್ಯರು ಅತೀವ ಬುದ್ಧಿವಂತಿಕೆಯವರೂ ಹೌದು. ಮುಸ್ಸಂಜೆಯ ಕಥಾಪ್ರಸಂಗದಲ್ಲಿ ಆಣೆ ಬಡ್ಡಿ ರಂಗಮ್ಮನು ಬರುತ್ತಾಳೆ. ಅವಳ ಚಿಂತೆಯು ಬೇರೆ ರೀತಿಯದು. ಊರಿನಲ್ಲಿ ಹಲ್ಲರ್ ಮೆಶಿನ್ ಇದೆ. ಊರು ಬೇರೆ ರೀತಿಯಲ್ಲಿ ಬದಲಾಗುತ್ತದೆ. ಮತ್ತು ಆಗ ಅದರಲ್ಲಿ ಬೇರೆ ಸಂಗತಿಗಳೂ ನಡೆಯುತ್ತವೆ. ಹಲ್ಲರ್ ಮೆಶಿನ್ ಒಂದು ಬಗೆಯದು. ಅದು ಚೂರಿಯೂ ಅಲ್ಲ. ಅದರ ಕೆಲಸವು ಭಿನ್ನ. ಅದನ್ನು ಲಂಕೇಶರು ಹೇಳುವುದು ಬೇರೆ ರೀತಿಯಲ್ಲಿ. ಭೌತಿಕವಾದ ಅನೇಕ ಸಂಗತಿಗಳು ಊರಿನಲ್ಲಿ ನಡೆಯುತ್ತದೆ.

ಮತ್ತು ಅದರ ಪರಿಣಾಮವನ್ನು ಊರು ನೋಡುತ್ತದೆ. ಅಂದರೆ ಈ ಮಾದರಿಯಲ್ಲಿ ಬದಲಾಗುವ ಅನೇಕ ಸಮಾಜಗಳ ವಿವರಣೆಯನ್ನು ಕನ್ನಡದ ಲೇಖಕರು ಬೇರೆ ಬೇರೆ ರೀತಿಯಲ್ಲಿ ಹೇಳಿದ್ದಾರೆ. ಅದು ಜೀವನವನ್ನು ಬದಲು ಮಾಡುತ್ತದೆ. ಅದರಲ್ಲಿ ವ್ಯತ್ಯಾಸಗಳು ಇರಬಹುದು. ಆದರೆ ಅದನ್ನು ಬಿಡಲು ಆಗುವುದೂ ಇಲ್ಲ. ಆಣೆಬಡ್ಡಿ ರಂಗಮ್ಮ ತಾನು ಯಾವ ಬಗೆಯವಳು ಎಂದು ತೋರಿಸಿಕೊಳ್ಳುತ್ತಾಳೆ ಅದನ್ನು ಅವಳು ತನ್ನ ಸಿಟ್ಟು ಮತ್ತು ಸೆಡವಿನಲ್ಲಿ ವ್ಯಕ್ತಮಾಡುತ್ತಾಳೆ. ಅವಳ ಸ್ವಭಾವವು ಶಿಕಾರಿಯ ನಾಗಪ್ಪನಂತೆ ಇಲ್ಲ. ಅವಳು ತನ್ನ ವ್ಯಕ್ತಿತ್ವವನ್ನು ಬೇರೆ ರೀತಿಯಲ್ಲಿ ತೋರಿಸಿಕೊಳ್ಳುತ್ತಾಳೆ. ಅವಳ ಜ್ಞಾನವೇ ಬೇರೆ ರೀತಿಯದು. ಅವಳು ಓದಿದವಳು ಅಲ್ಲ. ಅವಳಿಗೆ ಇರುವ ತಿಳುವಳಿಕೆಯು ಸಾಮಾನ್ಯವಾದದ್ದು. ಅವಳ ವ್ಯಕ್ತಿತ್ವವನ್ನು ದೃಷ್ಟಿಯಿಂದ ಬೇರೆ ಮಾಡಿ ನೋಡಬೇಕಾಗುತ್ತದೆ. ಅವಳ ಸ್ವಭಾವವೇ ಬೇರೆ ರೀತಿಯದು. ಮತ್ತೆ ಇಲ್ಲಿ ಅನಂತಮೂರ್ತಿಯವರ ಸಂಸ್ಕಾರ ಕಾದಂಬರಿಯನ್ನು ಕುರಿತು ಹೇಳಬೇಕಾಗುತ್ತದೆ. ಅದರಲ್ಲಿ ನಿಸರ್ಗದ ವಿಚಾರವೇ ಇಲ್ಲ. ಕುವೆಂಪು ಅವರಂತೆ ಅವರು ನಿಸರ್ಗವನ್ನು ಬಣ್ಣಿಸುವುದೂ ಇಲ್ಲ. ಅವರಲ್ಲಿ ವ್ಯಕ್ತಿಗಳೇ ಮುಖ್ಯವಾಗುತ್ತಾರೆ. ಇಲ್ಲಿ ಗಮನಿಸಬೇಕಾದ ಮತ್ತೊಂದು ವಿಚಾರವೂ ಇದೆ. ಆಗಿನ ನಮ್ಮ ಸಾಂಸ್ಕೃತಿಕ ವಾಗ್ವಾದಗಳಿಗೆ ಬೇರೆ ಆಯಾಮವೂ ಇತ್ತು. ಅದನ್ನು ಬುದ್ಧಿಜೀವಿಗಳ ಬೌದ್ಧಿಕವಾದ ಬೆಳವಣಿಗೆಯಲ್ಲಿಯೂ ಕಾಣಬಹುದು. ಅದನ್ನು ಅದೇ ರೀತಿಯಲ್ಲಿ ನೋಡಬೇಕು ಎಂದು ಅರ್ಥವಲ್ಲ. ಅದರೆ ಪರಿಸ್ಥಿತಿಯು ಬದಲಾಗಿತ್ತು. ಬೌದ್ಧಿಕ ಯಜಮಾನಿಕೆಯ ಪ್ರಶ್ನೆಗಳು ಬದಲಾಗಿದ್ದವು. ಸಮಾಜ ಮತ್ತು ವ್ಯಕ್ತಿಗಳ ನಡವಣ ಪ್ರಶ್ನೆಯನ್ನು ಸಮಾಜವಾದ (ಲೋಹಿಯಾ) ಮತ್ತು ಅದರ ಅನ್ವಯದ ಪ್ರಶ್ನೆಯೂ ಬಹಳ ಮುಖ್ಯವಾಗಿ ಬಿಟ್ಟಿತ್ತು. ಜಾತಿಯನ್ನು ನೋಡುವುದು ಮತ್ತು ಅದನ್ನು ಗ್ರಹಿಸುವ ಕ್ರಮಗಳು ಬೇರೆಯಾಗಿದ್ದವು. ಕಾರಂತರು, ಕುವೆಂಪು, ಬೇಂದ್ರೆ ಮೊದಲಾದವರು ಬರೆಯುತ್ತಿದ್ದ ಕಾಲದ ಧೋರಣೆಗೂ ಅನಂತಮೂರ್ತಿ, ತೇಜಸ್ವಿ, ಲಂಕೇಶ್ ಬರೆಯುತ್ತಿದ್ದ ಕಾಲದ ಧೋರಣೆಗೂ ಅತ್ಯಂತ ದೊಡ್ಡದಾದ ವ್ಯತ್ಯಾಸವೂ ಇದೆ. ಅದನ್ನು ಹೀಗೆ ಹೇಳಬಹುದು: ಗೋಪಾಲ ಗೌಡರ ಪ್ರಭಾವನ್ನು ಮತ್ತು ಲೋಹಿಯಾರ ಪ್ರಭಾವವನ್ನು ಹಾಗೂ ಅಸ್ತಿತ್ವವಾದವನ್ನು ಒಟ್ಟಿಗೆ ಜೊತೆಗೂಡಿಸಿದರೆ ಏನಾಗುತ್ತದೆಯೋ ಅದನ್ನು ಕಾಣುತ್ತೇವೆ. ಅಸ್ತಿತ್ವವಾದ ಮತ್ತು ಲೋಹಿಯಾವಾದದ ಒಂದು ಸಮೀಕರಣವೆ ಇಲ್ಲಿ ಮುಖ್ಯವಾಗುತ್ತದೆ. ಆದರೆ ತೇಜಸ್ವಿಯವರಲ್ಲಿ ಕಾಡು ಮತ್ತು ಅದರ ಸ್ವಭಾವವು ಒಂದು ಬಗೆಯದು. ಅದರಲ್ಲಿ ಬರುವ ನಿಗೂಢತೆಯು ಅತ್ಯಂತ ಮುಖ್ಯವಾಗುತ್ತದೆ. ಅಂದರೆ ಅವರಲ್ಲಿ ಈ ಸಂಗತಿಗಳು ಅತ್ಯಂತ ಮಹತ್ವದ ತಿರುವನ್ನು ತರುತ್ತದೆ. ಜೀವಿಯು ಅದನ್ನು

ಅವಲಂಬಿಸುತ್ತಾನೆ. ಅದು ಅವನ ಅಗತ್ಯವೂ ಆಗುತ್ತದೆ. ವ್ಯಕ್ತಿಯ ಪುಸ್ತಕದ ಜ್ಞಾನವೂ ನಿಸರ್ಗದ ಎದುರು ಸೋಲುತ್ತದೆ ಎನ್ನುವುದಕ್ಕೆ ಅವರ ಕರ್ವಾಲೋ ಕಾದಂಬರಿಯೇ ಸಾಕ್ಷಿಯೂ ಆಗುತ್ತದೆ. ಜ್ಞಾನವು ಅದರಲ್ಲಿ ವಿಸ್ತರಣೆಯಾಗುವ ಕ್ರಮವೂ ಹೌದು. ಆದರೆ ಈ ಜ್ಞಾನವಾದರಿಯು ದೇಸಾಯಿಯವರ ಕಾದಂಬರಿಗಳಲ್ಲಿ ಕಾಣುವುದೂ ಇಲ್ಲ. ದೇಸಾಯಿಯವರು ಜ್ಞಾನ ಮತ್ತು ಸ್ವಂತಿಕೆಯನ್ನು ನೋಡುವ ಕ್ರಮವು ಬೇರೆಯಾಗುತ್ತದೆ. ಜ್ಞಾನವು ಅವರಿಗೆ ವ್ಯಕ್ತಿತ್ವ ಮತ್ತು ಅದರ ಅಸ್ತಿತ್ವದ ಪ್ರಶ್ನೆಯೂ ಹೌದು. ವಿಕ್ಷೇಪವೇ ಇದಕ್ಕೆ ಅತ್ಯಂತ ಒಳ್ಳೆಯ ಉದಾಹರಣೆ. ಸ್ವಂತಿಕೆಗೆ ಅದರಲ್ಲಿ ಎರಡು ಮಡಿಕೆಗಳು ಇವೆ. ಒಂದು ಸ್ವಂತಿಕೆಯನ್ನು ಉಳಿಸಿಕೊಳ್ಳುವ ಪ್ರಯತ್ನ. ಮತ್ತೊಂದು ತತ್ವಜ್ಞಾನ. ಆದುದರಿಂದ ಅದು ಸಂಕೀರ್ಣವಾಗಿದೆ. ಮತ್ತೆ ತೇಜಸ್ವಿಯವರ ಕಡೆಗೆ ಬರುವುದಿದ್ದರೆ ನಿಸರ್ಗವನ್ನು ಮನುಷ್ಯನು ನಿಯಂತ್ರಿಸಲಾರ. ಅದು ಅವನ ಮಿತಿ. ಮನುಷ್ಯ ಮತ್ತು ಅವನ ಸ್ವಭಾವವು ಒಂದು ಬಗೆಯದು. ಮತ್ತು ಅದನ್ನು ಆಧುನಿಕ ಲೇಖಕರು ಕಂಡ ಕ್ರಮವೂ ಬೇರೆಯಾಗುತ್ತದೆ. ತೇಜಸ್ವಿಯವರು ಈ ದೃಷ್ಟಿಯಿಂದ ನಾವು ಗಮನಿಸಬೇಕಾದ ಅನೇಕ ವಿಷಯಗಳ ಕುರಿತು ಹೇಳುತ್ತಾರೆ. ಅವರಿಗೆ ಅದು ಮುಖ್ಯವಾಗುತ್ತದೆ. ಮತ್ತು ಅದನ್ನು ನೋಡಿದರೆ ಮನುಷ್ಯನು ಎಷ್ಟು ಕುಬ್ಜನೆಂದು ತಿಳಿಯುತ್ತದೆ. ತೇಜಸ್ವಿಯವರ ಕಾಡು ಮತ್ತು ಕೌರ್ಯವನ್ನು ಓದಿದರೆ ಮನುಷ್ಯನು ಎಷ್ಟು ಪುಕ್ಕಲನೂ ಆಗಿದ್ದಾನೆ ಎಂದು ತಿಳಿಯುತ್ತದೆ. ಮನುಷ್ಯ ಮತ್ತು ಜ್ಞಾನದ ಮಿತಿಯು ಯಾವ ರೀತಿಯಲ್ಲಿದೆ ಎಂದು ಅವರು ಕವಾರ್ಲೋದಲ್ಲಿ ವಿವರಿಸುತ್ತಾರೆ. ಅಂದರೆ ಜೀವನದ ಅನೇಕ ಸಂಗತಿಗಳು ಅನೂಹ್ಯವೂ ಹೌದು. ಅನಂತಮೂರ್ತಿಯವರು ಹೇಳುವುದು ಬೇರೆ ವಿಷಯಗಳ್ನು. ಅವರು ಧರ್ಮ ಮತ್ತು ಜಾತಿಯ ಪ್ರಶ್ನೆಗಳನ್ನು ಎತ್ತುತ್ತಾರೆ. ವ್ಯಕ್ತಿ ಮತ್ತು ಧರ್ಮದ ನಡುವೆ ಯಾವ ರೀತಿಯ ಸಂಘರ್ಷವು ಇರುತ್ತದೆ ಎನ್ನುವುದರ ಬಗ್ಗೆ ಅವರಿಗೆ ಹೆಚ್ಚು ಕುತೂಹಲವೂ ಇದೆ. ಯಾರು ಹೆಚ್ಚು ಮುಖ್ಯರಾಗುತ್ತಾರೆ ಎನ್ನುವುದು ಮಾತ್ರವೇ ಅವರಿಗೆ ಅಗತ್ಯವಾದ ಹಾಗೆ ಕಾಣಿಸುತ್ತದೆ. ನಾರಣಪ್ಪ ಮತ್ತು ಪ್ರಾಣೇಶಾಚಾರ್ಯರ ನಡುವೆ ಆಯ್ಕೆಗಳನ್ನು ಅವರು ಇಡುತ್ತಾರೆ. ಧರ್ಮ ಮತ್ತು ಅದರ ಸಂವೇದನೆಗಳು ಅವರಿಗೆ ಅಗತ್ಯವಾಗುತ್ತದೆ. ಅವರು ಹುಡುಕುತ್ತಾರೆ. ಅದೇ ರೀತಿಯಲ್ಲಿ ಅಡಿಗರೂ ನಿಜವಾಗಿಯೂ ಅನೇಕ ಹುಡುಕಾಟದಲ್ಲಿ ಇರುತ್ತಾರೆ. ಅವರ ಬಹುತೇಕ ಕವಿತೆಗಳು ಇದನ್ನು ಸೂಚಿಸುತ್ತದೆ. ನವ್ಯರ ಹುಡುಕಾಟವು ಮಾತ್ರ ವ್ಯಕ್ತಿ ಮತ್ತು ಅವನ ಅನನ್ಯತೆಯನ್ನು ಹೇಳುತ್ತದೆ. ಅಡಿಗರು ಬಳಸುವ ಅನೇಕ ಪ್ರತಿಮೆಗಳಿಗೆ ಇತರ ಕವಿಗಳಿಗೆ ಇಲ್ಲದೇ ಇರುವ ಸಮಾಜವು ಇದೆ. ಅವರ ಕೆಲವು ನಾಯಕರು ಈ

ಕಾರಣಕ್ಕಾಗಿಯೇ ಚಿಂತಿತರಾಗುತ್ತಾರೆ. ದೆಹಲಿಯಲ್ಲಿ, ಕೂಪಮಂಡೂಕ, ಮುಂತಾದ ಪದ್ಯಗಳು ಈ ದೃಷ್ಟಿಯಿಂದ ಗಮನಾರ್ಹವಾಗಿವೆ. ಆದರೆ ಅವರ ದೆಹಲಿಯಲ್ಲಿ ಕವಿತೆಯ ವ್ಯಂಗ್ಯವನ್ನು ಕೇವಲ ವ್ಯಕ್ತಿಗೆ ಮಾತ್ರವೇ ಸೀಮಿತವಾಗಿದೆ ಎಂದು ಹೇಳಬೇಕಾಗಿಯೂ ಇಲ್ಲ. ಅದು ರಾಜಕೀಯ ಮತ್ತು ಸಾಮಾಜಿಕವಾದ ಕೆಲವು ವ್ಯಂಗ್ಯವನ್ನು ಹೇಳುತ್ತದೆ. ಅದರ ಮೂಲಕವೇ ವ್ಯಕ್ತಿ ಮತ್ತು ಸಮಾಜದ ನೀತಿಗಳು ಅದರಲ್ಲಿ ಸಂಘರ್ಷವನ್ನು ಹೇಳುತ್ತವೆ. ಆವರ ನಾಯಕನು ಅನೇಕ ಸಂದರ್ಭದಲ್ಲಿ ಆಕ್ರೋಶವನ್ನು ವ್ಯಕ್ತಪಡಿಸುತ್ತಾನೆ. ಅವನದು ಅತ್ಯಂತ ಸ್ವಂತಿಕೆಯ ಗುಣವೂ ಹೌದು. ವ್ಯಕ್ತಿ ಮತ್ತು ಮತ್ತು ಅವನ ಸ್ವಭಾವವು ಇದರಲ್ಲಿ ಹೆಚ್ಚು ಕಾಣಿಸುತ್ತದೆ. ಹಾಗೆ ನೋಡುವುದಿದ್ದರೆ ನವ್ಯದ ಅನೇಕ ಲೇಖಕರು ಕತೆಯನ್ನು ಅಥವಾ ಕಾದಂಬರಿಯನ್ನು ಹೇಳುವುದು ಮಾತ್ರವೇ ಗುರಿಯಾಗಿದೆ ಎಂದು ಭಾವಿಸಿಕೊಂಡವರೂ ಅಲ್ಲ. ಅವರಲ್ಲಿ ಸ್ವಂತಿಕೆ ಮತ್ತು ಅವರ ಅಸ್ತಿತ್ವವನ್ನು ನೋಡುವುದು ಮತ್ತು ಅದರ ಮೂಲಕವೇ ಜಗತ್ತನ್ನು ಗಮನಿಸುವುದೂ ಬಹಳ ಮುಖ್ಯವಾಗಿದೆ. ವ್ಯಕ್ತಿಯ ಪ್ರಜ್ಞೆಯ ನಿರೂಪಣೆಯೆ ಬಹಳ ಮುಖ್ಯ ಅದರಲ್ಲಿ ವ್ಯಕ್ತಿ ಮತ್ತು ಅವನ ಸಾಧ್ಯತೆಯೇ ಬೇರೆ ವಿಧವಾಗಿರುತ್ತದೆ. ಸ್ವಜ್ಞಾನ ಮತ್ತು ಅದರ ಹುಡುಕಾಟವನ್ನು ದೇಸಾಯಿಯವರು ಮಾಡುತ್ತಾರೆ. ಅವರಿಗೆ ಅದರಲ್ಲಿ ಹೆಚ್ಚು ಆಸಕ್ತಿಯೂ ಇದೆ. ಮನಸ್ಸು ಮತ್ತು ಅದರ ಸಾರ ರೂಪವು ಹೇಗೆ ವ್ಯಕ್ತಿಯನ್ನು ನಿರ್ಧರಿಸುತ್ತದೆ ಎನ್ನುವುದನ್ನು 'ವಿಕ್ಷೇಪ'ವು ಹೇಳುತ್ತದೆ. ಕ್ರಿಯೆ ಮತ್ತು ಅದರ ಚಟುವಟಿಕೆಗಳು ಮನಸ್ಸನ್ನು ನಿರ್ಧರಿಸುತ್ತವೆ ಎನ್ನುವುದನ್ನು ಹೇಳುವುದಕ್ಕೆ ನವ್ಯರು ಯತ್ನವನ್ನು ಮಾಡುತ್ತಾರೆ ಅವರ ಅನೇಕ ಬರಹಗಳು ಇದನ್ನು ವಿವರಿಸುತ್ತವೆ. 'ಶಿಕಾರಿ' ಕಾದಂಬರಿಯು ವ್ಯಕ್ತಿ ಮತ್ತು ಅವನ ಮನೋಸ್ಥಿತಿಯ ಮೇಲೆ ನಡೆಯುವ ಹಲ್ಲೆಯನ್ನು ಹೇಳುತ್ತದೆ. ಪ್ರಜ್ಞೆ ಮತ್ತು ಅದರ ಕ್ರಿಯೆಯ ಸ್ವರೂಪವನ್ನು ಮುಕ್ತಿ ದೇಸಾಯಿಯ್ಯಲ್ಲಿ ಕಾಣಬಹುದು. ಹಾಗೆ ನೋಡುವುದಿದ್ದರೆ ಯಾವುದೇ ರೀತಿಯ ತೀರ್ಮಾನವನ್ನು ದೇಸಾಯಿಯವರು ಕೊಡುವುದೂ ಇಲ್ಲ. ಅವರು ಅದನ್ನು ಕೇಂದ್ರ ಮಾಡುವುದೂ ಇಲ್ಲ. ಸಮಸ್ಯೆ ಮತ್ತು ಅದರ ಪಲಾಯನವು ಅಗತ್ಯವಿದೆಯೇ ಇಲ್ಲವೇ ಎನ್ನುವುದೂ ದೇಸಾಯಿಯರಿಗೆ ಹೆಚ್ಚು ಮುಖ್ಯವಾಗುತ್ತದೆ. ಈ ದೃಷ್ಟಿಯಿಂದ ಪ್ರಜ್ಞೆ ಮತ್ತು ಅದರ ಪಾತಳಿಗಳನ್ನು ದೇಸಾಯಿ ಮತ್ತು ಗಿರಿಯವರು ಬೇರೆ ಬೇರೆ ರೀತಿಯಲ್ಲಿ ಹೇಳಿದರು. ಅವರ ನಾಯಕರು ಪುರಾಣರೂಪಿಗಳು ಅಲ್ಲ. ಅವರನ್ನು ಮುಗ್ಧರನ್ನಾಗಿಯೂ ವಿವರಿಸುತ್ತಿಲ್ಲ. ಕೆಲವು ಕ್ಷಣದಲ್ಲಿ ತಾನು ಯಾವುದನ್ನೋ ಎದುರಿಸಬೇಕಾಗುತ್ತದೆ ಎನ್ನುವ ಭಯವು ನಾಗಪ್ಪನಿಗೆ ಇರುತ್ತದೆ. ಅದನ್ನು ಚಿತ್ತಾಲರು ಅತ್ಯಂತ ಯಶಸ್ವಿಯಾಗಿಯೂ ನೇರವೇರಿಸುತ್ತಾರೆ. ಮುಂದೆ ಯಾವುದೋ ಒಂದು

ದುರಂತವು ಬರುತ್ತದೆ ಎನ್ನುವುದು ಅವನ ಭಯ. ಅವನ ವರ್ತಮಾನವನ್ನು ಹಿಂದಿನದು ಮಾತ್ರವೇ ಅಲ್ಲ ಮುಂದಿನದು ಪ್ರಭಾವಿಸುತ್ತದೆ ಎನ್ನುವುದು ಅವನ ಭಾವನೆಯೂ ಹೌದು. ಒಂದು ರೀತಿಯಿಂದ ಇದು ಅತ್ಯಂತ ಮಹತ್ವದ್ದೂ ಹೌದು. ನಾಗಪ್ಪ ಮತ್ತು ಅವನ ನೆನಪಿನ ಲೋಕವು ಅತ್ಯಂತ ವಿಶಿಷ್ಟವೂ ಹೌದು. ಅದರಲ್ಲಿ ಪ್ರಾತಿನಿಧಿಕತೆಯೂ ಇದೆ. ಯಾವುದೇ ಪೂರ್ವ ನಿರ್ಧಾರವು ಇಲ್ಲದೇ ಹೊರಟವನು ನಿರ್ಧಾರಕ್ಕೆ ಬರುವುದೂ ಶಿಕಾರಿಯಲ್ಲಿ ಅತ್ಯಂತ ಮಹತ್ವದದ್ದು. ಆದರೆ ಈ ಮಾದರಿಯಲ್ಲಿ ಬರೆಯುವ ಹೆಚ್ಚಿನ ಲೇಖಕರು ಮಾರ್ಕ್ಸವಾದವನ್ನು ಒಪ್ಪಿಕೊಂಡವರು ಅಲ್ಲ. ದೇಸಾಯಿಯವರು ಮಾತ್ರವೇ ರಾಯ್ ಸಿದ್ಧಾಂತದಿಂದ ಪ್ರಭಾವಿತರಾದವರು. ಆದರೆ ವಿಶ್ವವಿದ್ಯಾನಿಲಯಗಳು ಹೇಗೆ ಒಂದು ಕಾಲಕ್ಕೆ ನಮ್ಮ ಸಾಹಿತ್ಯವನ್ನು ಆಳಿತ್ತು ಎನ್ನುವುದನ್ನು ಅಂದಿನ ಬರಹಗಳು ಹೇಳುತ್ತವೆ. ಅವರ ಪಾಂಡಿತ್ಯವು ಇರುವುದು ಅವರು ಬಳಸಿದ ಸಂಕೇತದಲ್ಲಿ ಎದ್ದು ಕಾಣಿಸುತ್ತದೆ. ಚರಿತ್ರೆ ಮತ್ತು ಅದರ ಪ್ರಭಾವವು ಅವರಿಗೆ ಹೆಚ್ಚು ಮುಖ್ಯವಲ್ಲ. ಅವರು ಅದನ್ನು ನೋಡುವುದೂ ಇಲ್ಲ. ಆಲೋಚನೆಗೆ ಇರುವ ಚರಿತ್ರೆಯನ್ನು ಅವರು ಗಮನಿಸುವ ಗೋಜಿಗೆ ಹೋಗುವುದೂ ಇಲ್ಲ. ಅವರ ಮಟ್ಟಿಗೆ ಅದರ ಅಗತ್ಯವಿಲ್ಲ. ವಾಸ್ತವವಾಗಿ ನಮ್ಮ ಅನೇಕ ಬುದ್ಧಿಜೀವಿಗಳು ಚರಿತ್ರೆಯನ್ನು ನಿರಾಕರಿಸುತ್ತಾರೆ. ಅವರಿಗೆ ಅದರ ಅಗತ್ಯವಿಲ್ಲವೆಂದು ಭಾವಿಸುತ್ತಾರೆ. ಆದರೆ ಅವರದೇ ಆದ ಗುಂಪೂ ಇದೆ. ಗುಂಪುಗಳು ತಮಗೆ ಗೊತ್ತಿರುವುದನ್ನು ಮಾತ್ರವೇ ದೊಡ್ಡ ಗಂಟಲಲ್ಲಿ ಹೇಳುತ್ತಾರೆ. ಸಣ್ಣದಾದ ಗುಂಪುಗಳು ಹೇಗೆ ನಮ್ಮನ್ನು ನಿಯಂತ್ರಿಸುತ್ತವೆ ಎನ್ನುವುದು ಎಲ್ಲರಿಗೂ ಗೊತ್ತು. ಆದರೆ ಇಲ್ಲಿ ನೋಡಬೇಕಾದ ಮತ್ತೊಂದು ಪ್ರಶ್ನೆಯೂ ಇದೆ. ನಾವೀಗ ನೋಡಬೇಕಾದ್ದು ನಮ್ಮ ವಿಮರ್ಶೆಗಳಲ್ಲಿ ಮನೋವಿಜ್ಞಾನ ಮತ್ತು ಸಾಮಾಜಿಕ ಬದ್ಧತೆಯ ವಿಮರ್ಶೆಗಳನ್ನು. ನವ್ಯರು ಒಂದು ತಲೆಮಾರನ್ನು ತರಬೇತಿ ಮಾಡಿದರು. ಮತ್ತು ಅದರ ಮೂಲಕವೇ ತಮಗೆ ಗೊತ್ತಿರುವ ಜ್ಞಾನವನ್ನು ಹೆಚ್ಚು ಅಧಿಕೃತ ಮಾಡಿದರು. ಆದರೆ ಅದರಲ್ಲಿ ಇಡೀ ಚರಿತ್ರೆಯ ಅವಗಣನೆಯು ಇತ್ತು. ಬೇರೊಬ್ಬರ ಬಗ್ಗೆ ಯಾವುದೇ ರೀತಿಯಲ್ಲಿ ಸಹನೆಯು ಅವರಿಗೆ ಇದ್ದಿರಲಿಲ್ಲ. ಅವರು ಹೇಳಿದ್ದನ್ನು ನಂಬುವ ಹಾಗೆ ಮಾಡಿದರು. ಮೆಕಾಲೆಯೂ ಅವರಿಗೆ ಮುಖ್ಯವಲ್ಲ, ದಲಿತರ ಪ್ರಶ್ನೆಯೂ ಅವರಿಗೆ ಮುಖ್ಯವಾಗಲಿಲ್ಲ. ಕನ್ನಡದ ಮಟ್ಟಿಗೆ ಅವರದು ಹೊಸ ಪ್ರಾರಂಭ ನಿಜ.ಆದರೆ ಕವಿತೆಯನ್ನು ಕುರಿತು ಅವರು ಹೇಳಿದ ಕ್ರಮಗಳು ಅತ್ಯಂತ ಸೀಮಿತವೂ ಹೌದು. ಕವಿತೆಯನ್ನು ಹೇಗೆ ಓದಬೇಕು ಮತ್ತು ಹೇಗೆ ಅರ್ಥ ಮಾಡಬೇಕು ಎನ್ನುವುದು ಮಾತ್ರವೇ ಅವರ ಗುರಿಯೂ ಆಗಿತ್ತು. ಕನ್ನಡದ ಸಾಂಪ್ರದಾಯಿಕವಾದ ಒಂದು ಕ್ರಮವನ್ನು ಅವರು ಒಡೆದರು. ಅವನ್ನು ಓದುವುದು

ಮಾತ್ರವೇ ಬಹಳ ಮುಖ್ಯ. ಇದು ಈವತ್ತಿಗೂ ನಮಗೆ ಮುಖ್ಯವಾಗಿದೆ. ಸಾಮಾನ್ಯವಾದ ಒಂದು ಅನುಭವಕ್ಕಿಂತ ಹೇಗೆ ಕವಿತೆಯು ಬೇರೆ ಅನುಭವವನ್ನು ನೀಡುತ್ತದೆ ಎಂದು ಮಾತ್ರವೇ ಅವರಿಗೆ ಮುಖ್ಯ. ಓದನ್ನು ಅವರು ಹೆಚ್ಚು ಪರಿಕಲ್ಪನಾತ್ಮಕವಾಗಿಯೂ ನೋಡುತ್ತಾರೆ. ಕಾವ್ಯದಲ್ಲಿ ಅಂತಸ್ಥವಾಗಿರುವ ಸಂಕೇತ ಮತ್ತು ಅದರ ಅರ್ಥವನ್ನು ನೋಡುವುದು ಮಾತ್ರವೇ ಮುಖ್ಯವೆಂದು ಅವರು ಭಾವಿಸಿದರು. ಬಹಳ ಜನಪ್ರಿಯವಾದ ಅವರ ನಿಲುವು ಬೇರೆಯಾಗಿದೆ. ಅವರು ಲೇಖಕನನ್ನು ನೋಡಬೇಡ ಕೃತಿಯನ್ನು ನೋಡು ಎಂದು ಮಾತ್ರವೇ ಹೇಳಿದರು. ಮತ್ತು ಅವರು ಯಾವುದನ್ನು ಅಯ್ಕೆ ಮಾಡಿದರೋ ಅವರು ಮಾತ್ರವೇ ಮುಖ್ಯರಾದ ಕವಿಗಳು ಎಂದು ಭಾವಿಸಿದರು. ಆದರೆ ಯಾವಾಗ ಸಾಹಿತ್ಯವನ್ನು ಒಂದು ಸ್ವಾಯತ್ತಾವದ ಘಟಕವೆಂದು ಭಾವಿಸುತ್ತಾರೆಯೋ ಆಗ ಈ ಸಮಸ್ಯೆಯ ಸ್ವರೂಪವೂ ಬೇರೆಯಾಗುತ್ತದೆ. ಅಂದರೆ ಸಾಹಿತ್ಯವನ್ನು ಅದರ ಕ್ರಿಯೆಗಿಂತ ಬೇರೆ ಮಾಡಿಕೊಂಡು ನೋಡಲಾಗುತ್ತದೆ. ಅದರ ಜೊತೆಗೆ ಸಾಹಿತ್ಯ ಮತ್ತು ಅದರ ಚಟುವಟಿಕೆಯನ್ನು ಭಿನ್ನವಾಗಿಯೂ ನೋಡಲಾಗುತ್ತದೆ. ಮತ್ತು ಸಾಹಿತ್ಯವನ್ನು ಸಮಾಜದಿಂದ ಬೇರೆ ಮಾಡಲಾಗುತ್ತದೆ. ಅದು ಮಿತಿಯೂ ಹೌದು. ವಾಸ್ತವವಾಗಿ ಸಾಹಿತ್ಯ ಮತ್ತು ಅದರ ಸಾಮಾಜಿಕ ಕಾರ್ಯವು ಬೇರೆ ರೀತಿಯಲ್ಲಿಯೂ ಇರುತ್ತದೆ. ಯಾವುದೇ ಸಾಹಿತ್ಯ ಮತ್ತು ಅದರ ಸಂಗತಿಗಳು ಹುಟ್ಟುವುದು ಬರೀ ಒಂದು ಬೌದ್ಧಿಕವಾದ ವಲಯದಿಂದ ಅಲ್ಲವೆನ್ನುವುದು ಎಲ್ಲರಿಗೂ ಗೊತ್ತು. ಅದನ್ನು ಯಾರೂ ನಿರಾಕರಿಸಲು ಬರುವುದಿಲ್ಲ. ನಿಜವಾಗಿ ನಾವು ಮಾತಾಡುವುದು ಮತ್ತು ಬರೆಯುವುದು ಸಮಾಜವನ್ನು ನೋಡಿಕೊಂಡು. ಅದನ್ನು ನಾವು ಅರ್ಥ ಮಾಡಿಕೊಳ್ಳಬೇಕಾಗುತ್ತದೆ. ಬುದ್ಧಿಜೀವಿಗಳಿಗೆ ಮತ್ತು ಸಮಾಜಕ್ಕೆ ಒಂದು ಸಂಬಂಧವು ಇದೆ. ಅದನ್ನು ಮೀರಿ ಯಾರೂ ಬರೆಯುವುದಿಲ್ಲ. ಅದನ್ನು ಪ್ರತ್ಯೇಕವಾದ ಒಂದು ಚೌಕಟ್ಟು ಮತ್ತು ಸಮಾಜಕ್ಕೂ ನಮಗೂ ಯಾವುದೇ ನಂಟು ಇಲ್ಲವೆಂದು ಹೇಳಲು ಸಾಧ್ಯವಾಗುವುದೂ ಇಲ್ಲ. ಅದು ಮನಸ್ಸಿನಿಂದ ಹುಟ್ಟಿದೆ ಮತ್ತು ಅದು ಜೀವನದೊಂದಿಗೆ ಸಂಬಂಧವನ್ನು ಇಟ್ಟುಕೊಂಡಿದೆ. ಲೇಖಕನು ಸಮಾಜವನ್ನು ಹೊರತುಪಡಿಸಿಕೊಂಡು ಯಾವುದನ್ನು ನೋಡಲು ಸಾಧ್ಯವೂ ಆಗುವುದಿಲ್ಲ. ಅದರಲ್ಲಿ ವ್ಯಕ್ತಿತ್ವ ಮತ್ತು ಸಮಾಜವು ಜೊತೆಗೆ ಇರುತ್ತದೆ. ಅದನ್ನು ಮೀರಲು ಆಗುವುದೂ ಇಲ್ಲ. ಆದ್ದರಿಂದಲೇ ನಮ್ಮ ಆಲೋಚನೆಯೆನ್ನುವುದು ಮೂಲಭೂತವಾಗಿ ಸಮಾಜದ ಒಂದು ಅಂಗ ಮಾತ್ರವೇ ಆಗಿರುತ್ತದೆ. ಮತ್ತು ಆಲೋಚನೆಯನ್ನು ನಾವು ಬೇರೆ ಮಾಡಲು ಬರುವುದೂ ಇಲ್ಲ. ಕಾರಂತರ ಬರಹದ ನಿಜವಾದ ಚಹರೆಯು ಇರುವುದು ಅವರ ಕಾದಂಬರಿಗಳಲ್ಲಿ. ಆದರೆ

ಅದನ್ನು ನಾವು ಒಂದು ದೃಷ್ಟಿಯಿಂದ ಆ ಕಾಲದ ಹಿನ್ನೆಲೆಯಿಂದಲೂ ನೋಡಬೇಕಾಗುತ್ತದೆ. ನಮ್ಮ ಈಗಣ ಪ್ರಶ್ನೆಗಳು ಆಗ ಕಾರಂತರಿಗೆ ಇದ್ದಿರಲಿಲ್ಲ. ಈ ಮಾತು ತೇಜಸ್ವಿಯವರಿಗೂ ಅನ್ವಯವಾಗುತ್ತದೆ. ಅದನ್ನು ನಾವು ಯಾರಿಗೂ ಅನ್ವಯವನ್ನು ಮಾಡಲು ಸಾಧ್ಯ. ವಿಷಯ ಮತ್ತು ಅದರ ಪರಿಜ್ಞಾನ ಮತ್ತು ವಸ್ತುವಿನ ಅಗತ್ಯವೇ ನಮಗೆ ಬೇರೆ ಬೇರೆ ಆಲೋಚನೆಗಳನ್ನು ಹೇಳಿಕೊಡುತ್ತವೆ ಎಂದು ಹೆಗೆಲ್ ಹೇಳುತ್ತಾನೆ. ಆದರೆ ಯಾವುದೇ ಲೇಖಕನು ತನಗೆ ಬೇಕಾದ ಸಮಾಜವನ್ನು ನೋಡುತ್ತಾನೆ. ಮತ್ತು ತನಗೆ ಯಾವುದು ದಕ್ಕಿದೆಯೋ ಅದನ್ನು ಮಾತ್ರವೇ ನಿರೂಪಿಸುತ್ತಾನೆ. ಇಲ್ಲಿ ಮತ್ತೆ ಕೆಲವು ಪ್ರಶ್ನೆಗಳು ಇವೆ. ಸಮಾಜ ಮತ್ತು ಅದರ ವರ್ಗಗಳು ಹಾಗೂ ಗುಂಪುಗಳು ಕೆಲವನ್ನು ನಿಯಂತ್ರಿಸುತ್ತವೆ. ತುಂಬಾ ಸರ್ತಿ ನಾವು ನಮಗೆ ಬೇಕಾದ್ದನ್ನು ನಮಗೆ ಬೇಕಾದ ರೀತಿಯಲ್ಲಿ ಅರ್ಥ ಮಾಡಿಕೊಳ್ಳುತ್ತೇವೆ. ಅದು ಸಮಸ್ಯೆಯೂ ಆಗುತ್ತದೆ. ನಮಗೆ ಇರುವ ಸಮಸ್ಯೆಯೂ ಬೇರೆ ರೀತಿಯಲ್ಲಿದೆ. ಅಂದರೆ ಅದನ್ನು ಹೀಗೆ ಹೇಳಬಹುದು: ಯಾವುದನ್ನು ನಾವು ಈವತ್ತು ಸಾಹಿತ್ಯವೆಂದು ಹೇಳುತ್ತೇವೆಯೋ ಅದು ಇದ್ದಕಿದ್ದಂತೆಯೇ ಹುಟ್ಟಿಲ್ಲ. ಅದು ಸಂವಹನದ ಒಂದು ಮಾದರಿಯೂ ಹೌದು. ಅದರಲ್ಲಿ ನಾವು ಹೇಳಬೇಕಾದ ಅನೇಕ ಸಂಗತಿಗಳು ಸೇರಿಕೊಂಡಿರುತ್ತವೆ. ಬರೆಯುವುದು ಅಂದರೆ ಅದು ನಮ್ಮ ಉದ್ದೇಶವನ್ನು ಒಳಗೊಂಡಿರುತ್ತವೆ. ಆ ಉದ್ದೇಶವು ನಮಗೆ ಹೆಚ್ಚು ಮುಖ್ಯವೂ ಹೌದು. ಬರಹ ಮತ್ತು ಅದರ ಹಿಂದೆ ಇರುವ ಲೇಖಕರು ಇದನ್ನು ಹೊರತುಪಡಿಸಿಕೊಂಡು ಇರುವುದೂ ಅಸಾಧ್ಯವೂ ಹೌದು. ಬರಹವನ್ನು ಲೇಖಕನು ಒಂದು ಸನ್ನಿವೇಶದಲ್ಲಿ ನಿಂತುಕೊಂಡು ಮಾಡುತ್ತಾನೆ. ಅವನಿಗೆ ಅದು ಅಗತ್ಯವೂ ಆಗಿರುತ್ತದೆ. ವಾಸ್ತವವಾಗಿ ಯಾವುದೇ ನಮ್ಮ ಬರಹವು ಒಂದು ಸನ್ನಿವೇಶವನ್ನು ಹೇಳುತ್ತದೆ. ಲೇಖಕನು ಯಾವುದೇ ಕಾಲವನ್ನು ಮತ್ತು ಸ್ಥಳವನ್ನು ಹೊಂದುವುದು ಅನಿವಾರ್ಯವೂ ಹೌದು. ತೇಜಸ್ವಿಯವರು ಬರೆದ ಸನ್ನಿವೇಶ ಮತ್ತು ಅವರು ಬರೆದ ಸ್ಥಳವು ನಮಗೆ ಹೆಚ್ಚು ಮುಖ್ಯ. ಅಂದರೆ ನಾವು ಅವರನ್ನು ನಿರ್ದಿಷ್ಟವಾದ ಒಂದು ಸಮಾಜದ ರಚನೆಯೊಳಗೆ ನೋಡಬೇಕಾಗುತ್ತದೆ. ಸಾಹಿತ್ಯ ಮತ್ತು ಇತರ ಕಲೆಗಳು ನಿರ್ದಿಷ್ಟವಾದ ಒಂದು ಸಂದರ್ಭವನ್ನು ಹೇಳುತ್ತದೆ. ನಮ್ಮ ಆಲೋಚನೆ ಮತ್ತು ಅದರ ಸನ್ನಿವೇಶವು ಎಷ್ಟು ಮುಖ್ಯವೆಂದರೆ ಅದನ್ನು ಬಿಟ್ಟು ನಾವು ಯಾವುದನ್ನು ಮಾಡಲಾರೆವು. ನಮ್ಮ ಆಲೋಚನೆಯು ನಮ್ಮ ನಡತೆಯನ್ನು ವಿವರಿಸುತ್ತದೆ. ಆಲೋಚನೆಯೆನ್ನುವುದು ಮೂಲಭೂತವಾಗಿ ಒಂದು ಶೂನ್ಯವೂ ಅಲ್ಲ. ಸಾಹಿತ್ಯ ಮತ್ತು ಸಮಾಜ ಹಾಗೂ ಸಾಹಿತ್ಯದ ವಸ್ತು ಮತ್ತು ಅದರ ಶೈಲಿಗಳಿಗೆ ಇರುವ ಸಂಬಂಧವನ್ನು ಲುಕಾಕ್ಸ್

ಹೇಳುತ್ತಾನೆ. ಒಂದು ಜನ ಸಮೂಹದ ನಡುವೆಯೇ ಸಾಹಿತ್ಯವು ರೂಪು ತಳೆಯುತ್ತದೆ ಎಂದು ಅವನ ಅಭಿಪ್ರಾಯವಾಗಿದೆ. ನಾವು ಹೇಗೆ ವರ್ತಿಸಬೇಕು ಮತ್ತು ಹೇಗೆ ವ್ಯವಹರಿಸಬೇಕು ಮತ್ತು ಯಾವುದನ್ನು ಮಾತಾಡಬೇಕು, ಯಾವುದನ್ನು ಹೇಳಬಾರದು ಮತ್ತು ಹೇಗೆ ಹೇಳಬೇಕು ಎನ್ನುವುದನ್ನು ಕೂಡಾ ಸಮಾಜವೇ ನಿರ್ಧರಿಸುತ್ತದೆ. ಅದು ಅದರ ಅಗತ್ಯವೂ ಆಗಿರುತ್ತದೆ. ಸಂಸ್ಕಾರ ಕಾದಂಬರಿಯಲ್ಲಿ ಬರುವ ನಾರಣಪ್ಪ ಮತ್ತು ಪ್ರಾಣೇಶಾಚಾರ್ಯರನ್ನು ನೋಡಿದರೆ ಈ ಮಾತು ಹೆಚ್ಚು ಸತ್ಯವಾಗಿಯೇ ಕಾಣಿಸುತ್ತದೆ. ಅವರು ವರ್ತಿಸುವ ಕ್ರಮವನ್ನು ನೋಡಿದರೆ ಪ್ರಾಣೇಶಾಚಾರ್ಯರು ಒಂದು ಬಗೆಯಲ್ಲಿ ವ್ಯವಹರಿಸುತ್ತಾನೆ. ಅವರಿಗೆ ನೈತಿಕ ಕಾಳಜಿಗಳು ಇವೆ. ಆದರೆ ನಾರಣಪ್ಪನು ಹಾಗೆ ಇಲ್ಲ. ಅವನು ಧರ್ಮವನ್ನು ಬಿಟ್ಟವನು. ಆದರೆ ಇಬ್ಬರೂ ಒಂದು ಸಮಾಜದಲ್ಲಿ ಇದ್ದಾರೆ ಎನ್ನುವುದೇ ಅನಂತಮೂರ್ತಿಯವರಿಗೆ ಮುಖ್ಯ. ನಾರಣಪ್ಪನ ಸ್ವಭಾವವು ಬೇರೆ ರೀತಿಯದೂ ಹೌದು. ಅವನು ತನ್ನನ್ನು ಮಾತ್ರವೇ ನೋಡಿಕೊಳ್ಳುತ್ತಾನೆ. ಶೂದ್ರ ಹೆಂಗಸು ಚಂದ್ರಿಯನ್ನು ಸೇರುತ್ತಾನೆ. ಅವನಿಗೆ ನೈತಿಕತೆಯ ಪ್ರಶ್ನೆಯೇ ಇಲ್ಲ. ಕಾರಂತರು ಕೂಡಾ ಈ ತರಹದ ಪ್ರಶ್ನೆಗಳನ್ನು ಕೇಳಿದ್ದಾರೆ. ಅವರ ಬಹುತೇಕ ಕಾದಂಬರಿಗಳಲ್ಲಿ ಬರುವ ನೈತಿಕ ಪ್ರಶ್ನೆಗಳು ಸಮಾಜವನ್ನು ಹೇಳುತ್ತವೆ. ಅವರು ಯಾವುದನ್ನು ಬರೆದರೋ ಅದನ್ನು ಸಮಾಜದಿಂದ ಬೇರೆ ಮಾಡಿ ನೋಡಲು ಬರುವುದಿಲ್ಲ ಓ ಅರ್ಥದಲ್ಲಿ ಅನುಭವದೊಂದಿಗೆ ಲೇಖಕರು ಸಮನ್ವಯವನ್ನು ಮಾಡುತ್ತಾರೆ. ಅದು ಅವರಿಗೆ ಅಗತ್ಯವೂ ಆಗಿರುತ್ತದೆ. ಲೇಖಕರ ರಚನೆಯು ಅವರ ಮನೋಸ್ಥಿತಿಯನ್ನು ಹೇಳುತ್ತದೆ. ನಮ್ಮ ಪ್ರಜ್ಞೆಯನ್ನು, ನಮ್ಮ ಸಾಮಾನ್ಯವಾದ ಜ್ಞಾನವನ್ನು ಸಮಾಜವು ನಿರ್ಧರಿಸುತ್ತದೆ. ಮತ್ತು ಅದು ಬಹಳ ಮುಖ್ಯವಾದ ಪಾತ್ರವನ್ನು ವಹಿಸುತ್ತದೆ. ಅದರಲ್ಲಿ ನಮ್ಮ ಜೀವನ ಮತ್ತು ಅದರ ಸ್ವರೂಪವೂ ಬಹಳ ಮುಖ್ಯವಾಗುತ್ತದೆ. ವ್ಯಕ್ತಿ ಮತ್ತು ಅವನ ನಡತೆಯನ್ನು ವ್ಯಕ್ತಿಯೇ ನಿರ್ಧರಿಸುವುದೂ ಇಲ್ಲ. ವ್ಯಕ್ತಿ ಮತ್ತು ಅವನ ಪ್ರಶ್ನೆಗಳನ್ನು ಒಂದು ಸಮಾಜವು ತನಗೆ ಬೇಕಾದ ರೀತಿಯಲ್ಲಿ ನಿರೂಪಿಸುತ್ತದೆ. ಅದು ಅಗತ್ಯವೂ ಹೌದು ವ್ಯಕ್ತಿ ಮತ್ತು ಅವನ ಜೀವನವನ್ನು ನಿರ್ಧರಿಸುವುದೂ ಕೂಡಾ ಸಮಾಜವೇ ಆಗಿರುತ್ತದೆ. ವ್ಯಕ್ತಿ ಮತ್ತು ಅವನ ನಡತೆಯನ್ನು ವ್ಯಕ್ತಿಯೇ ನಿರ್ಧರಿಸುವುದೂ ಇಲ್ಲ. ಅವನ ಸ್ವಭಾವವನ್ನು ಸಮಾಜವು ನಿಯಂತ್ರಿಸುತ್ತದೆ. ಆದ್ದರಿಂದ ಅವನು ರಚಿಸಿದ ಸಾಹಿತ್ಯವೂ ಕೂಡಾ ಸಮಾಜವನ್ನು ಹೇಳುತ್ತದೆ. ಅದರಲ್ಲಿ ಬಹಳ ಮಟ್ಟಿಗೆ ಕೆಲವು ಸಂಗತಿಗಳು ಸೇರಿಕೊಳ್ಳುತ್ತವೆ. ಸಾಹಿತ್ಯವೂ ಈ ದೃಷ್ಟಿಯಿಂದ ಒಂದು ರಚನೆ ಮತ್ತು ಅದರಲ್ಲಿ ಅವನ ಕೌಶಲವು ವ್ಯಕ್ತವಾಗುತ್ತದೆ. ಮತ್ತು ಅದರಲ್ಲಿ

ಅವನ ಸ್ವಭಾವವೂ ಪ್ರವೇಶವನ್ನು ಪಡೆಯುತ್ತವೆ. ಸಮಾಜದ ಅನೇಕ ಲಕ್ಷಣಗಳು ಸಾಹಿತ್ಯದಲ್ಲಿ ವ್ಯಕ್ತವಾಗುತ್ತವೆ. ನಮ್ಮ ಅನುಭವ ಮತ್ತು ನಮ್ಮ ಪ್ರಜ್ಞೆಯನ್ನು ನಿರಾಕರಿಸಿಕೊಂಡು ಸಾಹಿತ್ಯವು ಇರುವುದು ಸಾಧ್ಯವೇ ಇಲ್ಲ. ಆದರೆ ಸಮಾಜವು ಸಾಹಿತ್ಯದಲ್ಲಿ ಬರುವ ಕ್ರಮವು ಮಾತ್ರವೇ ಬೇರೆ. ಅವನು ಹೇಗೆ ಗ್ರಹಿಸುತ್ತಾನೆ ಮತ್ತು ಹೇಗೆ ಅದನ್ನು ನೋಡುತ್ತಾನೆ ಎನ್ನುವುದೇ ಮೂಲಭೂತವಾದ ಪ್ರಶ್ನೆಯೂ ಆಗಿದೆ. ನಮ್ಮ ಅನುಭವ ಮತ್ತು ನಮ್ಮ ಪ್ರತಿಕ್ರಿಯೆಯನ್ನು ನಮ್ಮ ಬರಹಗಳು ಹೇಳುತ್ತವೆ. ಅದು ನಮಗೆ ಅತ್ಯಂತ ಅಗತ್ಯವಾದ ಒಂದು ಸಂಗತಿಯೂ ಹೌದು. ಅಂದರೆ ಸಾಹಿತ್ಯವೆನ್ನುವುದು ಬರೀ ಶೂನ್ಯವನ್ನು ಹೇಳುವುದಿಲ್ಲ. ಅದರಲ್ಲಿ ಸಮಾಜ ಮತ್ತು ಅದರ ಚಲನೆಯೂ ವ್ಯಕ್ತವಾಗುತ್ತವೆ. ಸಾಹಿತ್ಯಕ್ಕೆ ಒಂದು ರಾಚನಿಕವಾದ ಗುಣವೂ ಇರುತ್ತದೆ. ಪ್ರಜ್ಞೆಗೂ ನಾವು ಯಾವ ಗುಂಪುಗಳಲ್ಲಿ ವಾಸ ಮಾಡುತ್ತೇವೆಯೋ ಅದಕ್ಕೂ ಸಂಬಂಧವು ಇರುತ್ತದೆ. ನಮ್ಮ ಅನುಭವವನ್ನು ಮತ್ತು ವಿಶ್ವಾತ್ಮಕತೆಯನ್ನು ನಿರ್ದಿಷ್ಟವಾಗಿಯೇ ನೋಡುತ್ತೇವೆ. ಸಾಹಿತ್ಯ ಮತ್ತು ಅದರ ರಾಚನಿಕತೆಯು ಈ ದೃಷ್ಟಿಯಿಂದ ಬಹಳ ಮುಖ್ಯವಾಗಿರುತ್ತದೆ. ಮನಸ್ಸು ಮತ್ತು ಅದರ ಕ್ರಿಯಾಶೀಲತೆಯ ಭಾಗವಾಗಿಯೇ ಸಾಹಿತ್ಯವು ಹುಟ್ಟುತ್ತದೆ. ಸಾಹಿತ್ಯದಲ್ಲಿ ಯಾವುದನ್ನು ಬರೆಯಬೇಕು ಮತ್ತು ಯಾವುದನ್ನು ಬರೆಯಬಾರದು ಎನ್ನುವುದರ ನಿರ್ಧಾರವನ್ನು ನಾವು ತೆಗೆದುಕೊಳ್ಳುತ್ತೇವೆ. ಅದು ನಮ್ಮ ಆಯ್ಕೆಯೂ ಆಗಿರುತ್ತದೆ. ಸಾಹಿತ್ಯದಲ್ಲಿ ಹೇಳುವ ಅಂಶಕ್ಕಿಂತಲೂ ಬೇರೆಯಾದ ಅನೇಕ ಅಂಶಗಳು ಸಾಹಿತ್ಯದಲ್ಲಿ ಇರುತ್ತವೆ. ಮತ್ತು ಅದು ಲಯವನ್ನು ಸೂಚಿಸುತ್ತದೆ. ಪ್ರತೀಕವನ್ನು ಹೇಳುತ್ತದೆ. ಮತ್ತು ಅದರ ನಡುವೆ ಒಂದು ಅಂತರವೂ ಇರುತ್ತದೆ. ಮನುಷ್ಯ ಮತ್ತು ಅವನ ನಡವಳಿಕೆಗಳೇ ಮೂಲಭೂತವಾಗಿ ಒಂದು ಪ್ರಜ್ಞೆಯನ್ನು ಹೇಳುತ್ತವೆ. ಅವುಗಳು ಸಾಂಕೇತಿಕವೂ ಆಗಿರುತ್ತವೆ. ಕಾರಂತರು ಇಟ್ಟುಕೊಂಡ ಸಾಮಾಜಿಕ ಸಂಬಂಧವು ಮತ್ತೊಂದು ಬಗೆಯದು. ಅದನ್ನು ಕುವೆಂಪುರವರಲ್ಲಿ ಕಾಣುವುದಿಲ್ಲ. ಅದನ್ನು ಹೀಗೆಯೂ ಹೇಳಬಹುದು: ಕಾರಂತರ ನಿಲುವು ಒಂದು ಬಗೆಯದು. ಅದರಲ್ಲಿ ಕರಾವಳಿಯ ಪ್ರಾಂತ್ಯವೂ ಇದೆ. ಅದರೆ ಅದನ್ನು ಕುವೆಂಪು ಹೇಳುವುದು ಸಾಧ್ಯವೇ ಇರಲಿಲ್ಲ. ಅವರಿಬ್ಬರು ಬರೆದ ಸಮಾಜವು ಒಂದು ಬಗೆಯದು. ಆದರೆ ಅದನ್ನೇ ದೇವನೂರು ಬರೆಯುವುದು ಸಾಧ್ಯವಿರಲಿಲ್ಲ. ಯಾವುದೇ ರಚನೆಗಳು ಈ ದೃಷ್ಟಿಯಿಂದ ಭಿನ್ನತೆಯನ್ನು ಹೇಳುತ್ತವೆ. ದೇವನೂರರು ಹೇಳಿದ್ದು ಮತ್ತು ಅವರು ಗ್ರಹಿಸಿದ್ದು ಅವರ ಮನೋಭಾವವನ್ನು ಹೇಳುತ್ತದೆ. ಅವರ ಅನುಭವದ ಲೋಕವನ್ನು ಪ್ರತಿನಿಧಿಸುತ್ತದೆ. ಹಾಗೆ ನೋಡುವುದಿದ್ದರೆ ನಮ್ಮ ನಡತೆಗೆ ಚಾರಿತ್ರಿಕತೆಯೂ ಇರುತ್ತದೆ. ಅದು ರಚನೆಯೂ ಆಗಿದೆ. ಅದರ ಹಿಂದೆ ಬೇರೆ

ಅಂಶಗಳೂ ಇರುತ್ತವೆ. ಲೇಖಕ ಮತ್ತು ಅವನ ಸ್ವಾತಂತ್ರ್ಯವು ಈ ದೃಷ್ಟಿಯಿಂದ ಸಂವಾದಿಯೂ ಆಗಿರುತ್ತದೆ. ಅದರ ಹಿಂದೆ ವಿವಿಧ ಅಂಶಗಳೂ ಇರುತ್ತವೆ. ಮತ್ತು ಬರಹ ಎನ್ನುವುದು ಒಂದು ರೀತಿಯಿಂದ ಬೌದ್ಧಿಕವಾದ ಚಲನೆಯೂ ಆಗಿರುತ್ತದೆ. ಮನುಷ್ಯ ಮತ್ತು ಅವನ ನಡವಳಿಕೆಗಳು ಸಮಾಜವನ್ನು ಹೇಳುತ್ತವೆ. ಯಾವುದೆ ಲೇಖಕನು ಅದನ್ನು ಮೀರಲಾರ. ಮನುಷ್ಯ ಮತ್ತು ಅವನ ಸ್ವಭಾವವನ್ನು ನೋಡುವಾಗ ನಾವು ನಿರ್ದಿಷ್ಟವಾಗಿ ಒಂದು ಕಾಲವನ್ನು ಗಮನಿಸಬೇಕಾಗುತ್ತದೆ. ಸಮಾಜಶಾಸ್ತ್ರೀಯವಾದ ಸಾಂಸ್ಕೃತಿಕ ಚರ್ಚೆಗಳು ಮೂಲಭೂತವಾಗಿ ಅಂತರ್ ಶಿಸ್ತಿನ ಅಧ್ಯಯನವೂ ಆಗುತ್ತದೆ. ಸಾಹಿತ್ಯವನ್ನು ಓದುವುದು ಮತ್ತು ಗ್ರಹಿಸಿಕೊಳ್ಳುವುದು ಅಂದರೆ ನಾವು ಸಮಾಜವನ್ನು ಅರ್ಥ ಮಾಡಿಕೊಳ್ಳುವ ವಿಧಾನವೂ ಹೌದು. ಸಮಾಜ ಮತ್ತು ಜೀವನವು ಜೊತೆಗೆ ಹೋಗುತ್ತವೆ. ಅದರಲ್ಲಿ ವ್ಯತ್ಯಾಸವೂ ಇರುವುದೂ ಇಲ್ಲ. ಅಂದರೆ ಜೀವನವನ್ನು ನಾವು ನಡೆಸುವುದು ಅಂದರೆ ಒಂದು ಸ್ಥಿತಿಯನ್ನು ಅನುಭವಿಸುವುದೂ ಹೌದು. ಸಮಾಜವು ಹೇಳುವ ನಿಯಮವನ್ನು ನಾವು ಮುರಿಯುವುದೂ ಇಲ್ಲ. ಮುರಿದರೆ ಅದಕ್ಕೆ ಬೇರೆ ಅರ್ಥವೂ ಬರುತ್ತದೆ. ಈ ದೃಷ್ಟಿಯಿಂದ ನಮಗೆ ಮತ್ತು ಸಮಾಜಕ್ಕೆ ದ್ವಂದ್ವಾತ್ಮಕವಾದ ಒಂದು ಸಂಬಂಧವೂ ಇರುತ್ತದೆ. ಸಮಾಜ ಮತ್ತು ಸಾಹಿತ್ಯವನ್ನು ಅಥವಾ ಸೌಂದರ್ಯಶಾಸ್ತ್ರ ಮತ್ತು ಚರಿತ್ರೆಯನ್ನು ಜೊತೆಗೆ ನೋಡಬೇಕಾಗುತ್ತದೆ. ಅದರಲ್ಲಿ ಬರೀ ಸೌಂದರ್ಯದ ಅಂಶಗಳು ಮಾತ್ರವೇ ಇದೆ ಮತ್ತು ಬೇರೆ ಯಾವುದೆ ಸಂಗತಿಗಳು ಇಲ್ಲವೆಂದು ಭಾವಿಸಬೇಕಾದ ಅಗತ್ಯವಿಲ್ಲ. ಸಾಹಿತ್ಯವೂ ಒಂದು ಅರ್ಥದಲ್ಲಿ ನಿಜವಾದ ಒಂದು ನಿಯಮವನ್ನು ಹೊಂದಿರುತ್ತದೆ. ಅದಕ್ಕೆ ಸಾಂಕೇತಿಕವಾದ ಒಂದು ಅರ್ಥವೂ ಇರುತ್ತದೆ. ಅಂದರೆ ಅದು ಕೂಡಾ ಮನುಷ್ಯನ ಜ್ಞಾನ ಮತ್ತು ಅದರ ಶಿಸ್ತನ್ನು ಹೇಳುತ್ತದೆ. ಮಾನವಿಕವೆಂದು ಈ ಅರ್ಥದಲ್ಲಿ ಹೇಳುತ್ತೇವೆ. ಸಾಹಿತ್ಯವೂ ಒಂದು ರಚನೆಯೂ ಆಗಿರುವುದರಿಂದ ಅದರ ಅರ್ಥವೂ ಕೆಲವು ನಿಯಮವನ್ನು ಹೊಂದಿರುತ್ತವೆ. ರಚನೆಯು ಪ್ರಯೋಗವನ್ನು ಹೇಳುತ್ತದೆ. ಬರೆಯುವ ಮೊದಲು ನಮಗೆ ಒಂದು ಪ್ರಮೇಯವಿರುತ್ತದೆ. ಮತ್ತು ಬರೆಯುವುದು ಒಂದು ಪ್ರಯೋಗ. ಅದರ ಪರಿಣಾಮವು ಮಾತ್ರವೇ ಸಾಹಿತ್ಯ. ಅದು ಕೆಲವನ್ನು ಹೇಳುತ್ತದೆ.. ಪ್ರಮೇಯವು ನಮ್ಮ ಆಲೋಚನೆಯನ್ನು ಸೂಚಿಸಿದರೆ ಅದರ ಪರಿಣಾಮವು ಮಾತ್ರವೇ ಭಿನ್ನವಾಗಿರುತ್ತದೆ. ಬರಹವು ಒಂದು ನಿರ್ದಿಷ್ಟವಾದ ಫಲಿತವನ್ನು ಹೇಳುತ್ತದೆ. ಅದು ಅನಿರ್ದಿಷ್ಟವಾದ ಪ್ರಕ್ರಿಯೆಯು ಆಗಿರುವುದಿಲ್ಲ. ಸಾಹಿತ್ಯ ಮತ್ತು ಅದರ ರಚನೆಗೆ ಒಂದು ರೂಪವೂ ಇರುತ್ತದೆ. ಅದರ ಹಿಂದೆ ಒಂದು ತತ್ವಜ್ಞಾನವೂ ಇರುತ್ತದೆ. ರಚನೆಯು ಪ್ರಾಯೋಗಿಕವೂ ಹೌದು. ಯಾವುದೇ ಸೈದ್ಧಾಂತಿಕವಾದ

ಹಿನ್ನೆಲೆಯು ಇಲ್ಲದೆ ಯಾವುದೇ ಸಾಹಿತ್ಯವು ರಚನೆಯಾಗುವುದಿಲ್ಲ. ಸಾಹಿತ್ಯವು ನಿರ್ದಿಷ್ಟವಾದ ಕೆಲವು ಮೌಲ್ಯಗಳನ್ನು ಹೇಳುತ್ತವೆ. ಮತ್ತು ನಿರ್ದಿಷ್ಟವಾದ ಕೆಲವು ಪಾತ್ರವನ್ನು ಅದು ವಹಿಸುತ್ತದೆ. ಅರ್ಥವೇ ಇಲ್ಲದ ರಚನೆಯು ಇರುವುದಿಲ್ಲ. ಇಲ್ಲಿ ಎರಡು ಪ್ರಕ್ರಿಯೆಗಳು ನಡೆಯುತ್ತವೆ. ಯಾವುದು ಹಿಂದೆ ರಚಿತವಾಗಿದೆಯೋ ಅದನ್ನು ಒಡೆದು ಹೊಸರಚನೆಗಳು ಆಗುತ್ತವೆ. ಹಿಂದೆ ಇದ್ದ ರಚನೆಗಳ ಮುಂದುವರಿಕೆ ಮತ್ತು ಅದರ ಸ್ವರೂಪದ ಕೆಲವು ಅಂಶಗಳನ್ನು ಒಳಗೊಳ್ಳುವಿಕೆಯೂ ರಚನೆಯಲ್ಲಿ ಅತ್ಯಂತ ಮಹತ್ವದ ಪಾತ್ರವನ್ನು ವಹಿಸುತ್ತದೆ. ರಚನೆಯು ಆಗುತ್ತದೆ. ಅದು ಚಾರಿತ್ರಿಕವಾದ ಅಗತ್ಯವೂ ಆಗಿರುತ್ತದೆ. ಅದು ಆಲೋಚನೆಯನ್ನು ಸಂಕೇತಿಸುತ್ತದೆ. ರಚನೆಯು ನಿಯಮವನ್ನು ಹೊಂದಿರುವುದೂ ಅಷ್ಟೇ ಅಗತ್ಯವೂ ಆಗಿರುತ್ತದೆ. ನಮ್ಮ ಸಂವೇದನೆ ಮತ್ತು ನಮ್ಮ ರಚನೆಗೆ ಸಂಬಂಧವಿದೆ. ರಚನೆಗಳು ಮೂಲಭೂತವಾಗಿ ಸಮಾಜ ಮತ್ತು ಅದರ ವಾಸ್ತವವನ್ನು ಹೇಳುತ್ತವೆ. ಅದು ಉದ್ದೇಶಿತವೂ ಹೌದು. ಬರಹವೂ ಒಂದು ಬಗೆಯ ಕಾರ್ಯ. ಅದು ಸಮಾಜದ ಅಗತ್ಯವೂ ಆಗಿರುತ್ತದೆ. ಯಾವುದೇ ರಚನೆಗಳು ಅದರ ಹಿಂದಿರುವ ಮನೋಸ್ಥಿತಿಯನ್ನು ಹೇಳುತ್ತವೆ. ಯಾವುದಾದರೂ ಘಟಿಸದೆ ಹೋದರೆ ಯಾವುದೇ ರಚನೆಯು ಸಾಧ್ಯವೇ ಇಲ್ಲವೆಂದು ಪೈಗಾಟ್ ಹೇಳುತ್ತಾನೆ. ನಮ್ಮ ದಿನಂದಿನದ ಅನೇಕ ಸಂಗತಿಗಳು ಆಗುತ್ತವೆ. ಮತ್ತು ಅದರಲ್ಲಿಯೂ ಬೇರೆ ಬೇರೆ ರಚನೆಗಳು ಇರುತ್ತವೆ. ದಿನಂದಿನದ ಅನುಭವವೂ ರಚನೆಯೇ ಆಗಿರುವುದರಿಂದ ಅದು ಕೆಲವನ್ನು ಹೇಳುತ್ತವೆ. ಮತ್ತು ಅದರಲ್ಲಿ ಅರ್ಥವೂ ಇರುತ್ತದೆ. ರಚನೆ ಮತ್ತು ಅದರ ಅರ್ಥವನ್ನು ಅದರ ಕಾರ್ಯಗಳೇ ಹೇಳುತ್ತವೆ. ಬರಹವು ಯಾವುದನ್ನು ಹೇಳದೇ ಹೋಗಿದ್ದರೆ ಅದರಲ್ಲಿ ಅರ್ಥವೂ ಇರುತ್ತಿರಲಿಲ್ಲ. ನಮ್ಮ ಅನೇಕ ರಚನೆಗಳು ಸೇರಿಕೊಂಡು ಚರಿತ್ರೆಯು ಆಗಿರುತ್ತದೆ. ಯಾವುದನ್ನು ಸಮಾಜದ ವರ್ಗವೆಂದು ಹೇಳುತ್ತೇವೆಯೋ ಅದರ ಅರ್ಥವನ್ನು ಅದರ ಕ್ರಿಯೆಗಳು ಹೇಳುತ್ತವೆ. ವ್ಯಕ್ತಿ ಮತ್ತು ಅವನ ರಚನೆಗಳು ಒಂದು ಬಗೆಯಲ್ಲಿ ಇರುತ್ತವೆ. ಸಮಾಜವು ರಚಿಸುವ ಸಂಗತಿಗಳು ಮತ್ತೊಂದು ಬಗೆಯಲ್ಲಿ ಇರುತ್ತವೆ. ಆದರೆ ವರ್ಗಗಳು ಮತ್ತು ಅವುಗಳ ರಚನೆಯು ಒಂದು ಬಗೆಯಲ್ಲಿ ಇರುತ್ತವೆ. ಮತ್ತು ಆ ರಚನೆಗಳೂ ಕೂಡಾ ಒಂದು ಇತಿಹಾಸವನ್ನು ಹೇಳುತ್ತವೆ. ವರ್ಗವೂ ಮನುಷ್ಯ ಮತ್ತು ಅವನ ಆಸೆಗಳನ್ನು ಹೇಳುತ್ತವೆ. ಅದು ಆಲೋಚನೆಗಳ ಪ್ರತೀಕ. ಆದರೆ ಒಂದು ಸಮಾಜವು ಈ ಮಾದರಿಯನ್ನು ರಚಿಸುತ್ತದೆ. ಆದರೆ ಅದುವೇ ಅಂತಿಮವೂ ಆಗಿರುವುದಿಲ್ಲ. ಅದರ ಹಿಂದೆ ಬೇರೆ ಒತ್ತಡಗಳೂ ಕೆಲಸವನ್ನು ಮಾಡುತ್ತವೆ. ಇದನ್ನು ನಾವು ಈವತ್ತು ಬರಹಕ್ಕೂ ಅನ್ವಯ ಮಾಡಲು ಸಾಧ್ಯ. ಬರಹವೂ ಒಂದು ಬಗೆಯಲ್ಲಿ

ಸಾಮಾಜಿಕವಾದ ಕೆಲಸವಾಗಿದೆ. ಕೃತಿಯು ಹುಟ್ಟುವುದು ಮತ್ತು ಅದರ ಕ್ರಿಯಾತ್ಮಕವಾದ ಕೆಲಸವನ್ನು ಮಾಡುವುದು ನಮ್ಮ ಆಲೋಚನೆಯ ದೆಸೆಯಿಂದ. ಅದು ನಮ್ಮ ಸನ್ನಿವೇಶದ ಅಗತ್ಯವೂ ಆಗಿದೆ. ಅದರ ಸಂಯೋಜನೆಯು ಮೂಲಭೂತವಾಗಿ ತಾರ್ಕಿಕವಾಗದೇ ಹೋಗಬಹುದು. ಆದರೆ ಅದರಲ್ಲಿ ನಿರ್ದಿಷ್ಟವಾದ ಕ್ರಿಯೆಯು ಇರುತ್ತದೆ. ಪಠ್ಯವನ್ನು ಸಂಯೋಜನೆ ಮಾಡಲಾಗಿದೆ. ಪಠ್ಯವು ಯೋಜಿತವಾಗಿರುತ್ತದೆ. ಅದರಲ್ಲಿ ಲೋಕ ದೃಷ್ಟಿಯೂ ಇರುತ್ತದೆ. ಸಾಹಿತ್ಯವು ಅಸಮಗ್ರವಾಗಿದ್ದರೆ ಅದನ್ನು ಗ್ರಹಿಸುವುದು ಕಷ್ಟವೂ ಹೌದು. ಅದು ಸಮಗ್ರವಾಗಿರುವುದರ ಕಾರಣದಿಂದ ಅದರ ಅರ್ಥವೂ ವಿಶಿಷ್ಟವಾಗಿರುತ್ತದೆ. ಮನಸ್ಸು ಮತ್ತು ಅದರಲ್ಲಿ ಬರುವ ಆಲೋಚನೆಯು ನಮಗೆ ಬರೆಯುವಂತೆ ಪ್ರೇರಣೆಯನ್ನು ನೀಡುತ್ತದೆ. ಕಾರಂತರು ಎತ್ತುವ ಪ್ರಶ್ನೆಗಳು ಮತ್ತು ಗುಲ್ವಾಡಿಯವರು ಎತ್ತುವ ಪ್ರಶ್ನೆಗಳು ಯಾಕೆ ಆ ರೀತಿಯಲ್ಲಿದೆ ಎಂದು ಕೇಳಿದರೆ ಮೇಲಿನ ಮಾತಿಗೆ ಪುಷ್ಟಿಯು ದೊರೆಯುತ್ತದೆ. ಕಾರಂತರ ನಿಜವಾದ ಪ್ರಶ್ನೆಗಳು ಇರುವುದು ಸಮಾಜಕ್ಕೆ ಅವರ ಕಾದಂಬರಿಗಳು ವಾಸ್ತವವಾಗಿರುವುದು ಮಾತ್ರವೆ ಅಲ್ಲ, ಅವುಗಳು ನಮಗೆ ಸಾಮಾಜಿಕ ಜೀವನವನ್ನು ನೋಡಲು ಅವಕಾಶವನ್ನೂ ಮಾಡುತ್ತವೆ. ಅವರ ಜೀವನಾನುಭವವು ನಮಗೆ ಕೆಲವು ದೃಷ್ಟಿಯಿಂದ ಅತ್ಯಂತ ಮಹತ್ವದ್ದೂ ಹೌದು. ಅವರ ಜೀವನಾನುಭವ ಮತ್ತು ಅದರ ಶಕ್ತಿಯೇ ನಮಗೆ ಹೆಚ್ಚು ಮಹತ್ವದ್ದೂ ಆಗಿದೆ. ಬೆಟ್ಟದಜೀವ ಕಾದಂಬರಿಯ ನಿರೂಪಕನಿಗೂ ಉದ್ದೇಶವಿದೆ. ಕಾರಂತರ ಸಾಮಾಜಿಕ ಪ್ರಜ್ಞೆಯನ್ನು ಶಕ್ತಿಹೀನವೆಂದು ಹೇಳಲು ಬರುವುದೂ ಇಲ್ಲ. ಕುವೆಂಪು ಮತ್ತು ಅವರ ಬರಹಗಳಲ್ಲಿ ಕಾಣಿಸುವ ಸಮಾಜವು ನಿರ್ದಿಷ್ಟವಾಗಿ ಒಂದು ಪ್ರಕ್ರಿಯೆಯನ್ನು ಸೂಚಿಸಿದರೆ ಕಾರಂತರದು ಮತ್ತೊಂದು ಗ್ರಹಿಕೆಯನ್ನು ಮಂಡಿಸುತ್ತದೆ. ಆದರೆ ಇಬ್ಬರೂ ಲೇಖಕರು ಒಂದು ಚಾರಿತ್ರಿಕವಾದ ಘಟ್ಟವನ್ನು ಹೇಳುತ್ತಾರೆ. ಇಬ್ಬರೂ ಲೇಖಕರು ಒಂದು ಸನ್ನಿವೇಶವನ್ನು ನೋಡುವ ಮತ್ತು ಗ್ರಹಿಸುವ ಕ್ರಮಗಳು ಭಿನ್ನವಾಗುತ್ತದೆ. ಇದರ ನಡುವೆ ಚಾರಿತ್ರಿಕವಾಗಿಯೂ ಅನೇಕ ಸಂಗತಿಗಳು ನಡೆದಿವೆ. ಅವುಗಳು ಘಟಿಸಿವೆ. ಮತ್ತು ಅದರಲ್ಲಿ ಅನೇಕವು ಮಾಯವಾಗಿದೆ. ಅಂದರೆ ಅವುಗಳು ನಮ್ಮ ಕಣ್ಣಿಗೆ ಕಾಣಿಸುವುದೂ ಇಲ್ಲ. ಆದದ್ದು ಏನಿದೆ ಅದನ್ನು ಹೇಳಲು ನಮಗೆ ಯಾವುದೇ ದಾಖಲೆಗಳು ಇಲ್ಲವಾಗಿವೆ. ಆದರೆ ಅವುಗಳು ಘಟಿಸಿಲ್ಲವೆಂದು ಅರ್ಥವೂ ಅಲ್ಲ. ಆಗಿದ್ದಕ್ಕೆ ನಮ್ಮಲ್ಲಿ ಅನೇಕ ಸಂದರ್ಭದಲ್ಲಿ ಯಾವುದೇ ಪಳೆಯುಳಿಕೆಯೂ ದೊರೆಯವುದೂ ಇಲ್ಲ. ಜೀವನ ಮತ್ತು ಅದರಲ್ಲಿ ನಡೆದ ಸಂಗತಿಗಳೂ ಕೂಡಾ ಅನೇಕ ಸಂದರ್ಭದಲ್ಲಿ ಯಾವುದೇ ದಾಖಲೆಗಳು ಇಲ್ಲದೆ ಹೋಗುತ್ತವೆ. ವಾಸ್ತವವಾಗಿ ಯಾವುದೇ ಸಂಗತಿಗಳು ನಡೆದಾಗಲೂ

ಅದರಲ್ಲಿ ಒಂದು ನಿರ್ದಿಷ್ಟವಾದ ಪರಿಣಾಮವೂ ಇರುತ್ತದೆ. ಅಂದರೆ ಘಟನೆಗಳಿಗೆ ಬಹು ಆಯಾಮವೂ ಇರುತ್ತದೆ. ಹಾಗೆ ನೋಡುವುದಿದ್ದರೆ ಯಾವುದನ್ನು ಕಾರಂತರು ಬರೆದರೋ ಅದು ನಡೆದೇ ಇಲ್ಲವೆಂದು ಹೇಳಲು ಬರುವುದೂ ಇಲ್ಲ. ಅದು ಆಗಿದೆ. ಆದರೆ ಅದು ಆಗಿರುವುದಕ್ಕೆ ನಮಗೆ ಯಾವುದೇ ಸಾಕ್ಷ್ಯವೂ ಇಲ್ಲವಾಗಿದೆ. ಕಾರಂತರು ಯಾವುದನ್ನು ನೋಡಿದರೋ ಅಥವಾ ಯಾವುದನ್ನು ಕಲ್ಪಿಸಿಕೊಂಡರೋ ಎಂದು ಹೇಳುವುದು ಕಷ್ಟ. ಆದರೆ ಅದನ್ನು ನೋಡುವಾಗ ಕಾರಂತರು ಯಾವುದನ್ನು ಕಲ್ಪಿಸಿದರು ಮತ್ತು ಯಾವುದನ್ನು ನಿರಾಕರಿಸಿದರು ಎಂದು ಹೇಳುವುದು ಭಾರೀ ಕಷ್ಟ. ಕಾರಂತರು ಬರೆದಿರುವುದನ್ನು ಈವತ್ತು ಹೇಗೆ ಇದೆ ಎಂದು ಹೇಳಬಹುದಾದರೂ ಅದನ್ನು ಹೀಗೆಯೇ ಆಗಿದೆ ಎಂದು ಹೇಳುವುದಕ್ಕೆ ಯಾವುದೇ ದಾಖಲೆಗಳು ಇಲ್ಲವಾಗಿದೆ. ಅನೇಕ ಸಂದರ್ಭದಲ್ಲಿ ಯಾವುದನ್ನು ನಾವು ಯಾವುದಕ್ಕೆ ಸಂವಾದಿಯಾಗಿ ನೋಡುತ್ತೇವೆ ಎಂದು ಹೇಳುವುದು ಕಷ್ಟವೂ ಹೌದು. ಅದರಲ್ಲಿ ಅನೇಕ ಸಂಕೀರ್ಣತೆಯು ಇರುತ್ತದೆ. ಅನೇಕ ಸಂಗತಿಗಳು ನಮ್ಮ ಮಾನಸಿಕವಾದ ಸ್ಥಿತಿಯ ಮೇಲೆ ಪ್ರಭಾವವನ್ನು ಬೀರುತ್ತದೆ. ಮತ್ತು ಅದರ ಪ್ರಭಾವವನ್ನು ನಾವು ಹೀಗೆಯೇ ಆಗಿದೆ ಎಂದು ಹೇಳಲು ಬರುವುದೂ ಇಲ್ಲ. ನಮ್ಮ ಸಾಮಾನ್ಯವಾದ ಜ್ಞಾನವನ್ನು ಮತ್ತು ಪ್ರಜ್ಞೆಯನ್ನು ಮೂಲಭೂತವಾಗಿ ಅನೇಕವು ಆಳುತ್ತವೆ. ಅದನ್ನು ನಾವು ನಿರಾಕರಿಸಲು ಬರುವುದೂ ಇಲ್ಲ. ಪ್ರಜ್ಞೆಗೆ ಯಾವುದು ಬರಬೇಕು ಮತ್ತು ಯಾವುದು ಬರಬಾರದು ಎಂದು ನಾವು ನಿರ್ಧರಿಸಲು ಬರುವುದೂ ಇಲ್ಲ. ಅದು ಆಗುತ್ತವೆ. ಅದರಲ್ಲಿ ಅನೇಕವು ನಮ್ಮ ಸುಪ್ತವಾದ ಪ್ರಜ್ಞೆಯ ಮೇಲೆ ಪ್ರಭಾವವನ್ನು ಬೀರುತ್ತವೆ. ಆದರೆ ಯಾವುದನ್ನು ನಾವು ಅಂಗೀಕರಿಸಬೇಕು ಮತ್ತು ಯಾವುದನ್ನು ನಿರಾಕರಿಸಬೇಕು ಎಂದು ಹೇಳುಲು ಬರುವುದೂ ಇಲ್ಲ. ಹಾಗಿರುವಾಗ ನಾವು ಯಾವುದನ್ನು ಆಯ್ಕೆ ಮಾಡಬೇಕು ಮತ್ತು ಅದನ್ನು ಹೇಗೆ ನಿರೂಪಿಸಬೇಕು ಎನ್ನುವುದೂ ಮುಖ್ಯವಾದ ಪ್ರಶ್ನೆಯೇ ಆಗುತ್ತದೆ. ನಮ್ಮ ಸಾಮಾನ್ಯವಾದ ಜ್ಞಾನವನ್ನು ಮತ್ತು ಅದರ ಪ್ರಜ್ಞೆಯ ವಿವರಣಾತ್ಮಕವಾದ ಸ್ವರೂಪವನ್ನು ಕೂಡಾ ಸಮಾಜವು ನಿರ್ಧಾರ ಮಾಡುತ್ತದೆ. ಅದನ್ನು ವ್ಯಕ್ತಿ ಮಾಡುತ್ತಾನೆ ಎಂದು ಹೇಳುವುದೂ ಕಷ್ಟವಾಗುತ್ತದೆ. ವ್ಯಕ್ತಿಯ ನಡವಳಿಕೆಯನ್ನು ವ್ಯಕ್ತಿಯೇ ನಿರ್ಧಾರ ಮಾಡುವುದೂ ಇಲ್ಲ. ಅದನ್ನು ಸಮಾಜವು ಅನೇಕ ಸರ್ತಿ ಹೇಳುತ್ತದೆ. ವ್ಯಕ್ತಿ ಮತ್ತು ಅವನ ನಡವಳಿಕೆಯು ನಿರ್ಧಾರವಾಗುವುದೂ ಕೂಡಾ ಸಮಾಜದಲ್ಲಿ. ಆದ್ದರಿಂದ ವ್ಯಕ್ತಿ ಮತ್ತು ಅವನ ಬರವಣಿಗೆಗೆ ಸಮಾಜವೂ ಒಂದು ಮಾನದಂಡವಾಗುತ್ತದೆ. ಈ ಕಾರಣದಿಂದಲೇ ಸಾಹಿತ್ಯಕ್ಕೆ ಸಮಾಜವೂ ಗುರಿಯಾಗುತ್ತದೆ. ನಮ್ಮ ಅನುಭವ ಮತ್ತು ಅದರ ಸ್ವರೂಪವೂ ನಿಗದಿಯಾಗುವುದು

ಸಮಾಜದಿಂದಲೇ. ಪ್ರಜ್ಞೆಯನ್ನು ನಾವು ಯಾವುದೋ ಪ್ರತ್ಯೇಕವಾದ ಸ್ವರೂಪವೆಂದು ಭಾವಿಸಬೇಕಾದ ಅಗತ್ಯವಿಲ್ಲ. ಪ್ರಜ್ಞೆಗೂ ಸಮಾಜದ ಗುಂಪುಗಳಿಗೂ ಒಂದು ಸಂಬಂಧವೂ ಇದೆ. ನಮ್ಮ ನಡತೆಗೆ ಒಂದು ಚಾರಿತ್ರಿಕವಾದ ನೆಲೆಯು ಇರುತ್ತದೆ. ಅಂದರೆ ಚರಿತ್ರತೆಯನ್ನು ಹೊರತುಪಡಿಸಿಕೊಂಡು ನಾವು ಇರುವುದು ಸಾಧ್ಯವೇ ಇಲ್ಲ. ಯಾವುದನ್ನು ಕಾರಂತರು ಬರೆದರೋ ಅದು ಈ ಅರ್ಥದಲ್ಲಿ ನಮ್ಮ ಸಮಾಜದ ಚರಿತ್ರೆಯನ್ನು ಹೇಳುತ್ತದೆ. ಅಂದರೆ ಅದರಲ್ಲಿ ನಾವು ನೋಡುವುದು ನಮ್ಮ ಚರಿತ್ರೆಯ ತುಣುಕುಗಳನ್ನು. ಅತ್ಯಂತ ಪ್ರತಿಭಾವಂತ ಲೇಖಕರು ಪ್ರಜ್ಞಾ ರಹಿತವಾಗಿ ಬರೆದರು ಎಂದು ಹೇಳಲು ಆಗುವುದೂ ಇಲ್ಲ. ಇಲ್ಲಿ ಮತ್ತೆ ಒಂದು ಪ್ರಶ್ನೆಯು ಇದೆ. ತೇಜಸ್ವಿಯವರ ಕಾದಂಬರಿಗಳ ಸಮಗ್ರತೆಗೂ ಅವರು ಹೇಳುವ ಮಲೆನಾಡು ಜೀವನ ಸಮುದಾಯಕ್ಕೂ ಸಂಬಂಧವಿದೆ. ಮಾಯಾಲೋಕದಲ್ಲಿ ಬರುವ ಏಡಿ ಹಿಡಿಯುವ ಪ್ರಸಂಗವನ್ನು ನೈತಿಕವೋ ಅಥವಾ ಅನೈತಿಕವೋ ಎಂದು ಹೇಳಲು ಬರುವುದೂ ಇಲ್ಲ. ಹಾಗೆ ನೋಡುವುದಿದ್ದರೆ ಒಟ್ಟಾರೆಯಾದ ಚಿಕ್ಕಮಗಳೂರು ಜಿಲ್ಲೆಯಲ್ಲಿ ಮೂಡಿಗೆರೆಯು ಒಂದು ಜಾಗ ಮಾತ್ರವೇ ಆಗಿದೆ. ಅದರಲ್ಲಿ ವರ್ಗಗಳು ಇವೆ. ಗುಂಪುಗಳು ಇವೆ. ದೊಡ್ಡದಾದ ಕಾಡು ಇದೆ. ಅಂದರೆ ಇದರ ಅಸ್ತಿತ್ವವನ್ನು ಈ ದೃಷ್ಟಿಯಲ್ಲಿ ನಾವು ಬೇರೆ ಆಡಲು ಬರುವುದೂ ಇಲ್ಲ. ಅದರಲ್ಲಿ ವಿವಿಧತೆಯು ಇದೆ. ಅದಕ್ಕೆ ಚರಿತ್ರೆಯೂ ಇದೆ. ಮತ್ತು ಅದರ ಚರಿತ್ರೆಯೆ ತೇಜಸ್ವಿಯವರ ಮೂಲಕ ನಮ್ಮ ಗಮನಕ್ಕೆ ಬರುತ್ತದೆ. ವಸಾಹತೋತ್ತರ ಕಾಲದ ಅನೇಕ ಸಂಗತಿಗಳನ್ನು ತೇಜಸ್ವಿಯವರು ಈ ಮೂಲಕವೇ ಹೇಳುತ್ತಾರೆ. ವಸಾಹತು ಕಾಲದ ಚರಿತ್ರೆಯನ್ನು ಕಾರಂತರು ಹೇಳುತ್ತಾರೆ. ಅವರಿಬ್ಬರೂ ಅಂತ ಅಲ್ಲ, ಅನೇಕ ಲೇಖಕರು ಬರೆಯಲು ಬಾರದ ಜನರ ಕಥನವನ್ನು ಹೇಳುತ್ತಾರೆ. ಅದೂ ನಮಗೆ ಮುಖ್ಯವಾಗುತ್ತದೆ. ಈ ದೃಷ್ಟಿಯಲ್ಲಿ ಸಾಮಾಜಿಕ ಚರಿತ್ರೆಕಾರರು ಹೇಳಿದ ಕ್ರಮಕ್ಕೂ ನಮಗೆ ಈ ಲೇಖಕರು ಹೇಳಿರುವ ಕ್ರಮಕ್ಕೂ ವ್ಯತ್ಯಾಸವಿದೆ. ಚರಿತ್ರೆಯೂ ಕೂಡಾ ನಮಗೆ ಅರ್ಥ ಮಾಡಿಕೊಳ್ಳಬೇಕಾದ ಸಂಗತಿಯೂ ಹೌದು ಎನ್ನುವುದನ್ನು ಇಂಥಾ ಲೇಖಕರು ಸೂಚಿಸುತ್ತಾರೆ. ಆದರೆ ಇಂಥಾ ಸಂಗತಿಗಳಲ್ಲಿ ಲೇಖಕರ ಅನ್ವಯವೂ ಇದೆ ಎನ್ನುವುದನ್ನು ಮರೆಯಬಾರದು. ಚರಿತ್ರೆಯೊಂದಿಗೆ ವಿವಿಧ ಲೇಖಕರು ವಿವಿಧ ರೀತಿಯಲ್ಲಿ ಸಂವಾದವನ್ನು ಮಾಡುತ್ತಾರೆ. ನಾಗವೇಣಿಯರ ಕಾದಂಬರಿಯು ಈ ದೃಷ್ಟಿಯಿಂದ ಅತ್ಯಂತ ಮಹತ್ವದ ಕೃತಿಯೂ ಹೌದು. ಅದರಲ್ಲಿ ಗಾಂಧಿ ಮಂಗಳೂರಿಗೆ ಬಂದದ್ದೂ ಒಂದು ಇತಿಹಾಸವೂ ಆಗಿದೆ. ಮಾಯಾಲೋಕದಲ್ಲಿ ಬರುವ ವ್ಯಕ್ತಿಗಳಿಗೆ ಮತ್ತೊಂದು ಆಯಾಮವೂ ಇದೆ. ಅದನ್ನು ಸಾಮಾನ್ಯರ ಚರಿತ್ರೆಯೆಂದೂ ಹೇಳಬಹುದು. ಮತ್ತೆ ದೇಸಾಯಿಯವರ

ಕಾದಂಬರಿಗಳನ್ನು ನಾವು ಇಲ್ಲಿ ಪ್ರಸ್ತಾವಿಸಬಹುದು: ಅವರ ಕಾದಂಬರಿಗಳಲ್ಲಿ ಬರುವ ವ್ಯಕ್ತಿಗಳು ಸಮಾಜದ ಒಂದು ವರ್ಗವನ್ನು ಮಾತ್ರವೇ ಹೇಳುತ್ತಾರೆ. ಅಂದರೆ ಆಗ ತಾನೇ ಉದಯವಾದ ಹೊಸ ಬುದ್ಧಿಜೀವಿ ವರ್ಗವನ್ನು ಅವರು ಪ್ರತಿನಿಧಿಸುತ್ತಾರೆ. ಅಂದರೆ ಅವರ ಸ್ವಭಾವದಲ್ಲಿಯೇ ಇದು ಕಾಣಿಸುತ್ತದೆ. ಅದು ಹೊಸ ಸಮಗ್ರತೆಯೂ ಹೌದು. ಆದರೆ ದೇಸಾಯಿಯವರು ಕಾರಂತರ ಬರಹದ ಮಾದರಿಯನ್ನು ಒಪ್ಪಿಕೊಂಡವರೂ ಅಲ್ಲ. ಅವರಿಗೆ ಬೇರೆ ಮುಖ್ಯವೂ ಆಯಿತು. ಅವರು ಕಾದಂಬರಿ ಪ್ರಕಾರದಲ್ಲಿ ಇದ್ದ ರಚನೆಯ ಮಾದರಿಯನ್ನು ಒಡೆಯುತ್ತಾರೆ. ಕುವೆಂಪು ಇದ್ದ ಲೋಕ ದೃಷ್ಟಿಗೂ ದೇಸಾಯಿಯವರ ಲೋಕ ದೃಷ್ಟಿಗೂ ಅನೇಕ ವ್ಯತ್ಯಾಸವೂ ಇದೆ. ದೇಸಾಯಿಯವರ ಮೂಲಕವೇ ನಮಗೆ ಹೊಸದಾದ ಚಿಂತನೆಯು ಬಂದಿತು. ಮತ್ತು ಅದರಲ್ಲಿ ಅಸ್ತಿತ್ವ ಮತ್ತು ಬೌದ್ಧಿಕ ಪ್ರಶ್ನೆಗಳೂ ಇವೆ. ಕಾರಂತ, ಕುವೆಂಪು ಮೊದಲಾದವರ ಕಾದಂಬರಿಗಳಲ್ಲಿ ಕಾಣಿಸುವ ದೃಷ್ಟಿಯು ದೇಸಾಯಿ, ಚಿತ್ತಾಲರಲ್ಲಿ ನಾವು ಕಾಣುವುದೂ ಇಲ್ಲ. ನವೋದಯದ ಕಾಲದ ಅನೇಕ ಬರಹಗಾರರು ತಮ್ಮ ನೆಲೆಯನ್ನು ಕಂಡದ್ದು ಒಂದು ಗುಂಪಿನಲ್ಲಿ. ಆ ಗುಂಪಿಗೆ ಹೆಚ್ಚು ಶಕ್ತಿಯೂ ಇದೆ. ಅಂದರೆ ಅವರು ಹೇಳಿದ್ದು ಜನಸಾಮಾನ್ಯರನ್ನು ಮಾತ್ರವೇ. ಹಾಗೆ ನೋಡವುದಿದ್ದರೆ ಆಧುನಿಕ ಚಿಂತನೆ ಮತ್ತು ಅದರ ಹಿನ್ನೆಲೆಯೇ ಕುತೂಹಲಕಾರಿಯೂ ಆಗಿದೆ. ನಮ್ಮ ಮಾನಸಿಕ ರಚನೆಗಳು ಕೂಡಾ ಚಾರಿತ್ರಿಕ ಸನ್ನಿವೇಶದಿಂದ ಹುಟ್ಟುತ್ತದೆ. ಮತ್ತು ಯಾವುದನ್ನು ನಾವು ಅನ್ಯ ಗುಂಪು ಎಂದು ಹೇಳುತ್ತೇವೆಯೋ ಅದರ ಸಂಬಂಧದೊಂದಿಗೆ ಬರಹಗಳು ಹುಟ್ಟಿವೆ. ಕುವೆಂಪು ಮತ್ತು ಕಾರಂತರಲ್ಲಿ ಅನ್ಯ ಗುಂಪು ವಿದೇಶವೇ ಆಗಿದೆ. ಬ್ರಿಟೀಷರು ಅವರಿಗೆ ಅನ್ಯರಂತೆ ಕಾಣಿಸುತ್ತದೆ. ಅನಂತಮೂರ್ತಿಯವರಿಗೆ ಅನ್ಯವೆಂದರೆ ಅದು ಜಾತಿಯ ಪ್ರಶ್ನೆಯೂ ಆಗುತ್ತದೆ. ವೀಣಾಶಾಂತೇಶ್ವರರಿಗೆ ಅನ್ಯವೆಂದರೆ ಗಂಡಸು ಮಾತ್ರವೇ ಆಗಿರುತ್ತದೆ. ಮತ್ತು ಹೇಗೆ ಹೊರಗನ್ನು ನೋಡುತ್ತೇವೆ ಮತ್ತೆ ಹೇಗೆ ಅದನ್ನು ಸ್ವೀಕರಿಸುತ್ತೇವೆ ಎನ್ನುವುದೂ ನಮಗೆ ಹೆಚ್ಚು ಮುಖ್ಯವಾಗುತ್ತದೆ. ಒಂದು ಸಾಮಜವನ್ನು ಲೇಖಕನು ಹೇಗೆ ನೋಡುತ್ತಾನೆ ಮತ್ತು ಅದನ್ನು ಹೇಗೆ ಸಂಯೋಜಿಸುತ್ತಾನೆ ಎನ್ನುವುದೂ ಅಷ್ಟೇ ಮುಖ್ಯವಾಗುತ್ತದೆ. ಅದರ ಸಾಧ್ಯತೆಗಳೇ ಬೇರೆಯಾಗುತ್ತವೆ. ಅದು ಸಮಾಜವು ನಡೆಯಬೇಕಾದ ದಾರಿಯೂ ಹೌದು. ಲೇಖಕನು ಅದನ್ನು ಸೂಚಿಸುತ್ತಾನೆ. ಅದು ಸಾಧ್ಯತೆಯು ಮಾತ್ರವೇ ಆಗಿರುತ್ತದೆ. ಅದು ಬಾಹ್ಯ ಮತ್ತು ಅಂತರಂಗದ ವ್ಯಾಪಾರವನ್ನು ಹೇಳುತ್ತದೆ. ಸಮಾಜದಲ್ಲಿ ಅಂತಸ್ಥವಾಗಿರುವ ಅನೇಕ ಸಂಗತಿಗಳನ್ನು ಲೇಖಕರು ಹೇಳುತ್ತಾರೆ. ಅವರ ಬರಹ ಮತ್ತು ಅದರ ಚಟುವಟಿಕೆಯೇ ಅನೇಕವನ್ನು ವಿವರಿಸುತ್ತದೆ. ಬರಹವು ಅವರ

ಆಲೋಚನೆ ಮತ್ತು ಅದರ ಪರಿಣಾಮವನ್ನು ಸೂಚಿಸುತ್ತದೆ. ಒಂದು ವರ್ಗವನ್ನು ಮತ್ತು ಅದರ ಪ್ರಜ್ಞೆಯನ್ನು ಅದು ವಿವರಿಸುತ್ತದೆ. ಯಾವುದು ಪಲ್ಲಟವಾಗುತ್ತದೆ ಎನ್ನುವುದನ್ನು ಅದು ಹೇಳುತ್ತದೆ. ಕಾರಂತರ ಬರಹವು ಈ ದೃಷ್ಟಿಯಿಂದಲೂ ನಮಗೆ ಹೆಚ್ಚು ಮಹತ್ವದ್ದು ಎಂದೇ ಅನಿಸುತ್ತದೆ. ಚೋಮ ಮತ್ತು ಬೆಳ್ಳಿ ಮೊದಲಾದವರ ಚಾರಿತ್ರಿಕ ಅಸ್ತಿತ್ವವನ್ನು ನಮಗೆ ಹೇಳಿದ್ದು ಕಾರಂತರು. ಅವರಿಗೆ ಅತ್ಯಂತ ಮಹತ್ವದ ಮತ್ತು ವಿಶಾಲವಾದ ವ್ಯಾಪ್ತಿಯೂ ಇದೆ. ಅವುಗಳ ರಚನೆಯೂ ಅತ್ಯಂತ ವಿಶಾಲವಾದದ್ದೂ ಹೌದು. ಹಾಗೆ ನೋಡುವುದಿದ್ದರೆ ಚಾರಿತ್ರಿಕ ಸತ್ಯವು ಅವರು ಬರೆದುದಕ್ಕಿಂತ ಹೆಚ್ಚು ವ್ಯಾಪ್ತಿಯುಳ್ಳದ್ದೂ ಹೌದು. ಸಮಾಜ ಮತ್ತು ಅದರ ವಿಕಾಸದಲ್ಲಿ ಕಡಲ ಕರೆಯ ಜನರು ಅವರಿಗೆ ಮುಖ್ಯವಾಗಿ ಕಾಣಿಸುತ್ತದೆ. ಈ ದೃಷ್ಟಿಯಿಂದ ಆಧುನಿಕತೆಯು ಮೂಲಭೂತವಾಗಿ ನಮಗೆ ಅನೇಕವನ್ನು ಕಲಿಸಿದೆ. ಮತ್ತು ಅದರ ಪ್ರಭಾವವೂ ಸಣ್ಣದು ಆಗಿರಲಿಲ್ಲ. ಅದನ್ನು ಲೇಖಕರು ನೋಡಿದ ಕ್ರಮವೂ ಭಿನ್ನವಾಗಿದೆ. ವಾಸ್ತವವಾಗಿ ಆಧುನಿಕ ಯುಗದ ಸಂಗತಿಗಳನ್ನು ನಿರೂಪಿಸುವುದು ಮತ್ತು ಅದರ ತಲ್ಲಣಗಳನ್ನು ಹೇಳುವುದು ಬಂಡವಾಳವಾದವೇ. ಆದರೆ ಇಲ್ಲಿ ಮತ್ತೆ ನೋಡಬೇಕಾದ ಮತ್ತೊಂದು ಅಂಶವೂ ಇದೆ. ಬಂಡವಾಳವಾದವು ಅನೇಕ ಸಂಘರ್ಷಗಳನ್ನು ಹುಟ್ಟುಹಾಕಿದೆ. ಅಡಿಗರು ಇದನ್ನು ಬೇರೆ ಬೇರೆ ರೂಪಕದ ಮೂಲಕವೇ ವಿವರಿಸುತ್ತಾರೆ. ಅವರು ವ್ಯಕ್ತಿ ಮತ್ತು ಅವನ ಪ್ರಜ್ಞೆಯನ್ನು ವಿವಿಧ ರೀತಿಯಲ್ಲಿ ಹೇಳುತ್ತಾರೆ. ಮನೋವ್ಯಾಪರ ಮತ್ತು ಅದರ ಸ್ವರೂಪವು ಎಷ್ಟು ಸಂಕೀರ್ಣವೂ ಆಗಿದೆ ಎಂದು ಅವರ ಕವಿತೆಗಳು ವಿವರಿಸುತ್ತವೆ. ಅವರಲ್ಲಿ ರಾಜಕಾರಣವೂ ವ್ಯಂಗ್ಯವಾಗುತ್ತದೆ. ಯಾವುದನ್ನು ದೇಸಾಯಿಯವರು ವಿವರಿಸುತ್ತಾರೆಯೋ ಅದು ಅಡಿಗರಿಗೆ ಮುಖ್ಯವಲ್ಲ. ಅವರಲ್ಲಿ ಚರಿತ್ರೆ ಮತ್ತು ಅದರ ವ್ಯಂಗ್ಯವು ಸಾಧಾರಣವೂ ಆಗುತ್ತಿಲ್ಲ. ಅದರ ವರಸೆಗಳು ಬದಲಾಗುತ್ತವೆ. ಆದರೆ ಎಷ್ಟೋ ಸರ್ತಿ ಚರಿತ್ರೆಯು ಪಠ್ಯವನ್ನು ಮಾತ್ರವೇ ಹೇಳುತ್ತದೆ ಎಂದು ಭಾವಿಸುವುದೂ ಅಸಾಧ್ಯ. ಅದು ಚರಿತ್ರೆಯ ಹೊರಗೆ ಉಳಿಯುತ್ತದೆ. ಮತ್ತು ಅದರಲ್ಲಿ ವ್ಯತ್ಯಾಸವೂ ಇರುತ್ತದೆ. ಅಂದರೆ ಚರಿತ್ರೆಯು ಕೃತಿಯ ಆಚೆಗೆ ಇರಬಹುದು. ಅದರಲ್ಲಿಯ ವ್ಯತ್ಯಾಸವೂ ಕಾಣಬಹುದು. ಕುಂ.ವೀ ಅವರ ಕಾದಂಬರಿಯಾದ ಅರಮನೆಯು ಇದಕ್ಕೆ ಒಂದು ದೃಷ್ಟಾಂತವೂ ಆಗಿದೆ. ಬಳ್ಳಾರಿ ಪ್ರಾಂತ್ಯವನ್ನು ಕುಂ.ವೀ. ನೋಡುವುದೇ ಬೇರೆ ಕ್ರಮದಲ್ಲಿ. ಅದು ಇರುವುದೇ ಬೇರೆ ರೀತಿಯಲ್ಲಿ. ಲೇಖಕನು ಬರೆಯುವುದು ಮತ್ತು ಲೇಖಕನು ನಿಜವಾಗಿಯೂ ಇರುವುದು ಭಿನ್ನವಾದ ರೂಪದಲ್ಲಿ ಎನ್ನುವುದು ಇಲ್ಲಿ ಗಮನಾರ್ಹವೂ ಆಗಿದೆ. ಒಬ್ಬ ಲೇಖಕನು ಯಾವುದನ್ನು ಬಳಸುತ್ತಾನೆ ಮತ್ತು ಅದು ಯಾವ ಸಮಾಜದ

ಸೂಚನೆಯು ಆಗಿದೆ ಎನ್ನುವುದು ಮುಖ್ಯ. ಒಂದು ಸಮಾಜದ ಸೂಚನೆಯು ಒಂದು ಕೃತಿಯಲ್ಲಿ ಬೇರೆ ಬೇರೆ ರೀತಿಯಲ್ಲಿ ವ್ಯಕ್ತವಾಗಬಹುದು. ಮತ್ತು ಅದರಲ್ಲಿ ಆದರ ಸ್ವರೂಪವು ಸಾಂಕೇತಿಕವಾದ ವಿಧಾನವೂ ಆಗಬಹುದು. ದೇವನೂರರ ಒಡಲಾಳವನ್ನು ನೋಡಿದರೆ ಈ ಅಂಶವು ನಮಗೆ ತಿಳಿಯುತ್ತದೆ. ಸಾಕವ್ವ ಒಂದು ಜನಾಂಗದ ಒಂದು ಸೂಚನೆಯೂ ಆಗಿದ್ದಾಳೆ. ಅವಳಿಗೆ ಅವಳದೇ ಆದ ಸಂಸ್ಕೃತಿಯು ಇದೆ. ಅದನ್ನು ಅವಳು ಪ್ರತಿನಿಧಿಸುತ್ತಾಳೆ. ವಾಸ್ತವವಾಗಿ ಈ ಕೃತಿಯು ಒಂದು ಸಾಚಾ ಆಗುವುದೇ ಅದರ ನಿಲುವಿನಿಂದ. ಅದರಲ್ಲಿ ಸಮಾಜದ ಸ್ವರೂಪವು ಈಗಾಗಲೇ ಹೇಳಿರುವ ಅಥವಾ ಬಣ್ಣಿಸಲಾಗಿರುವ ವಿವರವನ್ನು ಸೂಚಿಸುತ್ತಿಲ್ಲ. ಸಾಹಿತ್ಯ ಮತ್ತು ಸಂಸ್ಕೃತಿಯ ಪ್ರಶ್ನೆಯನ್ನು ನಾವು ಸರಳವಾಗಿ ಬಿಡಿಸಲು ಬರುವುದೂ ಇಲ್ಲ. ಅದು ಆಯಾ ಕಾಲಕ್ಕೆ ಬದಲಾಗುತ್ತದೆ. ಮತ್ತು ಅದರಲ್ಲಿ ಬೇರೆ ಸಮಸ್ಯೆಯೂ ಸೇರಿಕೊಂಡಿರುತ್ತವೆ. ಅಂದರೆ ಅದನ್ನು ಇತ್ಯಾತ್ಮಕವಾಗಿಯೇ ಹೇಳಲು ಬರುವುದೂ ಇಲ್ಲ. ಧೋರಣೆಗಳು ಬದಲಾಗುತ್ತವೆ. ಮತ್ತು ಆ ಧೋರಣೆಗಳು ಯಾವ ಸನ್ನಿವೇಶದಲ್ಲಿ ಬದಲಾಗುತ್ತದೆ ಎಂದೂ ನೋಡಬೇಕಾಗುತ್ತದೆ. ನಮ್ಮ ವಿಶ್ವಾತ್ಮಕತೆ ಮತ್ತು ಅದರ ದೃಷ್ಟಿಕೋನವನ್ನು ನಾವು ಕಾಲ ಮತ್ತು ನಿರ್ದಿಷ್ಟವಾದ ಅನುಭವದ ಹಿನ್ನೆಲೆಯಲ್ಲಿಯೂ ಗುರುತಿಸಬೇಕಾಗುತ್ತದೆ. ಹಾಗೆ ನೋಡುವುದಿದ್ದರೆ ಸಾಹಿತ್ಯವೂ ಒಂದು ರಚನೆ ಮತ್ತು ಅದು ಅನುಭವವನ್ನು ನಮಗೆ ಕೊಡುತ್ತದೆ. ಮನಸ್ಸು ಮತ್ತು ಅದರ ಸ್ಥಿತಿಯೇ ನಮಗೆ ಅನೇಕ ರಚನೆಯನ್ನು ಹೇಳಿಕೊಡುತ್ತವೆ. ಸಾಹಿತ್ಯದಲ್ಲಿ ಯಾವುದನ್ನು ಬರೆಯಬೇಕು ಮತ್ತು ಅದನ್ನು ಹೇಗೆ ರಚಿಸಬೇಕು ಎನ್ನುವುದು ನಮ್ಮ ಆಯ್ಕೆಗೆ ಬಿಟ್ಟ ವಿಷಯವೂ ಹೌದು. ವಾಸ್ತವವಾಗಿ ಯಾವುದೇ ರಚನೆಯು ನಮಗೆ ಮುಖ್ಯವಾಗುವುದು ಕೇವಲ ನಮ್ಮ ಅಗತ್ಯಕ್ಕೂ ಹೌದು. ಆದರೆ ಅದನ್ನು ನೋಡುವಾಗ ನಾವು ಪ್ರಜ್ಞೆ ಮತ್ತು ಮನೋಸ್ಥಿತಿಯ ಹಿನ್ನೆಲೆಯಲ್ಲಿಯೇ ನೋಡಬೇಕಾಗುತ್ತದೆ. ಅದು ನಮಗೆ ಅಗತ್ಯವೂ ಹೌದು. ಕಾರಂತರು ಬರೆದದ್ದು ಅವರು ಕಂಡ ಸಮಾಜವನ್ನು. ಕುವೆಂಪು ಕೂಡ ಬರೆದದ್ದು ಅವರು ಕಂಡ ಸಮಾಜವನ್ನು. ಆದರೆ ಅವರು ಯಾವುದನ್ನು ಕಂಡರೋ ಅದು ಮೂಲತಃ ಒಂದು ಚರಿತ್ರೆಯನ್ನು ಹೇಳುತ್ತದೆ. ದೇವನೂರರು ಬರೆದುದನ್ನು ನಾವು ಬೇರೆ ರೀತಿಯಲ್ಲಿಯೂ ನೋಡಬೇಕಾಗುತ್ತದೆ. ನಾವು ಅವರ ಬರಹ ಮತ್ತು ಸಮಾಜದ ಚರಿತ್ರೆಯನ್ನು ಒಟ್ಟಿಗೆ ನೋಡಬೇಕಾಗುತ್ತದೆ. ಅದು ಅಗತ್ಯವೂ ಆಗಿರುತ್ತದೆ. ಸಾಹಿತ್ಯ ಮತ್ತು ಅದರ ರಚನೆಗಳು ನಮಗೆ ಬೇರೆ ಸಾಧ್ಯತೆಯನ್ನು ಸೂಚಿಸುತ್ತದೆ. ರಚನೆಗೂ ನಮ್ಮ ಪ್ರಜ್ಞೆಗೂ ನಿಕಟವಾದ ಸಂಬಂಧವು ಇದೆ. ಮತ್ತು ನಮ್ಮ ಬರಹವು ನಮ್ಮ ನಿಲುವನ್ನು ಹೇಳುತ್ತದೆ. ಅದು ಅಗತ್ಯವೂ ಹೌದು. ಆದ್ದರಿಂದ ಲೇಖಕರು ಹೇಳುವ

ಸ್ವಾತಂತ್ರ್ಯವು ಸಂವಾದಿಯೂ ಆಗಿರುವುದು ನಿಜ. ಸ್ವಾತಂತ್ರ್ಯ ಮತ್ತು ಅದರ ಕುರಿತಾದ ಧೋರಣೆಯೇ ವಾಸ್ತವವಾಗಿ ಪ್ರಶ್ನಾರ್ಹವೂ ಆಗಿರುವುದು ಸತ್ಯ. ಅದರ ಅನೇಕ ಆಂಶಗಳು ಇರುತ್ತವೆ. ಆದರೆ ನಾವು ಯಾರೂ ಇದರ ಕುರಿತು ಯೋಚಿಸುವುದೂ ಇಲ್ಲ. ಬರಹವು ಒಂದು ಬೌದ್ಧಿಕವಾದ ಚಟುವಟಿಕೆಯೂ ಹೌದು. ಮನುಷ್ಯ ಮತ್ತು ಅವನ ಚಟುವಟಿಕೆಯ ಭಾಗವಾಗಿ ಸಾಹಿತ್ಯವು ಇರುತ್ತದೆ. ಮತ್ತು ಅದು ಮನುಷ್ಯರಿಂದಲೇ ರಚಿತವಾದುದೂ ಹೌದು. ಅದು ಹುಟ್ಟುವುದು ಮತ್ತು ಅದರ ಹಿಂದೆ ಇರುವುದು ಯಾವುದು ಎಂದೂ ಯೋಚಿಸಬೇಕಾಗುತ್ತದೆ. ಅದಕ್ಕೂ ಸಮಾಜದ ಸ್ಥಿತಿಗೂ ಒಂದು ದ್ವಂದ್ವಾತ್ಮಕವಾದ ಸಂಬಂಧವೂ ಇರುತ್ತದೆ. ಅದನ್ನು ನಾವು ನೋಡಬೇಕಾದ ಕ್ರಮವೂ ಹೌದು. ವಾಸ್ತವವಾಗಿ ಸಮಾಜಶಾಸ್ತ್ರೀಯವಾದ ನಿಲುವು ಯಾವತ್ತೂ ಭಿನ್ನವಾದ ವಿಷಯವನ್ನು ಹೇಳುತ್ತದೆ. ಅದು ಒಂದು ಶಿಸ್ತು ಎನ್ನುವುದನ್ನು ಮಾತ್ರವೇ ಹೇಳುವುದಿಲ್ಲ. ಸಮಾಜ ಮತ್ತು ಬರಹಕ್ಕೆ, ಬರಹ ಮತ್ತು ಮನಸ್ಸಿಗೆ ಇರುವ ಸಂಬಂಧವನ್ನು ಅದು ಹೇಳುತ್ತದೆ. ಮನುಷ್ಯನೇ ಅದರಲ್ಲಿ ಕೇಂದ್ರ.ಅನೇಕ ಸಾಮಾಜಿಕವಾದ ಘಟಕಗಳು ಹೇಗೆ ನಮ್ಮ ಬರಹವನ್ನು ಆವರಿಸುತ್ತದೆ ಎನ್ನುವುದೇ ಅದರ ಚರ್ಚೆಯ ಪ್ರಮುಖವಾದ ಕೇಂದ್ರವೂ ಆಗಿದೆ. ವಾಸ್ತವವಾಗಿ ಯಾವುದೇ ಬರಹವನ್ನು ನಾವು ಜೀವನ ಮತ್ತು ಸಮಾಜದಿಂದ ಹೊರತು ಮಾಡಿಕೊಂಡು ನೋಡವುದೇ ಅಸಾಧ್ಯವೂ ಹೌದು. ಇವುಗಳನ್ನು ಅಧ್ಯಯನ ಮಾಡಬೇಕಾದರೆ ನಾವು ದ್ವಂದ್ವಾತ್ಮಕತೆಯನ್ನೂ ನೋಡಬೇಕಾಗುತ್ತದೆ. ಸಮಾಜ ಮತ್ತು ಸಾಹಿತ್ಯವನ್ನು ನಾವು ನೋಡಬೇಕಾದ ಕ್ರಮವನ್ನು ಈವತ್ತು ಬರೀ ಒಂದು ತರಗತಿಗಳಿಗೆ ಮಾತ್ರವೇ ಸೀಮಿತಮಾಡಿದ್ದೇವೆ. ಸಾಹಿತ್ಯವನ್ನು ಕೇಂದ್ರ ಮಾಡಿಕೊಂಡೇ ನಾವು ಅನೇಕವನ್ನು ನೋಡುತ್ತೇವೆ. ಅದರಿಂದ ನಮಗೆ ಅನೇಕ ಮಿತಿಗಳು ಬಂದಿವೆ. ಸಾಹಿತ್ಯ ಮತ್ತು ಅದರ ಕಲಾತ್ಮಕತೆಯನ್ನು ಮಾತ್ರವೇ ನಾವು ವೈಭವೀಕರಿಸುತ್ತೇವೆ. ಅದರಿಂದ ಅದಕ್ಕೆ ಬೇಕಾದ ಕೆಲವು ನಿಯಮವನ್ನು ಮಾತ್ರವೇ ಮಾಡುತ್ತಿದ್ದೇವೆ. ಆದರೆ ಅದರಲ್ಲಿ ಬರುವ ಕೆಲವು ಪ್ರಶ್ನೆಗಳು ಕಲಾತ್ಮಕತೆಯನ್ನು ಹೇಗೆ ಗುರುತಿಸಬಹುದು ಎಂದು ಮಾತ್ರವೇ ಹೇಳುತ್ತವೆ. ಆದರೆ ವಾಸ್ತವದ ಸ್ಥಿತಿಯು ಹಾಗೆ ಇಲ್ಲ. ಅದರ ಅರ್ಥವೂ ಬೇರೆಯಾಗಬೇಕಾಗಿದೆ. ಆದರೆ ಸಾಹಿತ್ಯಕ್ಕೆ ಒಂದು ನಿರ್ಣಾಯಕವಾದ ರಚನೆಯು ಇರುತ್ತದೆ. ಮತ್ತು ಆ ರಚನೆಯು ಇರುವುದು ಸಮಾಜದ ಕ್ರಿಯೆಗಳಲ್ಲಿ. ಹಾಗಿದ್ದರೆ ಯಾವುದೇ ರಚನೆಯು ಯಾವುದನ್ನು ಸೂಚಿಸುತ್ತದೆ ಮತ್ತು ಅದು ಯಾವುದನ್ನು ಕೇಂದ್ರ ಮಾಡುತ್ತದೆ ಎನ್ನುವುದೂ ಅಷ್ಟೇ ಮುಖ್ಯ. ಸಾಹಿತ್ಯ ಮತ್ತು ಅದರ ರಚನೆಗೆ ಒಂದು ಶಕ್ತಿಯೂ ಇರುವುದು ಅದರ ಆಕರ್ಶಕವಾದ ನುಡಿಗಟ್ಟಿನಲ್ಲಿ

ಅಲ್ಲವೆನ್ನುವುದು ಎಲ್ಲರಿಗೂ ಗೊತ್ತಿರುವ ವಿಷಯ. ಸಾಹಿತ್ಯ ಮತ್ತು ಅದರ ಪಾತ್ರವೂ ಈ ದೃಷ್ಟಿಯಿಂದ ಬಹಳ ಮುಖ್ಯವಾಗುತ್ತದೆ. ರಚನೆಯೇ ವಾಸ್ತವವಾಗಿ ಪ್ರಯೋಗವನ್ನು ಸೂಚಿಸುತ್ತದೆ. ಆದರೆ ಪ್ರಯೋಗವು ಮೂಲಭೂತವಾಗಿ ವಿಜ್ಞಾನವನ್ನು ಮಾಡುವ ಪ್ರಯೋಗವಲ್ಲ. ಸಮಾಜ ವಿಜ್ಞಾನಿಗೆ ಕೆಲವು ಅಗತ್ಯಗಳೂ ಇರುತ್ತವೆ. ಅದೇ ರೀತಿಯಲ್ಲಿ ಲೇಖಕನಿಗೆ ಕೂಡಾ. ಹಾಗೆ ನೋಡುವುದಿದ್ದರೆ ಯಾವುದೇ ರಚನೆಗೆ ಪೂರ್ವ ಪ್ರಮೇಯಗಳು ಇರುತ್ತವೆ. ಅದಕ್ಕೆ ಸೈದ್ಧಾಂತಿಕತೆಯೂ ಇರುತ್ತದೆ. ಅದಕ್ಕೆ ಕೆಲವು ಮೌಲ್ಯಗಳೂ ಇರುತ್ತವೆ. ಸಾಹಿತ್ಯವು ಯಾವುದೇ ಕೆಲಸವನ್ನು ಮಾಡದೇ ಹೋಗಿದ್ದರೆ ಅದಕ್ಕೆ ಯಾವುದೇ ಅರ್ಥವೂ ಇರುತ್ತಿರಲಿಲ್ಲ. ಎರಡು ಸಂಗತಿಗಳು ಸಾಹಿತ್ಯದಲ್ಲಿ ನಡೆಯುತ್ತವೆ. ಒಂದು ರಚನೆ ಮತ್ತೊಂದು ನಿರಚನೆ. ರಚನೆಗಳಲ್ಲಿ ಎರಡು ಪ್ರಕ್ರಿಯೆಯು ಇರುತ್ತದೆ. ಸ್ವೀಕೃತಿ ಮತ್ತು ಸಹಯೋಗ. ಈ ಕಾರಣದಿಂದಲೇ ರಚನೆಯು ವಾಸ್ತವವಾಗಿ ಸೃಜನಶೀಲವೂ ಆಗುತ್ತದೆ. ಅದು ಚರಿತ್ರೆಯ ಅಗತ್ಯವೂ ಹೌದು. ನಾವು ಹಿಂದಿನ ರಚನೆಗಳನ್ನು ನಿರಾಕರಿಸಿಕೊಂಡು ಮತ್ತೊಂದು ರಚನೆಯನ್ನು ಮಾಡುತ್ತೇವೆ, ಮಾಡುವುದು ಎನ್ನುವುದೇ ಇಲ್ಲಿ ಮುಖ್ಯವಾದ ಸಂಗತಿಯೂ ಹೌದು. ರಚನೆ ಮತ್ತು ಆಲೋಚನೆಗೆ ಒಂದು ಸಂಬಂಧವೂ ಇದೆ. ಸಂವೇದನೆ ಮತ್ತು ರಚನೆಗೂ ಈ ದೃಷ್ಟಿಯಿಂದ ಮಹತ್ವದ ಕೊಂಡಿಗಳೂ ಇರುತ್ತವೆ. ರಚನೆಯು ನಮ್ಮ ಅಗತ್ಯವೂ ಆಗಿರುವುದರಿಂದ ನಾವು ಬೇರೆ ಬೇರೆ ರಚನೆಯನ್ನು ಮಾಡುತ್ತೇವೆ. ಈ ದೃಷ್ಟಿಯಿಂದ ಕಲೆಯೂ ಕೂಡಾ ನಮ್ಮ ವರ್ತನೆಗೆ ಮತ್ತು ನಮ್ಮ ಅಭಿವ್ಯಕ್ತಿಗೆ ಸಂಬಂಧಪಟ್ಟದ್ದೂ ಆಗಿರುತ್ತದೆ. ಅದು ನಮ್ಮ ಅಗತ್ಯವೂ ಆಗಿರುವುದು ಮಾತ್ರವೇ ಅಲ್ಲ ಅದರಲ್ಲಿ ನಾವು ನಮ್ಮ ಅನುಭವ ಮತ್ತು ನಮ್ಮ ಮನಸ್ಸಿನ ಸಂಗತಿಗಳನ್ನು ಹೇಳುತ್ತೇವೆ. ನಮ್ಮ ವಾಸ್ತವದ ನಿಜವಾದ ಸ್ವರೂಪವನ್ನು ಅದರಲ್ಲಿ ಹೇಳುವುದೂ ಸತ್ಯ. ಆದರೆ ವಾಸ್ತವವನ್ನು ನಾವು ಹೇಗೆ ನೋಡುತ್ತೇವೆ ಎನ್ನುವುದು ಮಾತ್ರವೇ ಬಹಳ ಮುಖ್ಯ. ನಮಗೆ ಯಾವ ವಾಸ್ತವವು ಗೊತ್ತಿದೆಯೋ ಅದು ಮಾತ್ರವೇ ಮುಖ್ಯವಾದರೆ ಅದರ ಅರ್ಥವು ಬೇರೆಯಾಗುತ್ತದೆ. ವಾಸ್ತವವೂ ಕೂಡಾ ರಚಿತವಾಗಿದೆ. ಮತ್ತು ಅದೂ ಕೂಡಾ ಆಗಾಗ ಬದಲಾಗಿದೆ. ನಮ್ಮ ಮನೋಸ್ಥಿತಿ ಮತ್ತು ಅದರ ಪರಿಣಾಮವನ್ನು ನಾವು ನಮ್ಮ ರಚನೆಯಲ್ಲಿ ಕಾಣುತ್ತೇವೆ. ಅದು ನಮ್ಮ ಮನಸ್ಸಿನ ಬಿಂಬವೂ ಹೌದು. ಆದರೆ ಯಾವುದೇ ರಚನೆಗಳು ನಮಗೆ ಅಗತ್ಯವೂ ಆಗಿರುತ್ತದೆ. ರಚನೆಗಳು ಘಟನೆಗಳೇ ಆಗಿರುತ್ತವೆ ಎಂದು ಪೈಗಾಟ್ ಹೇಳುತ್ತಾನೆ. ಅವುಗಳು ಕೆಲವು ಉದ್ದೇಶಗಳನ್ನು ಭರ್ತಿ ಮಾಡುತ್ತವೆ. ನಮಗೆ ಇರುವ ಆಕಾಂಕ್ಷೆಗಳನ್ನು ತುಂಬಿಸುತ್ತವೆ. ಅದು ಆಗಲೇ ಅರ್ಥ ಪೂರ್ಣವೂ ಆಗುತ್ತವೆ. ರೊಟ್ಟಿಮಾಡುವುದರಿಂದ

ಶುರುಮಾಡಿಕೊಂಡು ಅನೇಕವು ಈ ಮಾದರಿಯ ರಚನೆಗಳು. ಸಾಹಿತ್ಯದ ವಿದ್ಯಾರ್ಥಿಯು ರಚನೆಯನ್ನು ನೋಡುವುದು ಒಂದು ಉದ್ದೇಶವನ್ನು ಇರಿಸಿಕೊಂಡು. ದಿನಂದಿನದ ಅನೇಕ ಅನುಭವಗಳು ಈ ದೃಷ್ಟಿಯಿಂದ ಮಹತ್ವದ ರಚನೆಗಳು ಆಗಿರುತ್ತವೆ. ಆದರೆ ನಾವು ಯಾವುದನ್ನು ಈವತ್ತು ರಚನೆಯೆಂದು ಹೇಳುತ್ತೇವೆಯೋ ಅದು ನಿರ್ದಿಷ್ಟವಾದ ಒಂದು ಕ್ರಿಯೆಯನ್ನು ಮಾಡುತ್ತದೆ. ಮತ್ತು ಅದರಲ್ಲಿ ಕ್ರಿಯೆ ಮತ್ತು ಉದ್ದೇಶವು ಇರುತ್ತದೆ. ರಚನೆ, ಅದರ ಉದ್ದೇಶ, ಅದರ ಅರ್ಥ, ಅದರ ಸ್ವರೂಪ ಮತ್ತು ಅದರ ಸಾಧ್ಯತೆಯು ಬೇರೆಯಾಗುತ್ತದೆ. ಹಾಗೆ ನೋಡುವುದಿದ್ದರೆ ಯಾವುದನ್ನು ರಚನೆಯೆಂದು ಹೇಳುತ್ತೇವೆಯೋ ಅದರಲ್ಲಿ ಮನಸ್ಸು ಇದೆ. ಮತ್ತು ಅನೇಕ ರಚನೆಗಳು ಸೇರಿಕೊಂಡು ಈವತ್ತು ಚರಿತ್ರೆಯು ಆಗಿದೆ. ಸಮಾಜ ಮತ್ತು ಚರಿತ್ರೆಗೆ ಈ ಕಾರಣದಿಂದ ಒಂದು ಹೊಕ್ಕುಬಳಕೆಯ ಸಂಬಂಧವೂ ಇದೆ. ವರ್ಗವೂ ಒಂದು ರಚನೆಯು ಆಗಿರುತ್ತದೆ. ಅದು ಸಮೂಹವನ್ನು ಹೇಳುತ್ತದೆ. ಅದರಲ್ಲಿ ಜೀವನದ ಅನೇಕ ಸಂಗತಿಗಳು ಕೆಲಸವನ್ನು ಮಾಡಿವೆ ಯಾವುದೇ ರಚನೆ ಮತ್ತು ಅದರ ಪರಿಣಾಮಗಳೂ ಬೇರೆ ಬೇರೆ ರೀತಿಯಲ್ಲಿ ಇರುತ್ತವೆ. ಅಂದರೆ ಅದರ ಸ್ವರೂಪ ಮತ್ತು ಪರಿಣಾಮಗಳನ್ನು ನಾವು ವಿಭಿನ್ನವಾಗಿಯೂ ನೋಡಬೇಕಾಗುತ್ತದೆ. ಕ್ರಿಯೆಗೆ ಹೇಗೆ ಉದ್ದೇಶ ಇರುತ್ತದೆಯೋ ಅದೇ ರೀತಿಯಲ್ಲಿ ರಚನೆಗೂ ನಿರ್ದಿಷ್ಟವಾದ ಉದ್ದೇಶವು ಇರುತ್ತದೆ. ಅಂದರೆ ಅದರ ಹಿನ್ನೆಲೆ ಮತ್ತು ಅದರ ಸಾಧ್ಯತೆ ಕಾಲಕ್ಕೆ ಅನುಸಾರವಾಗಿಯೇ ಬೇರೆ ಇರುತ್ತದೆ. ಆಲೋಚನೆಯು ರಚನೆಗೆ ಕಾರಣ. ನಿರ್ದಿಷ್ಟವಾದ ಸನ್ನಿವೇಶ ಮತ್ತು ಅದರ ಕುರಿತಾದ ಯೋಚನೆಗಳು ರಚನೆಗೆ ಕಾರಣವಾಗುತ್ತವೆ. ಯಾವುದೇ ಕೃತಿಗೂ ಚಾರಿತ್ರಿಕವಾದ ಆವಶ್ಯಕತೆಯು ಇರುತ್ತದೆ. ಅಂದರೆ ಅದನ್ನು ಹೊರತು ಮಾಡಿಕೊಂಡು ನೋಡಲು ಬರುವುದಿಲ್ಲ. ಸನ್ನಿವೇಶ ಮತ್ತು ಆವಶ್ಯಕತೆಗಳೇ ರಚನೆಗೆ ಕಾರಣವಾಗುತ್ತದೆ. ಪಠ್ಯದ ಸಂಯೋಜನೆಯು ಬರೀ ತಾರ್ಕಿಕವೆಂದು ಇದರ ಅರ್ಥವಲ್ಲ. ಅದು ಕ್ರಿಯೆಯನ್ನು ಹೇಳುತ್ತದೆ. ಮತ್ತು ಅದರ ಸ್ವರೂಪವು ಸಂಯೋಜಿತವೂ ಹೌದು. ಅದನ್ನು ನಾವು ನಿರ್ದಿಷ್ಟವಾಗಿಯೇ ನೋಡಬೇಕಾಗುತ್ತದೆ. ಸಂಯೋಜನೆಯೇ ರಚನೆಯ ಲಕ್ಷಣವೂ ಆಗುತ್ತದೆ. ರಚನೆಯು ಆಗುವ ಕ್ರಮಕ್ಕೂ ಲೋಕದ ದೃಷ್ಟಿಗೂ ಒಂದು ಸಂಬಂಧವಿದೆ. ಈ ದೃಷ್ಟಿಯಿಂದ ಬರಹವೂ ಕೆಲಸದ ವರ್ಗೀಕರಣವನ್ನು ಹೇಳುತ್ತದೆ. ಅದರಲ್ಲಿ ಸಮಗ್ರತೆಯು ಇರುತ್ತದೆ. ಅದು ಮನಸ್ಸು ಮತ್ತು ಅದರ ಸ್ವರೂಪವನ್ನು ಅದು ಹೇಳುತ್ತದೆ. ಮತ್ತೆ ಒಂದು ಅಂಶವನ್ನು ಇಲ್ಲಿ ಹೇಳಬೇಕಾಗುತ್ತದೆ. ಬರಹವು ಸಮಾಜವನ್ನು ನೋಡುವುದು ಬರಹದ ಮೂಲಕ. ಸಾಮಾಜಿಕ ಜೀವನ ಮತ್ತು ಅದರ ದೃಷ್ಟಿಕೋನವು ಬರಹದಲ್ಲಿ

ಒಂದು ರೀತಿಯಲ್ಲಿ ವ್ಯಕ್ತವಾಗುತ್ತವೆ. ಆದರೆ ಯಾವುದನ್ನು ಆಧುನಿಕ ಕಾಲವು ಸಮಾಜವೆಂದರೆ ಅದು ಕೆಲವರಿಗೆ ಮಾತ್ರವೇ. ಸಮಾಜವು ಸಾಹಿತ್ಯವನ್ನು ತನಗೆ ಬೇಕಾದ ನಿರ್ವಚನದೊಂದಿಗೆ ಗ್ರಹಿಸುವ ಪ್ರಯತ್ನವನ್ನು ಮಾಡುತ್ತದೆ. ಸಾಹಿತ್ಯದ ಕೆಲಸವು ಸಮಾಜಕ್ಕೆ ಉಪಯುಕ್ತವಾದರೆ ಉಳಿಯುತ್ತದೆ. ಆ ಕೆಲಸಕ್ಕೂ ಸಾಮಾಜಿಕ ಗುಂಪುಗಳಿಗೂ ಸಂಬಂಧವಿದೆ. ನಮ್ಮ ಸಮಾಜದಲ್ಲಿ ಏನು ನಡೆಯುತ್ತದೆ ಎನ್ನುವುದನ್ನು ಸಾಹಿತ್ಯವೇ ಹೇಳುತ್ತದೆ. ಒಂದು ಗುಂಪು ಸಾಹಿತ್ಯವನ್ನು ಸ್ವೀಕರಿಸುವುದು ನಿಜ. ನಮ್ಮ ಅವಶ್ಯಕತೆಯು ನಿರ್ದಿಷ್ಟವಾದ ಬೌದ್ಧಿಕ ವರ್ಗವನ್ನು ಸೃಷ್ಟಿಸುತ್ತದೆ. ನಮಗೆ ಅಗತ್ಯವಿಲ್ಲವೆಂದಾದರೆ ನಾವು ದೇವನೂರು ಮಹಾದೇವರನ್ನು ಓದುತ್ತಿರಲಿಲ್ಲ. ಅರವಿಂದ ಮಾಲಗತ್ತಿಯವರ ಸಾಹಿತ್ಯದ ಅವಶ್ಯಕತೆಯೂ ಇರಲಿಲ್ಲ. ಆದರೆ ಸಾಹಿತ್ಯದಲ್ಲಿಯೂ ವಿಶ್ವಾತ್ಮಕತೆಯೆನ್ನುವುದು ಬೇರೆ ಬೇರೆ ರೀತಿಯಲ್ಲಿ ವ್ಯಕ್ತವಾಗುತ್ತದೆ. ದೇಸಾಯಿಯವರ ಬರವಣಿಗೆಯಲ್ಲಿ ಕಾಣಿಸಿಕೊಳ್ಳುವ ವ್ಯಕ್ತಿತ್ವದ ಧೋರಣೆಯು ವಿಶ್ವಾತ್ಮಕವೂ ಹೌದು. ಹಾಗೇ ನೋಡುವುದಿದ್ದರೆ ಬರಹ ನಮ್ಮ ಅಗತ್ಯಗಳಲ್ಲಿ ಒಂದು. ಬರಹದಲ್ಲಿ ನಿರ್ದಿಷ್ಟ ಪ್ರವೇಶ ಮತ್ತು ಅಂತ್ಯ ಇರಬೇಕಾಗುತ್ತದೆ. ಕಾರಂತರು ಯಾವುದನ್ನು ಕಂಡಿದ್ದಾರೆಯೋ ಅದನ್ನು ನಾವು ಕಂಡಿಲ್ಲ. ಅವರ ಗ್ರಹಿಕೆ ಮತ್ತು ನಮ್ಮ ಗ್ರಹಿಕೆ ಪರಸ್ಪರ ಸಂಧಿಸಿದಾಗ ಬರಹ ಅರ್ಥಪೂರ್ಣವಾಗುತ್ತದೆ. ಗ್ರಹಿಕೆಗಳ ನಡುವಣ ಸಂಘರ್ಷವು ಬರಹದ ಮಟ್ಟಿಗೆ ಮುಖ್ಯವಾಗಿದೆ. ಕಾರಂತರ ಕಾದಂಬರಿಗಳಿಗೆ ಇರುವ ಸಮಾಜಿಕ ಹಾಗೂ ತಾತ್ವಿಕ ದರ್ಶನಗಳು ನಮಗೆ ಅನೇಕ ಸಾಧ್ಯತೆಗಳನ್ನು ತೆರೆಯುತ್ತವೆ. ಕಾದಂಬರಿಯ ಅಗತ್ಯವಿಲ್ಲದಿದ್ದರೆ ನಾವು ಅದನ್ನು ಓದುತ್ತಿರಲಿಲ್ಲ. ಕಾದಂಬರಿಯ ರಚನೆ ಕನ್ನಡದಲ್ಲಿ ಒಂದು ಹೊಸ ಬಗೆಯ ಚಟುವಟಿಕೆಯೇ ಆಗಿತ್ತು. ಕಾರಂತರ ಬರವಣಿಗೆಯ ಆಯ್ಕೆ ಮತ್ತು ಓದುಗರಾದ ನಮ್ಮ ಆಯ್ಕೆ ಸಾಹಿತ್ಯದ ಅಗತ್ಯ ಮಾತ್ರವೇ ಅಲ್ಲ. ಅದು ಸಾಂಸ್ಕೃತಿಕ ಆಯ್ಕೆಯೂ ಹೌದು. ಹಾಗೆಂದು ರಚನೆಯು ಯಾವತ್ತು ಬರೀ ಬುದ್ಧಿಜೀವಿಗಳ ಚಟುವಟಿಕೆಯೆಂದು ಭಾವಿಸಬಾರದು. ಅದು ನಡೆಯತ್ತದೆ. ಮತ್ತು ಎಲ್ಲರೂ ರಚಿಸುತ್ತಾರೆ. ಅದರ ಹಿಂದೆ ಒಂದು ಸಮಾಜ ನಿರ್ದಿಷ್ಟವಾದ ಜ್ಞಾನವೂ ಇರುತ್ತದೆ. ಅದರಲ್ಲಿ ವ್ಯಕ್ತವಾಗುವುದು ಬರೀ ಕೆಲವರ ಜ್ಞಾನ ಮಾತ್ರವೇ ಎಂದೂ ಭಾವಿಸಬಾರದು. ಮನುಷ್ಯ ಮತ್ತು ಅವನ ಜ್ಞಾನದ ಆಧಾರದ ಮೇಲೆಯೇ ಅನೇಕವು ನಡೆಯುತ್ತದೆ. ಅದು ಸಮಾಜದ ವಾಸ್ತವವಾಗಿದೆ. ಮನುಷ್ಯನ ಆಂತರಿಕವಾದ ಅನೇಕ ಜ್ಞಾನವು ಬೇರೆ ಬೇರೆ ಸಂಗತಿಗಳಿಂದ ಆವೃತವಾಗಿರುತ್ತದೆ. ಆದ್ದರಿಂದ ಅದರ ಸ್ವರೂಪವೂ ಬೇರೆಯಾಗುತ್ತದೆ. ಮರಳಿಮಣ್ಣಿಗೆ ಕಾದಂಬರಿಯಲ್ಲಿ ಬರುವ ಸಂಗಿಯನ್ನು ಇಲ್ಲಿ ದಾಖಲಿಸಬಹುದು. ಜೋರು ಮಳೆಯು ಬಂದರೆ

ಮಳೆಗಾಲವನ್ನು ಕಳೆಯುವುದು ಹೇಗೆ ಎನ್ನುವ ಪ್ರಶ್ನೆಯು ಸರಸೋತಿ ಮತ್ತು ಪಾರೋತಿಯರಿಗೆ ಬರುತ್ತದೆ. ಅವರ ಮಾತುಕತೆಯಲ್ಲಿ ಬರುವ ಮುಖ್ಯವಾದ ಅಂಶವೆಂದರೆ ಶೂದ್ರರು ಮೀನು ತಿಂದಾರು ಆದರೆ ನಾವು ಅದನ್ನು ತಿನ್ನಲಿಕೆ ಆದೀತೆ? ಇಡೀ ಕಾದಂಬರಿಯನ್ನು ಓದಿದರೆ ಇದು ಅತ್ಯಂತ ಸಣ್ಣದಾದ ಸಂಗತಿಯೂ ಹೌದು. ಹಾಗೆಂದು ಇದನ್ನು ಸತ್ಯವೇ ಅಲ್ಲವೆಂದು ಹೇಳಲು ಬರುವುದಿಲ್ಲ ಒಂದು ಕಾದಂಬರಿಯಲ್ಲಿ ಹೇಗೆ ಅತ್ಯಂತ ಸಣ್ಣದಾದ ಸಂಗತಿಯೂ ನಿರ್ದಿಷ್ಟವಾದ ಪಾತ್ರವನ್ನು ವಹಿಸುತ್ತದೆ ಎನ್ನುವುದಕ್ಕೆ ಇದು ಸಾಕ್ಷಿಯೂ ಆಗಿದೆ. ಅದು ನಿರ್ದಿಷ್ಟವಾದ ಜ್ಞಾನ ಮತ್ತು ನಡೆ ನುಡಿಯನ್ನು ಹೇಳುತ್ತದೆ. ಅನೇಕರಿಗೆ ಈ ಭಾಗವು ಅತ್ಯಂತ ಮಹತ್ವದ್ದು ಅಲ್ಲವೆಂದು ಅನಿಸಬಹುದು. ಆದರೆ ಇದರಲ್ಲಿ ಸಮಾಜದ ಆಚಾರ ವಿಚಾರದ ಪ್ರಶ್ನೆಯು ಬರುತ್ತದೆ. ನಾವು ಯಾವ ಅಧ್ಯಯನ ಕ್ರಮವನ್ನು ಇಟ್ಟುಕೊಳ್ಳುತ್ತೇವೆಯೋ ಆದರ ಸ್ವರೂಪವನ್ನು ಇದು ಸೂಚಿಸುತ್ತದೆ. ಸಾಮಾಜಿಕವಾದ ಸಂಗತಿಗಳಲ್ಲಿ ಆಹಾರದ ಪ್ರಶ್ನೆಯು ಇದೆ. ಮತ್ತು ಅದರಲ್ಲಿ ವಿಧಿನಿಷೇಧಗಳೂ ಇವೆ. ನಾವು ಯಾವ ಅಧ್ಯಯನದ ಕ್ರಮವನ್ನು ಇಟ್ಟುಕೊಳ್ಳುತ್ತೇವೆಯೋ ಅದರ ಆಧಾರದ ಮೇಲೆ ನಾವು ಕೆಲವು ನಿರ್ಣಯಕ್ಕೆ ಬರುತ್ತೇವೆ. ಹಾಗೆ ನೋಡಿದರೆ ರಚನೆ ಮತ್ತು ಅದರ ಕ್ರಿಯೆಯು ವೈಜ್ಞಾನಿಕವೂ ಆಗಿದೆ. ಯಾವುದನ್ನು ಈವತ್ತು ರಚನೆಯೆಂದು ಹೇಳಿ ಅದನ್ನು ಉಳಿದ ವಿಷಯಕ್ಕೆ ಸಂಬಂಧವೇ ಇಲ್ಲವೆಂದು ಪ್ರತಿಪಾದಿಸುತ್ತೇವೆಯೋ ಆದು ಹಾಗೆ ಇರುವುದೇ ಇಲ್ಲ. ಅದು ಜೀವನವನ್ನು ತಿಳಿಸುತ್ತದೆ. ಅದರಲ್ಲಿ ಕ್ರಿಯೆ ಇರುತ್ತದೆ. ಮತ್ತು ಅದರಲ್ಲಿ ಮತ್ತೆ ಮತ್ತೆ ಬೇರೆ ಅಂಶಗಳ ಜೊತೆಗಿನ ಸಂಬಂಧವೂ ಇರುತ್ತದೆ. ರಚನೆ ಮತ್ತು ಅದರ ಕ್ರಿಯೆಗೆ ಸಂಬಂಧವಿದೆ. ಕಾರಂತರ ಕುಡಿಯರ ಕೂಸು, ಸ್ವಪ್ನದ ಹೊಳೆ ಕಾದಂಬರಿಗಳನ್ನು ಓದಿದರೆ ಬೇಟೆ, ಕೃಷಿ ಮುಂತಾದವುಗಳು ಹೇಗೆ ಒಂದು ಜೀವನದ ಕಲಾತ್ಮಕವಾದ ಕ್ರಿಯೆಯು ಆಗಿದೆ ಎಂದು ತಿಳಿಯುತ್ತದೆ. ವಾಸ್ತವವಾಗಿ ಕಾರಂತರಲ್ಲಿ ಜೀವನ ಮತ್ತು ಅದರ ಶ್ರದ್ಧೆಯ ಪ್ರಶ್ನೆಯು ಅತ್ಯಂತ ಮಹತ್ವದ್ದೂ ಆಗಿದೆ. ಅದು ಮನುಷ್ಯರ ನಡವಳಿಕೆಯನ್ನು ಹೇಳುತ್ತದೆ. ಅದರಲ್ಲಿ ಬೇರೆ ಬೇರೆ ಗುಂಪುಗಳ ಪ್ರಶ್ನೆಯೂ ಬರುತ್ತದೆ. ಕಾರಂತರ ಚೋಮನ ದುಡಿ ಕಾದಂಬರಿಯಲ್ಲಿ ಬರುವ ಗುಂಪು ಒಂದು ಬಗೆಯದು. ಮರಳಿಮಣ್ಣಿಗೆ ಕಾದಂಬರಿಯಲ್ಲಿ ಬರುವ ಗುಂಪು ಮತ್ತೊಂದು ಬಗೆಯದು. ಈ ಗುಂಪುಗಳಲ್ಲಿ ನಮ್ಮ ವರ್ತನೆಯ ಅಂಶಗಳೂ ಸೇರಿಕೊಂಡಿವೆ. ಅದರಲ್ಲಿ ಚರಿತ್ರೆಯು ಹೇಗೆ ಬದಲಾಗುತ್ತದೆ ಎನ್ನುವುದರ ಚಿತ್ರಣವೂ ಇದೆ. ಜೀವನ ಮತ್ತು ಅದರ ಅಸ್ತಿತ್ವಕ್ಕಾಗಿ ಮನುಷ್ಯರು ನಡೆಸುವ ವಿವಿಧ ಬಗೆಯ ಹೋರಾಟಗಳ ವಿವರಣೆಯು ಅದರಲ್ಲಿದೆ.

ಆದರೆ ಕಾರಂತರ ಕಾದಂಬರಿಗಳಲ್ಲಿ ಬರುವ ಸಮುದಾಯದ ಅರ್ಥವು ಭಿನ್ನವಾದ ವಿವರಣೆಯನ್ನು ಕೊಡುತ್ತವೆ. ಆದರೆ ಹಳ್ಳ ಬಂತು ಹಳ್ಳ ಕಾದಂಬರಿಯಲ್ಲಿ ಬರುವ ಜೀವನ ಮತ್ತು ಅದರ ಹೋರಾಟವು ಬೇರೆ ರೀತಿಯದೂ ಆಗಿದೆ. ಅದೇ ಬಗೆಯ ಹೋರಾಟವನ್ನು ನಾವು ಸ್ವಪ್ನಸಾರಸ್ವತದಲ್ಲಿ ನೋಡುವುದು ಸಾಧ್ಯವೆ ಇಲ್ಲ. ಸ್ವಪ್ನ ಸಾರಸ್ವತದಲ್ಲಿ ಮತಾಂತರ ಮತ್ತು ಅದರ ವಿರುದ್ಧ ನಡೆಯುವ ಸಂಘರ್ಷದ ವಿವರಣೆಗಳೂ ಇವೆ. ಮನುಷ್ಯ ಮತ್ತು ಅವನ ವಿಶ್ವಾತ್ಮಕತೆಯ ಪ್ರಶ್ನೆಯು ಹೇಗೆ ಬದಲಾಗುತ್ತದೆ ಎನ್ನುವುದು ವಸಾಹತು ಮತ್ತು ವಸಾಹತೋತ್ತರಕಾಲದ ಕಾದಂಬರಿಗಳು ನಮಗೆ ಹೇಳುತ್ತವೆ. ಸಾವಿರಾರು ಜನರ ಸಾವಿರಾರು ಕ್ರಿಯೆಗಳು ಸಮಾಜವನ್ನು ರೂಪಿಸಿವೆ. ಎಷ್ಟೋ ಜನರ ಮನಸ್ಸುಗಳು ನಿರ್ದಿಷ್ಟವಾದ ಚರಿತ್ರೆಯನ್ನು ಕಟ್ಟಿವೆ. ಎಷ್ಟೋ ಸರ್ತಿ ಒಂದು ಗುಂಪಿನ ಜನರು ಒಂದೇ ರೀತಿಯಲ್ಲಿ ಯಾಕೆ ಯೋಚಿಸುತ್ತಾರೆ ಎಂದರೆ ಅವರಿಗೆ ಸಮಾನವಾದ ಕೆಲವು ಆಸಕ್ತಿಗಳು ಇರುತ್ತವೆ. ಕೆಲವು ಸಂದರ್ಭದಲ್ಲಿ ಗುಂಪು ಮತ್ತು ಅವರ ಯೋಚನೆಯ ಕ್ರಮವನ್ನು ನಾವು ಬೇರೆ ಮಾಡಲು ಬರುವುದೂ ಇಲ್ಲ. ಸಮುದಾಯ ಮತ್ತು ಅದರ ಚಟುವಟಿಕೆಗೆ ಕೆಲವು ರೀತಿಯಲ್ಲಿ ಬೌದ್ಧಿಕವಾದ ಚಟುವಟಿಕೆಯೂ ಇರುತ್ತದೆ. ಅದರಲ್ಲಿ ಸಾಹಿತ್ಯವೂ ಒಂದು. ವ್ಯಕ್ತಿಗಳು ಮತ್ತು ಅವರ ನಡವಳಿಕೆಗಳು ಇತ್ಯಾತ್ಮಕವಾದ ಸಂಯೋಜನೆಯನ್ನು ಮಾಡುತ್ತವೆ. ಸಮಾನವಾದ ಕೆಲವು ಅಂಶಗಳನ್ನು ರೂಪಿಸುತ್ತವೆ. ಸಮಾಜ ಮತ್ತು ಅದರ ಚಟುವಟಿಕೆಯನ್ನು ರೂಪಿಸುವಾಗ ಅದು ಯಾವುದನ್ನು ಹೇಳುತ್ತದೆ ಮತ್ತು ಅದನ್ನು ಅದು ಹೇಗೆ ಗ್ರಹಿಸುತ್ತದೆ ಎನ್ನುವುದು ಮಾತ್ರವೇ ಬಹಳ ಮುಖ್ಯ. ಅನೇಕ ಸಂದರ್ಭದಲ್ಲಿ ಹಳೆಯ ರಚನೆಗಳನ್ನು ಒಡೆದುಕೊಂಡು ಹೊಸರಚನೆಗಳು ಹುಟ್ಟುತ್ತವೆ. ಅರ್ಥಹೀನವಾದ ಕ್ರಿಯೆಗಳು ಮತ್ತು ಅದರ ರಚನೆಗಳನ್ನು ಹೊಸರಚನೆಗಳು ನಿರಾಕರಿಸುತ್ತವೆ. ಹೊಸತನ್ನು ಸ್ವೀಕರಿಸುವಾಗ ಅದರಲ್ಲಿ ಹೊಸ ಸನ್ನಿವೇಶವೂ ರಚನೆಯಾಗುತ್ತದೆ. ಸಮಾಜವು ಬದಲಾಗುತ್ತಾ ಹೋದಂತೆ ನಮ್ಮ ಆಲೋಚನೆ ಮತ್ತು ನಡತೆಗಳು ಬದಲಾಗುತ್ತವೆ. ನಮ್ಮ ಪ್ರಗತಿಪರ ಆಲೋಚನೆಗಳೂ ವ್ಯತ್ಯಾಸವಾಗುತ್ತವೆ. ಒಂದು ಕಾಲದ ಪ್ರಗತಿಯ ಕುರಿತಾದ ಚಿಂತನೆಗಳು ಮತ್ತು ಕಾಲಕ್ಕೆ ಬರುವಾಗ ಹಳೆಯದರಂತೆ ಭಾಸವಾಗುತ್ತದೆ. ಯಾವುದೇ ರಚನೆ ಮತ್ತು ಅದರ ಕ್ರಿಯೆಗಳು ಶಾಶ್ವತವೆಂದು ಭಾವಿಸಬೇಕಾಗಿಯೂ ಇಲ್ಲ. ನಮ್ಮ ಕ್ರಿಯಾತ್ಮಕವಾದ ಒಂದು ಚಟುವಟಿಕೆಯು ಸಮೂಹದೊಂದಿಗೆ ನಿರ್ಣಾಯಕವಾದ ಸಂಬಂಧವನ್ನು ಇಟ್ಟುಕೊಂಡಿರುತ್ತವೆ. ಸಮಾಜ ಮತ್ತು ಲೇಖಕರ ನಡುವೆ ದ್ವಂದ್ವಾತ್ಮಕವಾದ ಸಂಬಂಧವಿದೆ. ಮತ್ತು ಅದನ್ನು ನಾವು ನಿರಾಕರಿಸಲು ಬರುವುದೂ ಇಲ್ಲ.

ಸಮಾಜದಿಂದ ತೆಗೆದುಕೊಳ್ಳುವುದು ಮತ್ತು ಅದರಿಂದ ಪ್ರೇರಣೆಯನ್ನು ಪಡೆಯುವುದು ಹಾಗೂ ಮತ್ತೆ ಸಮಾಜಕ್ಕೆ ಕೊಡುವುದು ಅತ್ಯಂತ ಅಗತ್ಯವಾದ ಒಂದು ಚಟುವಟಿಕೆಯೂ ಆಗಿದೆ. ವ್ಯಕ್ತಿ ಮತ್ತು ಮತ್ತು ಅವನ ಸ್ವಭಾವ ಹಾಗೂ ಅವನ ಅನುಬವವು ನಿಜವಾಗಿಯೂ ಶಕ್ತಿಶಾಲಿಯೂ ಆಗುತ್ತದೆ. ವ್ಯಕ್ತಿಯ ಅನುಭವಕ್ಕೆ ಸಂಕೀರ್ಣತೆಯು ಇದೆ. ಆದರೆ ಸಮಾಜ ಮತ್ತು ಅದರ ಚರಿತ್ರೆಯೆನ್ನುವುದು ಬದಲಾಗುತ್ತದೆ. ಅದು ಬದಲಾಗುವಾಗ ಅದರ ಆದ್ಯತೆಗಳು ಬದಲಾಗುತ್ತವೆ. ವಾಸ್ತವವಾಗಿ ನಮ್ಮ ಗ್ರಹಿಕೆಗಳು ಬದಲಾಗಲು ಬೇರೆ ಬೇರೆ ಕಾರಣಗಳೂ ಇರಬಹುದು. ಮರಳಿಮಣ್ಣಿಗೆಯಲ್ಲಿ ಬರುವ ಸೂರನಿಗೆ ಅವನದೇ ಆಗಿರುವ ಅನನ್ಯತೆಯು ಇದೆ. ಅವನು ಉದಾರನೂ ಹೌದು. ಅವನ ವ್ಯಕ್ತಿತ್ವಕ್ಕೆ ನಿರ್ದಿಷ್ಟವಾದ ಅರ್ಥವೂ ಇದೆ. ಅವನನ್ನು ಒಂದು ಚರಿತ್ರೆಯ ಹಿನ್ನೆಲೆಯಲ್ಲಿಯೂ ನೋಡಬೇಕಾಗುತ್ತದೆ. ಅವನ ಜೀವನವು ಕೆಲವು ದೃಷ್ಟಿಯಂದ ಮಹತ್ವದ್ದೂ ಹೌದು.ಆದರೆ ಅವನ ಸಾಮಾಜಿಕ ಚರಿತ್ರೆಯು ಐತಾಳರ ಚರಿತ್ರೆಗಿಂತ ಬೇರೆಯೂ ಹೌದು. ಹಾಗೆ ನೋಡುವುದಿದ್ದರೆ ಯಾವುದೇ ಜೀವಿಯ ಅರ್ಥ ಪೂರ್ಣತೆಯು ಮತ್ತು ಅರ್ಥ ಹೀನತೆಯು ನಿರ್ಧಾರವಾಗುವುದು ಸನ್ನಿವೇಶದಿಂದ ಎಂದು ಅರ್ಥ ಮಾಡಿಕೊಳ್ಳಬೇಕು. ಸೂರನ ಸಮಸ್ಯೆಯೇ ಬೇರೆ. ರಾಮೈತಾಳರ ಸಮಸ್ಯೆಯೇ ಬೇರೆ. ಅವರು ಒಬ್ಬರ ಹಾಗೆ ಮತ್ತೊಬ್ಬರು ಇಲ್ಲ. ಅವರ ಜೀವನವು ಪಲ್ಲಟವಾಗುತ್ತದೆ. ಅವರ ಆಲೋಚನೆಯೂ ಬದಲಾಗುತ್ತದೆ. ಅವರ ಪರಿಸರವೂ ಬೇರೆ ಬೇರೆ ಕಾರಣಗಳಿಂದ ಬದಲಾಗುತ್ತದೆ. ಜೀವನ ಮತ್ತು ಅದರ ಸಾಧ್ಯತೆಯೂ ಅವರ ಮಟ್ಟಿಗೆ ಬೇರೆಯೂ ಹೌದು. ಮನುಷ್ಯ ಮತ್ತು ಅವರ ಜೀವನ ಕ್ರಮದ ಮೇಲೆ ಅನೇಕ ಪ್ರಭಾವಗಳು ಇರುತ್ತವೆ. ಅದನ್ನು ಸುಲಭವಾಗಿ ತಳ್ಳಿ ಹಾಕಲು ಬರುವುದೂ ಇಲ್ಲ. ಮತ್ತು ಅದರ ಪರಿಣಾಮಗಳು ಬೇರೆ ರೀತಿಯಲ್ಲಿಯೂ ಇರುತ್ತದೆ. ಆದರೆ ನಮಗೆ ಸಾಹಿತ್ಯವನ್ನು ಸಮಾಜವನ್ನು ನೋಡುವಾಗ ಕೆಲವು ಮಿತಿಗಳು ಇರುತ್ತವೆ. ಅದನ್ನು ಮೊದಲು ನಾವು ಬಗೆ ಹರಿಸಿಕೊಳ್ಳಬೇಕಗುತ್ತದೆ. ಅಂದರೆ ಸಾಹಿತ್ಯವನ್ನು ಅದರ ಸಾಲುಗಳು ಮತ್ತು ಅದರಲ್ಲಿ ಬಳಕೆಯಾದ ಪದಗಳ ಹಿನ್ನೆಲೆಯಲ್ಲಿ ಮಾತ್ರವೇ ಗ್ರಹಿಸುವಾಗ ಅದರಲ್ಲಿ ಕೆಲವು ಮಿತಿಗಳು ಬರುತ್ತವೆ. ವಾಸ್ತವವಾಗಿ ಕಾವ್ಯವೆಂದರೆ ಅದು ಬರೀ ಸಾಲುಗಳು ಮಾತ್ರವೇ ಆಗಿಲ್ಲ. ಅದರ ಸ್ವರೂಪವು ನಿರ್ಧಾರವಾಗುವುದು ಅದರ ತಾತ್ವಿಕವಾದ ನೆಲೆಯಲ್ಲಿಯೂ ಹೌದು. ಆದ್ದರಿಂದ ಸಮಾಜದ ಬಿಂಬಗಳಾದ ಮನುಷ್ಯರ ಚಿತ್ರಣವು ಯಾವ ಬಗೆಯಲ್ಲಿ ಇರುತ್ತದೆ ಎನ್ನುವುದೂ ಮುಖ್ಯವಾದ ಪ್ರಶ್ನೆಯೇ ಆಗಿದೆ. ಮನುಷ್ಯ ಮತ್ತು ಅವರ ಜೀವನದ ಸ್ವರೂಪವು ಅನೇಕ ಸರ್ತಿ ಪುರಾಣಗಳು

ಅಲ್ಲ. ಮನುಷ್ಯ ಮತ್ತು ಅವರ ಜೀವನವು ಪಲ್ಲಟವಾಗುವುದು ಮತ್ತು ಅದರಿಂದ ಉಂಟಾಗುವ ಪರಿವರ್ತನೆಗಳು ಒಂದು ಮಾದರಿಯಲ್ಲಿ ಇರುವುದೂ ಇಲ್ಲ. ಅದು ಬದಲಾಗುತ್ತದೆ. ಬದಲಾದಾಗ ಪರಿಸರವೂ ಬದಲಾಗುತ್ತದೆ. ಮತ್ತು ಪರಿಸರವು ಬದಲಾದಾಗ ಅದರ ಮೂಲಕ ಜೀವನವೂ ಬದಲಾಗುತ್ತದೆ. ಈ ಸಂಬಂಧವು ಅತ್ಯಂತ ಸಂಕೀರ್ಣವೂ ಆಗಿರುತ್ತದೆ. ಇದನ್ನೇ ದ್ವಂದ್ವಾತ್ಮಕವೆಂದು ಹೇಳುತ್ತಾರೆ. ಮನುಷ್ಯ ಮತ್ತು ಸಮಾಜದ ಸಂಬಂಧವು ಈ ದೃಷ್ಟಿಯಿಂದ ಅತ್ಯಂತ ಮಹತ್ವದ್ದೂ ಹೌದು. ಇಲ್ಲಿ ಮತ್ತೆ ಕೆಲವು ಪ್ರಶ್ನೆಗಳು ಬರುತ್ತವೆ. ಯಾವುದನ್ನು ಜೀವನದ ಸಮಸ್ಯೆಯೆಂದು ಹೇಳುತ್ತೇವೆಯೋ ಅದನ್ನು ನಾವು ಮಾತ್ರವೇ ಮಾಡಿಕೊಳ್ಳುವುದೂ ಇಲ್ಲ. ಅದು ಬೇರೆ ಬೇರೆ ಕಾರಣಗಳಿಂದ ಬದಲಾಗುತ್ತದೆ. ಆದ್ದರಿಂದ ನಾವು ಯಾವುದನ್ನು ಈಗ ನೋಡುತ್ತಿದ್ದೆವೆಯೊ ಆದು ಮಾತ್ರವೇ ಮುಖ್ಯವಾಗುವುದೂ ಇಲ್ಲ. ವ್ಯಕ್ತಿವಾದಿಗಳು ಜೀವನವನ್ನು ನೋಡುವ ಕ್ರಮಗಳು ಬೇರೆಯಾಗಿರುತ್ತವೆ. ಅವರು ವ್ಯಕ್ತಿಯನ್ನು ಮಾತ್ರವೇ ಜವಾಬ್ದಾರರನ್ನಾಗಿ ಮಾಡುತ್ತಾರೆ. ವಿಷಯವು ಅಷ್ಟು ಸರಿಯಾಗಿಲ್ಲ. ವ್ಯಕ್ತಿ ಮತ್ತು ಅವನ ಜೀವನದ ದೃಷ್ಟಿಕೋನಕ್ಕೂ ಸಮಾಜಕ್ಕೂ ಒಂದು ಸಂಬಂಧವಿದೆ. ಯಾವುದು ಘಟಿಸಿದೆಯೋ ಅದನ್ನು ಮಾತ್ರವೇ ನೋಡಿಕೊಂಡು ನಾವು ಮೌಲ್ಯ ಮಾಪನವನ್ನು ಮಾಡಲು ಬರುವುದಿಲ್ಲ. ಜೀವನದಲ್ಲಿ ಘಟಿಸುವ ಸಂಗತಿಗೂ ಜೀವನದ ಮೌಲ್ಯಕ್ಕೂ ನೇರವಾದ ಸಂಬಂಧವು ಇದೆಯೆಂದೂ ತಿಳಿಯಬಾರದು. ಅದು ಬದಲಾಗುತ್ತದೆ. ಮತ್ತು ಬದಲಾಗುವಾಗ ಅದರ ಕಾರಣವೂ ಬೇರೆ ಇರುವುದಕ್ಕೆ ಸಾಧ್ಯ. ಜೀವನ ಮತ್ತು ಅದರ ಹಿಂದೆ ಇರುವ ಜೀವನದ ಮೌಲ್ಯಗಳು ಬೇರೆ ಬೇರೆ ಕಾರಣಕ್ಕೆ ಬದಲಾಗುತ್ತವೆ. ನಾವು ಯಾವುದನ್ನು ನೋಡುತ್ತೇವೆ ಮತ್ತು ಅದನ್ನು ಹೇಗೆ ಗ್ರಹಿಸುತ್ತೇವೆ ಹಾಗೂ ಅದರ ಹಿಂದೆ ಯಾವ ಸಮಾಜವು ಇದೆ, ಅದನ್ನು ಯಾವುದು ನಿಯಂತ್ರಿಸಿದೆ ಎನ್ನುವುದೂ ಅಷ್ಟೇ ಮುಖ್ಯ. ಸಮಾಜವನ್ನು ನಾವು ಹೇಗೆ ನೋಡುತ್ತೇವೆ ಮತ್ತು ಅದರಂತೆ ನಾವು ಬರೆಯುವುದೂ ಅಷ್ಟೇ ನಿಜ. ಆದರೆ ಯಾವುದು ಮುಖ್ಯ ಮತ್ತು ಯಾವುದು ಅಮುಖ್ಯವೆಂದು ಹೇಳಲು ನಮಗೆ ನಮ್ಮದೇ ಆದ ತಾತ್ವಿಕತೆಯು ಬಹಳ ಮುಖ್ಯವಾಗುತ್ತದೆ. ಅದು ಅಗತ್ಯವೂ ಹೌದು. ವಾಸ್ತವವಾಗಿ ಮರಳಿಮಣ್ಣಿಗೆ ಕಾದಂಬರಿಯಲ್ಲಿ ಬರುವ ಸೂರನೂ ರಾಮನೂ ಬೇರೆ ಬೇರೆ ರೀತಿಯ ಕೆಲಸವನ್ನು ಮಾಡುತ್ತಾರೆ. ಆದರೆ ಅವರ ಕೆಲಸವನ್ನು ನೋಡಲು ಅವರ ಚರಿತ್ರೆಯನ್ನು ಗಮನಿಸಬೇಕಾಗುತ್ತದೆ. ಅದು ಅಗತ್ಯವೂ ನಿಜ. ಸೂರನು ಬದಲಾದ ಸನ್ನಿವೇಶದಲ್ಲಿ ಕೆಲಸವನ್ನು ಮಾಡುತ್ತಾನೆ. ಅದು ಅಗತ್ಯವೂ ಆಗುತ್ತದೆ. ರಾಮನೂ ಬದಲಾದ ಸನ್ನಿವೇಶದಲ್ಲಿ ಇದ್ದಾನೆ. ಅವರ ಸಂಬಂಧವು ಈ ದೃಷ್ಟಿಯಿಂದ ಹೊಸ

ಸನ್ನಿವೇಶವನ್ನು ಹೇಳುತ್ತದೆ. ಸೂರನು ಆಧುನಿಕ ಯಗಕ್ಕೆ ಸಂಬಂಧಪಟ್ಟಿದ್ದಾನೆ. ಅವನ ಸ್ವಭಾವವು ಕೂಡಾ ಬೇರೆ ಮಾದರಿಯದು. ಆದರೆ ವಿಷಯವು ಅಷ್ಟು ಸರಳವಿಲ್ಲ. ಅದು ಬದಲಾಗುತ್ತದೆ ಅಂದರೆ ಅದರ ಹಿಂದೆ ಚರಿತ್ರೆಯು ಬದಲಾಗುತ್ತದೆ ಎಂದು ಮಾತ್ರವೇ ಅರ್ಥ. ಕುಮಾರವ್ಯಾಸನು ಬರೆಯುವ ಕಾಲಕ್ಕೆ ಸೂರನಂಥವರು ಇದ್ದಿಲ್ಲವೆಂದು ಹೇಳಬೇಕಾಗಿಯೂ ಇಲ್ಲ. ಆಗಲೂ ಅನೇಕ ಸೂರರು, ಅನೇಕ ರೀತಿಯ ಐತಾಳರು ಇದ್ದರು. ಆದರೆ ಅದರಲ್ಲಿ ವ್ಯಕ್ತವಾದ ಪ್ರಾತಿನಿಧಿಕವಾದ ಸ್ವರೂಪವು ಮಾತ್ರ ಬೇರೆ ವಿಧವಾದ್ದು. ಬ್ರಿಟೀಷರು ಬಂದ ಮೇಲೆ ನಮ್ಮ ವಿವರಣೆಗಳು ಬದಲಾದವು. ನಮ್ಮ ಜೀವನ ಮತ್ತು ಅದರ ಧೋರಣೆಗಳೂ ವ್ಯತ್ಯಾಸವಾದವು. ಸಮಾಜವನ್ನು ನೋಡುವ ಮತ್ತು ಗ್ರಹಿಸುವ ಕ್ರಮದಲ್ಲಿಯೂ ವ್ಯತ್ಯಾಸವಾದವು. ಕೆಲವು ಚಾರಿತ್ರಿಕವಾದ ಚಟುವಟಿಕೆಗಳು ನಡೆಧವು. ಅದನ್ನು ಸುಲ್ತಾನ್ ಟೀಪುವಿನ ಚಟುವಟಿಕೆಯಲ್ಲಿ ಕಾಣಬಹುದು. ಹಾಗೆ ನೋಡುವುದಿದ್ದರೆ ನಮಗೆ ತುಘಲಕ್ ನಾಟಕದ ತುಘಲಕ್ ಬಹಳ ಇಷ್ಟವಾಗುತ್ತಾನೆ. ಅವನ ಕನಸುಗಳು ಚೆನ್ನಾಗಿವೆ ಎಂದು ಅನಿಸುತ್ತವೆ. ಕುಡಿಯರ ಕೂಸು ಕಾದಂಬರಿಯಲ್ಲಿ ಉಳುಮೆ ಮತ್ತು ಬೇಸಾಯವು ನಮಗೆ ಹೊಸ ಸಂಗತಿಗಳನ್ನು ಹೇಳುತ್ತವೆ. ರೈತರ ಕಷ್ಟವು ಯಾವ ಬಗೆಯವು ಎಂದು ಅಥೆಂಟಿಕ್ ಆಗಿಯೇ ವಿವರಿಸುತ್ತವೆ. ಕುಡಿಯರು ನಿಜವಾಗಿಯೂ ಬಂಡವಾಳಶಾಹಿಗಳು ಅಲ್ಲವೆನ್ನುವುದನ್ನು ಇಲ್ಲಿ ಮನಗಾಣಬೇಕಾಗುತ್ತದೆ. ಅವರ ಕೆಲಸ ಮತ್ತು ಅವರ ಜೀವನವು ಸುಖವಾದ ಸಂಗತಿಯೂ ಅಲ್ಲ. ಕುಡಿಯರು ಮತ್ತು ಅವರ ಚಟುವಟಿಕೆಯು ಒಂದು ಬಗೆಯದಾಗಿದೆ. ಅವರ ಜೀವನ ಮತ್ತು ಸಂಸ್ಕೃತಿಯ ಸ್ವರೂಪವು ಒಂದು ಬಗೆಯಲ್ಲಿದೆ. ಅವರ ಜೀವನ ವಿಧಾನದಿಂದ ಅವರ ಅವರ ಭೌತಿಕ ಅಸ್ತಿತ್ವವನ್ನು ಬೇರೆ ಮಾಡಲು ಬರುವುದೂ ಇಲ್ಲ. ಕಾಡಿನ ಅನೇಕ ಸಂಗತಿಗಳು ಅವರನ್ನು ರೂಪಿಸಿವೆ. ಸಂಸ್ಕೃತಿ ಮತ್ತು ಅದರ ಅಸ್ತಿತ್ವವನ್ನು ಅವರು ನೋಡುವುದು ಚೋಮನ ದುಡಿಯ ಚೋಮನಂತೆ ಅಲ್ಲವೆನ್ನುವುದು ಸ್ಪಷ್ಟವಾಗುತ್ತದೆ. ಕುಡಿಯರು ಅನೇಕ ವಿಷಯಗಳಲ್ಲಿ ಸ್ವತಂತ್ರರೂ ಹೌದು. ಅವರಿಗೆ ಪರಕೀಯರೆಂದರೆ ತಿರುಮಲಭಟ್ಟ ಮತ್ತು ಕಿರಿಸ್ತಾನರು. ಅವರಲ್ಲಿ ತಾರತಮ್ಯಗಳು ಇವೆ. ಅವರು ಬದಲಾಗುತ್ತಾರೆ. ಅವರಿಗೆ ಬೇರೆ ಬೇರೆ ರೀತಿಯ ಅಸ್ತಿತ್ವವು ಇದೆ. ಗಿಡ್ಡಿ ಮತ್ತು ಅವಳ ಸಮಸ್ಯೆಯು ಒಂದು ಥರ. ಕೆಂಚ ಮತ್ತು ಅವನ ಸಮಸ್ಯೆಯು ಮತ್ತೊಂದು ಥರ. ಹೀಗಾಗಿಯೇ ಅವರಿಗೆ ಭಿನ್ನವಾದ ಸಮಸ್ಯೆಗಳು ಇರುತ್ತವೆ. ಕಿರಿಮಲೆಯರು ಮತ್ತು ಹಿರಿಮಲೆಯವರು ಬೇರೆ ವರ್ಗಗಳನ್ನು ಮಾಡಿಕೊಂಡಿದ್ದಾರೆ. ಅವರಿಗೆ ಆ ತರಹದ ವ್ಯತ್ಯಾಸವೂ ಇದೆ. ಮತ್ತು ಅದರಲ್ಲಿ ತಾರತಮ್ಯಗಳೂ ಇವೆ. ಅವರ

ಜೀವನ ಮತ್ತು ರಕ್ಷಣೆಗೆ ಹರಕೆಯನ್ನು ಹೇಳುವುದು ಕಲ್ಕುಡ ಮೊದಲಾದ ದೈವಗಳಿಗೆ. ಅವರ ನಡೆ ಮತ್ತು ನುಡಿಯನ್ನು ನಿಯಂತ್ರಿಸಿಕೊಂಡು ಅವರಿಗೆ ನಿಯಮವನ್ನು ಹೇರುವುದು ಗುರಿಕಾರರು ಮಾತ್ರವೇ. ಅಂದರೆ ಇದರಲ್ಲಿ ವ್ಯತ್ಯಾಸಗಳೂ ಇವೆ. ಸಂಸ್ಕಾರ ಕಾದಂಬರಿಯಲ್ಲಿ ಗುರಿಕಾರರು ಮತ್ತು ಕಲ್ಕುಡರು ಬರುವುದಿಲ್ಲ. ಅದರಲ್ಲಿ ಹೆಚ್ಚು ಮುಖ್ಯ ಜಾತಿ ಮತ್ತು ಅದರ ಹಿಂದಿನ ಗೋತ್ರಗಳು ಹಾಗೂ ಮಠ. ಕಾರಂತರ ಕಾದಂಬರಿಗಳಲ್ಲಿ ಬರುವ ತತ್ವಜ್ಞಾನವನ್ನು ನಾವು ಕಾದಂಬರಿಯ ನಡಿಗೆಯಲ್ಲಿಯೇ ನೋಡಬೇಕಾಗುತ್ತದೆ. ತತ್ವಜ್ಞಾನವನ್ನು ಕಾದಂಬರಿಗಳು ನೋಡುವುದು ಮತ್ತು ಗ್ರಹಿಸುವುದು ಮುಖ್ಯವಾಗಿ ಸಾರ ರೂಪದಲ್ಲಿಯೇ ಎನ್ನುವುದು ಇಲ್ಲಿ ಉಲ್ಲೇಖನೀಯ. ಸಮಾಜ, ಚರಿತ್ರೆ, ಆರ್ಥಿಕತೆ, ಸಾಂಸ್ಕೃತಿಕ ಸಂಗತಿಗಳು ಮತ್ತು ಸಾಹಿತ್ಯದ ನಿಲುವುಗಳು ಜೊತೆಗೆ ಹೋಗುತ್ತವೆ. ಅಂದರೆ ಅದರಲ್ಲಿ ಅನೇಕ ಸಂಗತಿಗಳು ಜೊತೆಗೆ ಹೋಗುವುದರಿಂದ ಅವುಗಳನ್ನು ಬೇರೆ ಮಾಡಿಕೊಂಡು ನೋಡಲು ಬರುವುದೂ ಇಲ್ಲ. ವಸ್ತು ಮತ್ತು ಅದರ ಕುರಿತಾದ ತಪ್ಪು ತೀರ್ಮಾನಗಳು ನಮಗೆ ತಪ್ಪು ಫಲಿತಾಂಶವನ್ನು ಕೊಡುತ್ತವೆ. ಆದ್ದರಿಂದ ಘಟನೆ ಮತ್ತು ಅದರ ಕುರಿತಾದ ತಪ್ಪು ತೀರ್ಮಾನವು ತಪ್ಪು ಫಲಿತಾಂಶವನ್ನು ಹೇಳುವುದು ಮಾತ್ರವೇ ಅಲ್ಲ ಅದರ ಮೂಲಕ ನಾವು ಸಂದೇಶವನ್ನು ಹೇಳುತ್ತೇವೆ. ಒಂದು ಸನ್ನಿವೇಶವನ್ನು ಅರ್ಥಮಾಡಿಕೊಳ್ಳಲು ನಮಗೆ ಮನೋವಿಜ್ಞಾನ ಮತ್ತು ಸಮಾಜ ವಿಜ್ಞಾನವು ನೆರವಿಗೆ ಬರುತ್ತವೆ. ವಿಜ್ಞಾನಕ್ಕೂ ನಮ್ಮ ಬಳಕೆಯ ಸಮಾಜ ವಿಜ್ಞಾನಕ್ಕೂ ಈ ದೃಷ್ಟಿಯಿಂದ ದ್ವಂದ್ವಾತ್ಮಕತೆಯು ಇರುತ್ತದೆ. ಅವುಗಳ ನಡುವೆ ಕೆಲವು ಸಮಾನವಾದ ಅಂಶಗಳೂ ಇರುತ್ತವೆ. ಫ್ರಾಯ್ಡ್ ಚರಿತ್ರೆ ಮತ್ತು ಸಮಾಜಶಾಸ್ತ್ರವನ್ನು ಹಾಗೂ ಧರ್ಮವನ್ನು ನೋಡುತ್ತಾನೆ. ಅದರ ಜೊತೆಗೆ ಅನೇಕ ಸಂಗತಿಗಳು ಇರುತ್ತವೆ ಎಂದು ಅವನ ಭಾವನೆಯೂ ಆಗಿದೆ. ಸಮಾಜ ಮತ್ತು ಅದರ ಸ್ವರೂಪವನ್ನು ಈ ದೃಷ್ಟಿಯಿಂದ ಬೇರೆ ಮಾಡಬೇಕಾಗುತ್ತದೆ. ಅವನಲ್ಲಿ ವ್ಯಕ್ತಿಗೂ; ಸಮಾಜಕ್ಕೂ; ಚರಿತ್ರೆಗೂ ವಿವಿಧ ರೀತಿಯ ಸಂಬಂಧವು ಇರುತ್ತದೆ. ಸಮಾಜದ ಅನೇಕ ವಿಧಿನಿಷೇಧಗಳು ಮನಸ್ಸಿನ ಮೇಲೆ ಪ್ರಭಾವವನ್ನು ಬೀರುತ್ತವೆ. ಅಂದರೆ ವ್ಯಕ್ತಿಯನ್ನು ಅನೇಕ ಸಂದರ್ಭದಲ್ಲಿ ಇವುಗಳೇ ನಿಯಂತ್ರಣವನ್ನು ಮಾಡುತ್ತವೆ. ವ್ಯಕ್ತಿ ಮತ್ತು ಅವನ ಬಯಕೆಗಳು ಒಂದು ರೀತಿಯಲ್ಲಿ ಇರುತ್ತವೆ. ಮತ್ತು ಅದರಲ್ಲಿ ವಿಶಿಷ್ಟತೆಯು ಮುಖ್ಯ. ವ್ಯಕ್ತಿ ಮತ್ತು ಅವನ ನಡೆ ನುಡಿಯು ಒಂದು ಬಗೆಯಲ್ಲಿ ಇರುತ್ತವೆ. ಮತ್ತು ಸಮಾಜದ ಚಾರಿತ್ರಿಕ ನಡೆ ನುಡಿಗಳು ಮತ್ತೊಂದು ರೀತಿಯಲ್ಲಿ ಇರುತ್ತವೆ. ಸಾಮೂಹಿಕ ನಡೆ ಮತ್ತು ನುಡಿಗಳು ಸಾಹಿತ್ಯದಲ್ಲಿ ಕೆಲವು ಆಯ್ಕೆಯನ್ನು ಮಾಡುವಂತೆ ಮಾಡುತ್ತವೆ. ವ್ಯಕ್ತಿ ಮತ್ತು ಅವನ ಬಯಕೆಗಳನ್ನು

ನಾವು ಅವನ ಲಿಬಿಡೋ ಪ್ರವೃತ್ತಿಯಿಂದ ನೋಡಬೇಕಾಗುತ್ತದೆ ಅವನಲ್ಲಿ ಅಂದರೆ ಫ್ರಾಯ್ಡನಲ್ಲಿ ನಮಗೆ ಅನೇಕ ವಿವರಣೆಗಳು ದೊರೆಯುತ್ತವೆ. ಮತ್ತು ಅವನು ಅನೇಕವನ್ನು, ವಿವರಣಾತ್ಮಕವಾಗಿ ಮತ್ತು ವಿಶ್ಲೇಷಣಾತ್ಮಕವಾಗಿಯೂ ನೋಡುತ್ತಾನೆ. ಕನಸು ಮತ್ತು ಅದರ ರಚನೆಯನ್ನು ಅವನು ವಿಶಿಷ್ಟವಾಗಿಯೂ ನೋಡುತ್ತಾನೆ. ಅದರಲ್ಲಿ ಅವನು ಹೆಚ್ಚು ಸಂದರ್ಭವನ್ನು ಗಮನಿಸುತ್ತಾನೆ. ಅದರ ಹಿಂದೆ ಇರುವ ಸಂವೇದನೆಯು ಅವನಿಗೆ ಬಹಳ ಮುಖ್ಯವಾಗುತ್ತದೆ. ಅವನ ಪ್ರಕಾರ ಲಿಬಿಡೋ ಅನ್ನುವುದು ಮೂಲಭೂತವಾಗಿ ಸ್ವಾಯತ್ತವಲ್ಲ. ಅದು ಸಂಸ್ಕೃತಿಯನ್ನು ಹೇಳುತ್ತದೆ. ಮತ್ತು ಅದರಲ್ಲಿ ಸಾಮಾಜಿಕ ಜೀವನದ ಅರ್ಥವೂ ಇರುತ್ತದೆ. ಈ ದೃಷ್ಟಿಯಿಂದ ಮನೋವೈಜ್ಞಾನಿಕ ವಿಮರ್ಶೆಯು ನಮಗೆ ಅನೇಕವನ್ನು ಸೂಚಿಸುತ್ತದೆ. ಅದು ಕೆಲಸವನ್ನು ಸಂಪೂರ್ಣವಾಗಿಯೂ ಗಮನಿಸುತ್ತದೆ. ಯಾವುದೇ ಪರಿಶೀಲನೆಗೆ ವಿವರಣೆಯು ಬೇಕಾಗುತ್ತದೆ. ವಾಸ್ತವ ಮತ್ತು ಅದರ ಅಧ್ಯಯನವೆದರೆ ವ್ಯಕ್ತಿ ಮತ್ತು ಅವನ ಕ್ರಿಯೆ ಮತ್ತು ಅವನ ಹಿಂದೆ ಇರುವ ಸಮಾಜದ ಪರಿಶೀಲನೆಯೂ ಹೌದು. ವಾಸ್ತವವಾದ ಅಧ್ಯಯನವು ಈ ದೃಷ್ಟಿಯಿಂದ ಬೇರೆ ಬೇರೆ ಆನ್ವಯಿಕತೆಯನ್ನು ಹೇಳುತ್ತದೆ. ವಾಸ್ತವ ಮತ್ತು ಅದರ ಕ್ರಿಯೆಗಳಲ್ಲಿ ಈ ದೃಷ್ಟಿಯಿಂದ ಭಿನ್ನವಾದ ಒಂದು ಸಂಗತಿಯನ್ನು ಹೇಳುತ್ತದೆ. ನಾವು ರಚನೆಯನ್ನು ಮಾಡುತ್ತೇವೆ ಎಂದರೆ ಅದರ ಹಿಂದೆ ಕ್ರಿಯೆಯೂ ಇದೆ ಎಂದೇ ಅರ್ಥವಾಗುತ್ತದೆ. ರಚನೆಯು ಒಂದು ಬಗೆಯಲ್ಲಿ ನಿರ್ದಿಷ್ಟವಾದ ಚಟುವಟಿಕೆಯೂ ಹೌದು. ಯಾವುದೇ ಜ್ಞಾನವು ಇಲ್ಲದೆ ಯಾವುದೆ ಕ್ರಿಯೆಯು ಅಸಾಧ್ಯ. ಮತ್ತು ನಾವು ನಮಗೆ ಬೇಕಾದ ರಚನೆಗಳನ್ನು ಮಾಡುತ್ತೇವೆ. ಸಮಾಜವು ಈ ರೀತಿಯ ಅನೇಕ ಕ್ರಿಯೆಗಳನ್ನು ಹೊಂದಿರುತ್ತವೆ. ಬಂಡವಾಳದ ರಚನೆಯು ವ್ಯಕ್ತಿಗಳನ್ನು ನೋಡುವುದು ಮತ್ತು ಗ್ರಹಿಸುವುದು ಒಂದು ರೀತಿಯಲ್ಲಿ. ಕೆಲವು ನಿಯಮಗಳು ಮತ್ತೆ ಮತ್ತೆ ಯಾಕೆ ಬರುತ್ತವೆ ಎಂದರೆ ಅದರಲ್ಲಿ ಕೆಲವು ಸಾರ ರೂಪಗಳು ಇರುತ್ತವೆ. ರಚನೆ ಮತ್ತು ನಿರಚನೆಯು ಸಹಜವಾಗಿಯೂ ನಡೆಯುತ್ತದೆ. ಒಂದು ರಚನೆಯು ಮತ್ತೊಂದು ರಚನೆಗೆ ಕಾರಣವೂ ಆಗುತ್ತದೆ. ಆದ್ದರಿಂದ ರಚನೆ ಮತ್ತು ಅದರ ವ್ಯತ್ಯಾಸಗಳೂ ಅಧ್ಯಯನ ಯೋಗ್ಯವಾಗಿವೆ. ರಚನೆಗಳನ್ನು ಸಮಾಜವು ಬದಲಿಸುತ್ತದೆ. ಮತ್ತು ತನಗೆ ಬೇಕದ ರಚನೆಗಳನ್ನು ಆಯ್ಕೆ ಮಾಡಿಕೊಳ್ಳುತ್ತದೆ. ಅದು ಪರಿವರ್ತನೆಯನ್ನು ಮಾಡುತ್ತದೆ. ವಾಸ್ತವವಾಗಿ ಅನೇಕ ರಚನೆಗಳು ತಾತ್ಕಾಲಿಕವಾದ ವಿಷಯವನ್ನು ಹೊಂದಿರುತ್ತದೆ. ಅನೇಕ ರಚನೆಗಳು ಪರಿವರ್ತನೆ ಮತ್ತು ಮುಂದುವರಿಕೆಯನ್ನು ಬೇರೆ ಬೇರೆ ವಿಧದಲ್ಲಿ ಮಾಡುತ್ತವೆ. ಅದರ ಹಿಂದೆ ಸಂವೇದನೆ ಮತ್ತು ಆಲೋಚನೆಗಳು ಇರುತ್ತವೆ. ಅನೇಕರು ಆಧುನಿಕ ರಚನೆಗಳನ್ನು ಓದುವಾಗ ಅದರ ಉದ್ದೇಶವನ್ನು

ಗ್ರಹಿಸುವುದೇ ಇಲ್ಲ. ಹಾಗೆ ನೋಡುವುದಿದ್ದರೆ ಭಾಷೆ ಮತ್ತು ಅದರ ರಚನೆಗಳೇ ವಿಶ್ವಾತ್ಮಕವೂ ಆಗುತ್ತದೆ. ರಚನೆಗೆ ಇರುವ ಚಾರಿತ್ರಿಕತೆಯೂ ಈ ದೃಷ್ಟಿಯಿಂದ ಬಹಳ ಮುಖ್ಯವಾಗುತ್ತದೆ. ರಚನೆಯೂ ಕೆಲವು ಮಾದರಿಯ ಸಂವಹನವನ್ನು ಹೇಳುತ್ತವೆ. ಮತ್ತು ಅನೇಕ ರಚನೆಗಳಿಗೆ ವೈಜ್ಞಾನಿಕವಾದ ಅಂಶಗಳೂ ಇರುತ್ತವೆ. ಅದರೆ ಅದರ ಸ್ವರೂಪದಲ್ಲಿಯೇ ಅನೇಕ ಅಂಶಗಳು ಇರುತ್ತವೆ. ಕೃತಿಯೊಂದರ ವಿವರಣೆಯನ್ನು ಮಾಡುವುದು ಎಂದರೆ ಅದರ ರಚನೆಯನ್ನು ಮಾತ್ರವೇ ನೋಡುವುದು ಅಲ್ಲ. ಅದರ ಆಶಯವನ್ನು ನಾವು ಗಮನಿಸಬೇಕಾಗುತ್ತದೆ. ಇಲ್ಲಿ ಮಹಾಕಾವ್ಯ ಮತ್ತು ಅದರ ರಚನೆಯನ್ನು ನೋಡಬೇಕು. ಅದು ವಿಸ್ತಾರವಾಗಿರುತ್ತದೆ. ಮತ್ತು ಅದು ಕಾದಂಬರಿಗಿಂತ ಬೇರೆಯೂ ಆಗಿರುತ್ತದೆ. ನಮ್ಮ ಕೆಲಸ ಮತ್ತು ಅದರ ಸ್ವರೂಪವನ್ನು ನಿರ್ಧರಿಸಿಕೊಳ್ಳುವಾಗ ರಚನೆಯ ಭಿನ್ನತೆಯೂ ಬಹಳ ಮುಖ್ಯವಾದ ಸಂಗತಿಯೂ ಆಗುತ್ತದೆ. ಆದರೆ ಕಾಂಟ್ ಮತ್ತು ಅವನ ಕೆಲಸವನ್ನು ನೋಡಲು ನಮಗೆ ಅವನ ಲಾಂಡ್ರಿಬಿಲ್ ಉಪಯೋಗಕ್ಕೆ ಬರುತ್ತದೆ ಎಂದು ಅರ್ಥವೂ ಅಲ್ಲ. ನಮಗೆ ಎದುರಾಗಿರುವ ವಾಸ್ತವ ಮತ್ತು ಅದರ ಕುರಿತಾದ ಚಿಂತನೆಗಳು ಮಾಡುವದಕ್ಕೆ ರಚನೆಯ ಅರಿವು ಇರಬೇಕಾಗುತ್ತದೆ. ಇದು ಹೇಗೆ ಅರ್ಥ ಮಾಡುತ್ತೇವೆ ಎನ್ನುವುದನ್ನು ಸೂಚಿಸುತ್ತದೆ. ಬರಹ ಮತ್ತು ಅದರ ಸಾಮಾಜಿಕತೆಯನ್ನು ಕುರಿತು ಮಾತಾಡುವವರು ಇದನ್ನು ಅರ್ಥ ಮಾಡಿಕೊಳ್ಳಬೇಕಾದ ಅಗತ್ಯವೂ ಇದೆ. ಸಂಶೋಧಕನೂ ಇದನ್ನು ಗ್ರಹಿಸಬೇಕಾಗುತ್ತದೆ. ವಾಸ್ತವವಾಗಿ ತನ್ನ ಮನೋಸ್ಥಿತಿಗೆ ಅನುಗುಣವಾಗಿ ನಾವು ಅನೇಕವನ್ನು ನೋಡುತ್ತೇವೆ. ನಮ್ಮ ಗ್ರಹಿಕೆ ಮತ್ತು ನಮ್ಮ ಮನೋಸ್ಥಿತಿಗೆ ಕೆಲವು ರೀತಿಯ ಸಂಬಂಧಗಳೂ ಇರುತ್ತವೆ. ನಮಗೆ ಸಮಾಜ ಮತ್ತು ಅದರ ಪರಿಜ್ಞಾನವು ಇದ್ದಾಗ ನಾವು ಕೃತಿಯನ್ನು ನೋಡುವ ಮತ್ತು ಗ್ರಹಿಸುವ ಕ್ರಮಗಳು ಬೇರೆಯಾಗುತ್ತವೆ. ನಮಗೆ ಅತ್ಯಂತ ಅಗತ್ಯವಾಗಿ ಬೇಕಾಗಿರುವುದು ನಮ್ಮ ಸಮಾಜ ಮತ್ತು ಅದರ ಚರಿತ್ರೆಯ ಅರಿವು. ಈ ಅರ್ಥದಲ್ಲಿ ನಾವು ಸಮಾಜವನ್ನು ವೈಜ್ಞಾನಿಕವಾಗಿಯೂ ನೋಡಬೇಕಾಗುತ್ತದೆ. ಮತ್ತು ಅದರಲ್ಲಿ ನಾವು ಭಾವುಕತೆಯನ್ನು ಮಿಶ್ರ ಮಾಡಲು ಬರುವುದೂ ಇಲ್ಲ. ನಮ್ಮ ಮನೋಸ್ಥಿತಿ ಮತ್ತು ಅದರ ವರ್ಗವೂ ನಮಗೆ ಮುಖ್ಯವಾಗುತ್ತದೆ. ಸಾಮಾಜಿಕ ಜ್ಞಾನ ಮತ್ತು ಅದರ ಸ್ವರೂಪವು ನಮಗೆ ಅತ್ಯಂತ ಅಗತ್ಯವೂ ಆಗುತ್ತದೆ. ನಾವು ನಮ್ಮ ಸಾಮಾಜಿಕ ಜ್ಞಾನವನ್ನು ಮಾತ್ರವೇ ಸರಿಯಾಗಿಯೂ ಗ್ರಹಿಸಬೇಕಾಗುತ್ತದೆ. ಆಲೋಚನೆ ಮತ್ತು ಸಾಹಿತ್ಯಕ್ಕೆ ಸಂಬಂಧವಿರುವುದನ್ನು ನಾವು ಗಮನಿಸಲೇಬೇಕಾಗುತ್ತದೆ. ವ್ಯಕ್ತಿ ಮತ್ತು ಅವನ ಪ್ರಜ್ಞೆಯು ಚರಿತ್ರೆ ಮತ್ತು ಸಮಾಜದಿಂದ ಬಂದಿದೆ. ಸಾಮಾಜಿಕ ಜೀವನವು

ಒಂದು ಬಗೆಯ ಪ್ರಜ್ಞೆಯನ್ನು ಕೊಡುತ್ತದೆ. ವ್ಯಕ್ತಿಯ ಪ್ರಜ್ಞೆಯು ಮತ್ತೊಂದು ಬಗೆಯದು. ವ್ಯಕ್ತಿಯೆಂದರೆ ಅವನು ಸಾಮಾಜಿಕ ರೂಪದ ಸಾರವೂ ಹೌದು. ಸಮಾಜದ ಅನೇಕ ಚಟುವಟಿಕೆಗಳು ನಮ್ಮನ್ನು ರೂಪಿಸುತ್ತವೆ. ಮತ್ತು ಅದರ ಜೊತೆಗೆ ನಾವು ನಮ್ಮ ಪ್ರಜ್ಞೆಯನ್ನು ರೂಪಿಸಿಕೊಂಡು ಇರುತ್ತೇವೆ. ಸಾಮಾಜಿಕತೆಯು ಈ ದೃಷ್ಟಿಯಲ್ಲಿ ಅತ್ಯಂತ ಮಹತ್ವದ್ದೂ ಹೌದು. ಸಮಾಜ ಮತ್ತು ವ್ಯಕ್ತಿಯ ನಡುವೆ ಒಂದು ಬಗೆಯ ಸಮತೋಲನವೂ ಇರಬೇಕಾಗುತ್ತದೆ. ಆದ್ದರಿಂದ ವ್ಯಕ್ತಿಯ ಮನೋಸ್ಥಿತಿಯು ಅತ್ಯಂತ ಸಂಕೀರ್ಣವೂ ಆಗಿರುತ್ತದೆ. ವ್ಯಕ್ತಿಯು ಅನ್ಯರಿಗೆ ಅನೇಕವನ್ನು ಹೇಳುತ್ತಾನೆ. ಅನೇಕರಿಂದ ಕಲಿಯುತ್ತಾನೆ. ಮತ್ತು ಬೆಳೆಯುತ್ತಾನೆ. ಅವನಿಗೆ ಅದು ಅಗತ್ಯವೂ ಆಗಿರುತ್ತದೆ. ಅಂದರೆ ವ್ಯಕ್ತಿ ಮತ್ತು ಅವನ ಪ್ರಜ್ಞೆಯು ಈ ದೃಷ್ಟಿಯಲ್ಲಿ ಸ್ವಯಂಸಂಪೂರ್ಣವಲ್ಲ. ಅದು ಸಂವಾದಿಯಾದುದು ಹೌದು. ಜ್ಞಾನಕ್ಕೂ ನಮ್ಮ ಪ್ರಜ್ಞೆಗೂ ಒಂದು ಸಂಬಂಧವಿದೆ. ಸಮಾಜವನ್ನು ಅರ್ಥ ಮಾಡಿಕೊಳ್ಳುವುದು ಅಂದರೆ ನಾವು ಸಮಾಜವನ್ನು ಜ್ಞಾನದ ಮೂಲಕ ಅರಿಯುವುದೂ ಹೌದು. ಆದ್ದರಿಂದ ವ್ಯಕ್ತಿ ಮತ್ತು ಅವನ ತಿಳುವಳಿಕೆಯು ಅತ್ಯಂತ ಮಹತ್ವದ್ದೂ ಹೌದು. ಘಟನೆ ಮತ್ತು ಅದರ ಮೌಲ್ಯಕ್ಕೆ ಸಂಬಂಧವು ಇರುವುದರಿಂದ ನಾವು ಅನೇಕವನ್ನು ಈ ಮೂಲಕವೇ ಗ್ರಹಿಸಬೇಕಾಗುತ್ತದೆ. ಭೌತಿಕ ಮತ್ತು ಬೌದ್ಧಿಕ ಸಂಗತಿಗಳು ನಮಗೆ ಮತ್ತು ನಮ್ಮ ಪ್ರಜ್ಞೆಗೆ ಹೊಸ ಆಯಾಮವನ್ನು ಕೊಡುತ್ತದೆ. ನಾವು ಪ್ರತಿಪಾದಿಸುವ ಮೌಲ್ಯಕ್ಕೂ ಸಾಮಾಜಿಕ ವಾಸ್ತವಕ್ಕೂ ಸಂಬಂಧವಿದೆ. ಅದರಲ್ಲಿ ಮೌಲ್ಯ, ತೀರ್ಮಾನ, ತಾತ್ವಿಕತೆಗಳು ಸೇರಿಕೊಂಡಿರುತ್ತವೆ. ಒಂದು ಅಧ್ಯಯನಕ್ಕೆ ಇರುವ ಒಳ ಮತ್ತು ಹೊರ ಅಧ್ಯಯನ ಕ್ರಮವನ್ನು ಈ ದೃಷ್ಟಿಯಲ್ಲಿ ನಾವು ಬೇರೆ ಮಾಡಿಕೊಂಡು ನೋಡಬೇಕಾಗುತ್ತದೆ. ಅಧ್ಯಯನಕ್ಕೂ ವಾಸ್ತವಕ್ಕೂ ಈ ಅರ್ಥದಲ್ಲಿ ಸರಿಯಾದ ಸಂಬಂಧವೂ ಇದೆ. ಅದು ಸಮೂಹವೂ ಹೌದು ವ್ಯಕ್ತಿ ಕೇಂದ್ರಿತವೂ ಹೌದು. ವಿಷಯ ಮತ್ತು ಪರಿಸರಕ್ಕೂ ಈ ದೃಷ್ಟಿಯಿಂದ ಸಂಬಂಧವಿದೆ. ಅದನ್ನು ನಾವು ನೋಡಬೇಕಾಗುತ್ತದೆ. ಆದರೆ ಇಲ್ಲಿ ಮತ್ತೆ ಕೆಲವು ಸೂಕ್ಷ್ಮವಾದ ಪ್ರಶ್ನೆಗಳೂ ಇವೆ. ಮನೋರಚನೆಗೂ ವಿಶ್ವಾತ್ಮಕತೆಗೂ ಒಂದು ಸಂಬಂಧವಿದೆ. ಯಾವುದೇ ಲೋಕ ದೃಷ್ಟಿಯನ್ನು ನಾವು ಈವತ್ತು ವ್ಯಕ್ತಿಯನ್ನು ಆಧರಿಸಿಕೊಂಡು ಮಾಡುವುದು ಕಷ್ಟದಾಯಕವಾಗಿದೆ. ಅಂದರೆ ವ್ಯಕ್ತಿಯ ಮನೋಸ್ಥಿತಿಯೂ ರಚನೆಯೇ ಆಗಿದೆ. ಅದಕ್ಕೆ ಕೆಲವು ನಿಯಮಗಳು ಇರುತ್ತವೆ. ನಿಯಮವನ್ನು ಈವತ್ತು ನಾವು ವಿರೋಧಿಸುವ ಸ್ಥಿತಿಯಲ್ಲಿ ಇಲ್ಲ. ನಿಯಮವನ್ನು ನಾವು ಮಾಡಿಕೊಂಡಿದ್ದೇವೆ. ಅದು ನಮ್ಮ ಅಗತ್ಯವೂ ಆಗಿರುವುದು ನಿಜ. ಸಿದ್ಧಾಂತವೂ ಯಾಕೆ ಮಹತ್ವದ್ದು ಆಗಿದೆಯೆಂದರೆ ಈ ಕಾರಣಕ್ಕೆ. ಅದು ಲೋಕವನ್ನು

ನೋಡಲು ಒಂದು ಬುನಾದಿಯನ್ನು ಹಾಕುತ್ತದೆ. ಸಿದ್ಧಾಂತವು ಮತ್ತೊಂದನ್ನು ರೂಪಿಸುತ್ತದೆ. ಅದು ಮೌಲ್ಯವನ್ನು ಹೇಳುತ್ತದೆ. ಮತ್ತು ಅದರಲ್ಲಿ ಲೋಕವನ್ನು ಕಾಣಲು ಬೇಕಾದ ಒಂದು ನಿಲುವೂ ಇರುತ್ತದೆ. ಆದರೆ ಸೃಜನಶೀಲತೆಯು ನಮಗೆ ಮತ್ತೆ ಕೆಲವು ಅಂಶಗಳನ್ನು ಪ್ರತಿಪಾದಿಸುತ್ತವೆ. ಸೃಜನಶೀಲತೆಯೂ ನಮಗೆ ಜೀವನ ಮತ್ತು ಅದರ ಕುರಿತಾದ ವಿಶಿಷ್ಟವಾದ ಧೋರಣೆಯನ್ನು ಹೇಳುತ್ತದೆ. ಆದರೆ ಸಮೂಹ ಜೀವನದ ಪ್ರಜ್ಞೆಯು ನಮಗೆ ಅನೇಕವನ್ನು ತೋರಿಸಿಕೊಡುತ್ತದೆ. ಸಮೂಹ ಪ್ರಜ್ಞೆಯು ನಮಗೆ ನಿರ್ದಿಷ್ಟವಾದ ನೋಟವನ್ನು ಹೇಳುತ್ತದೆ. ಸಮಾಜ ಮತ್ತು ಅದರ ತಿಳುವಳಿಕೆಗಳು ಈ ದೃಷ್ಟಿಯಿಂದ ಅತ್ಯಂತ ಮಹತ್ವದ್ದೂ ಹೌದು. ಲೋಕ ದೃಷ್ಟಿ ಮತ್ತು ಅದರ ಪರಿಣಾಮಗಳು ನಮಗೆ ಪ್ರಭಾವವನ್ನು ಬೀರುವುದೂ ಅಷ್ಟೇ ನಿಜ. ನಾವು ಈ ದೃಷ್ಟಿಕೋನವನ್ನು ನಿಯಂತ್ರಿಸಬೇಕಾದ ಯಾವ ಅಗತ್ಯವೂ ಇಲ್ಲ. ಸಾಮಾಜಿಕ ಜೀವನ ಮತ್ತು ಅದರ ಸ್ವರೂಪವೇ ನಮಗೆ ಬಹಳ ಮುಖ್ಯ. ಆದರೆ ಲೋಕ ದೃಷ್ಟಿಯೆಂದರೆ ಅದು ಆತಾತ್ವಿಕವಾದ ಸಂಗತಿಯೂ ಅಲ್ಲ. ಅದರ ಹಿಂದೆ ಚರಿತ್ರೆ ಮತ್ತು ಅದು ಬೆಳೆದು ಬಂದ ವಿವಿಧ ಕ್ರಮಗಳೂ ಇವೆ. ಕೆಲವು ಸರ್ತಿ ನಾವು ಸಾಮಾನ್ಯವಾದ ಸಂಗತಿಗಳನ್ನು ನೋಡಬೇಕಾಗುತ್ತದೆ. ಅದು ಉದ್ದೇಶಿತವೂ ಹೌದು. ವಿಶಿಷ್ಟವೂ ಹೌದು. ಕೆಲವು ಸಮಾಜ ಮತ್ತು ಅದರ ಸಂಘರ್ಷವನ್ನು ಹೇಳುತ್ತವೆ. ಸಾಮಾಜಿಕ ವರ್ಗ ಮತ್ತು ಲೋಕ ಗ್ರಹಿಕೆಗೆ ಸಂಬಂಧವೂ ಇದೆ. ಕೆಲವು ಸಮಾಜ ಮತ್ತು ಅದರ ಅರಿವನ್ನು ಹೇಳುತ್ತವೆ. ಕೆಲವು ಸಾಮಾಜಿಕ ಘಟನೆಗಳು ಬೌದ್ಧಿಕವಾದ ಚಟುವಟಿಕೆಗೆ ಕಾರಣವೂ ಆಗುತ್ತದೆ. ನಿಸರ್ಗ ಮತ್ತು ಮನುಷ್ಯರ ನಡುವೆ ಇರುವ ಸಮತೋಲನವು ಭಿನ್ನವಾಗಿದೆ. ಮತ್ತು ಅದರ ಅರ್ಥವೂ ಬೇರೆಯಾಗಿದೆ. ನಮ್ಮ ಮಾನಸಿಕ ರಚನೆಗೂ ಬಾಹ್ಯಕ್ಕೂ ಒಂದು ಸಂಬಂಧವಿದೆ. ಸಮಾಜಕ್ಕೂ ಭೌತಿಕತೆಗೂ ಸಂಬಂಧವಿದೆ, ಆದ್ದರಿಂದ ಅವುಗಳನ್ನು ನಾವು ನಿರ್ದಿಷ್ಟವಾಗಿಯೇ ಗ್ರಹಿಸಬೇಕಾಗುತ್ತದೆ. ಬಾಹ್ಯವು ನಮಗೆ ಪ್ರಭಾವವನ್ನು ಬೀರುತ್ತದೆ. ಉತ್ಪಾದನೆ ಮತ್ತು ಉತ್ಪಾದನೆಯ ಶಕ್ತಿಗಳ ನಡುವಣ ಸಂಬಂಧವನ್ನು ಈ ದೃಷ್ಟಿಯಿಂದಲೇ ಮಾರ್ಕ್ಸವಾದಿಗಳು ವಿವರಿಸುತ್ತಾರೆ. ಸಾಮಾಜಿಕ ಜೀವನ, ಭೌತಿಕ ಅಗತ್ಯಗಳು ಮತ್ತು ಒತ್ತಡಗಳು ಬೇರೆ ಬೇರೆ ಪ್ರಭಾವವನ್ನು ಬೀರುತ್ತವೆ. ಸಾಮಾಜಿಕತೆ ಮತ್ತು ಬರಹದ ನಡುವೆ ಕೆಲವು ರೀತಿಯಲ್ಲಿ ಸಂಬಂಧವು ಇರಬೇಕಾಗುತ್ತದೆ ಎಂದು ಮಾರ್ಕ್ಸವಾದಿಗಳು ಈ ಕಾರಣಕ್ಕೆ ನಂಬುತ್ತಾರೆ. ಅನೇಕ ಸಂದರ್ಭದಲ್ಲಿ ನಮಗೆ ವಿವರಣೆಗಳೂ ಅಗತ್ಯವಾಗುವುದು ಈ ಕಾರಣಕ್ಕೆ. ಹಳೆಯ ರಚನೆಗಳು ಹೊಸ ರಚನೆಯನ್ನು ಮಾಡುವುದೂ ಇದೇ ದೃಷ್ಟಿಯಲ್ಲಿ. ಹಳೆಯ ಅನೇಕ ಅಂಶಗಳು ಹೊಸರಚನೆಯಲ್ಲಿ ಸೇರುತ್ತವೆ. ಮತ್ತು ಹೊಸದಾದ

ಅವಕಾಶವನ್ನು ಮಾಡುತ್ತವೆ. ಇದರಿಂದ ಹೊಸದಾದ ದಿಕ್ಪಲ್ಲಟವು ಆಗುತ್ತದೆ. ಚರಿತ್ರೆಯ ಅರಿವು ಈ ಕಾರಣಕ್ಕೆ ಬೇಕಾಗುತ್ತವೆ. ಅದು ಹಿನ್ನೆಲೆಯನ್ನು ಹೇಳುತ್ತದೆ. ಚರಿತ್ರೆಯ ಹಾಜರಾತಿಗೂ ಅದರ ಸಾರಕ್ಕೂ ಈ ಕಾರಣದಿಂದ ಸಂಬಂಧವಿದೆ. ಚರಿತ್ರೆಯೆಂದರೆ ಗತವನ್ನು ನಿರೂಪಿಸುವ ಒಂದು ಕತೆಯಲ್ಲ. ಅದರಲ್ಲಿಯೂ ತಾತ್ವಿಕತೆಯ ಅಗತ್ಯವೂ ಇರುತ್ತದೆ. ಅದೂ ಒಂದು ಸಹಯೋಗವನ್ನು ಹೇಳಬೇಕಾಗುತ್ತದೆ. ವಾಸ್ತವವಾಗಿ ಚರಿತ್ರೆಯ ಅಧ್ಯಯನದಲ್ಲಿ ನಾವು ಆಗಾಗ ಬಳಸುವ ಪದಗಳನ್ನು ಈ ದೃಷ್ಟಿಯಿಂದ ನೋಡಬೇಕಾಗುತ್ತದೆ. ಅದರಲ್ಲಿ ನಿರಂಕುಶ ಪ್ರಭುತ್ವ, ಪ್ರಜಾಸತ್ತಾತ್ಮಕ, ಆಡಳಿತಶಾಹಿ ಮುಂತಾದ ಪದಗಳು ಬರುವುದು ಬರೀ ಒಂದು ವಿವರಣೆಯನ್ನು ಮಾತ್ರವೇ ಕೊಡುವುದೂ ಇಲ್ಲ. ಅದು ಅದನ್ನು ಬೇರೆ ರೀತಿಯಲ್ಲಿಯೂ ವಿವರಿಸುತ್ತದೆ. ಅವುಗಳು ಸಮಾಜದ ರಚನೆಗಳೂ ಆಗಿವೆ. ಆದರೆ ಸಾಮಾಜಿಕ ಚರಿತ್ರೆಯಲ್ಲಿ ಸಮಾಜದ ಏಳುಬೀಳುಗಳೂ ಬಹಳ ಮುಖ್ಯವಾಗುತ್ತವೆ. ಯಾವುದನ್ನು ಸಮಾಜದ ಅಂಶಗಳು ಎಂದು ಹೇಳುತ್ತೇವೆಯೋ ಅದು ಗಾಢವಾದ ಪ್ರಭಾವವನ್ನು ಬೀರುತ್ತವೆ. ಸಾಮಾಜಿಕವಾದ ಅನೇಕ ಘಟನೆಗಳು ನಮ್ಮನ್ನು ವ್ಯಾಪಕವಾಗಿಯೇ ಆವರಿಸಿಕೊಳ್ಳುತ್ತವೆ ಆದ್ದರಿಂದಲೇ ಸಾಮಾಜಿಕ ಸತ್ಯವು ಅತ್ಯಂತ ಮುಖ್ಯವಾದ್ದೂ ಹೌದು. ನಾವು ಈಗ ನೋಡಬೇಕಾದ್ದು ವಿಧಿನಿಷೇಧಗಳು ಯಾಕೆ ಮಹತ್ವದ ಪಾತ್ರವನ್ನು ವಹಿಸುತ್ತವೆ ಎನ್ನುವುದೂ ಈ ದೃಷ್ಟಿಯಿಂದ ಅತ್ಯಂತ ಮಹತ್ವದ್ದೂ ಆಗಿದೆ. ಅದಕ್ಕೂ ಸಮಾಜದಲ್ಲಿ ಒಂದು ಪಾತ್ರವು ಇದೆ. ಅವಕ್ಕೂ ಒಂದು ಸಮಾಜದಲ್ಲಿ ಸ್ಥಾನಮಾನವು ಕಲ್ಪಿತವಾಗಿದೆ. ಸಮಾಜ ಮತ್ತು ಅದರ ಸಮಸ್ಯೆಗಳನ್ನು ಈ ದೃಷ್ಟಿಯಿಂದ ನಾವು ಬೇರೆ ದೃಷ್ಟಿಕೋನದಲ್ಲಿ ನೋಡಬೇಕಾಗುತ್ತದೆ. ಸಮಾಜ ಮತ್ತು ಅದರ ಸಂಬಂಧಗಳನ್ನು ನಾವು ಈ ದೃಷ್ಟಿಯಿಂದ ಭಾವುಕವಾಗಿ ನೋಡಬೇಕಾದ ಅಗತ್ಯವಿಲ್ಲ. ರೈತರು. ಅಧಿಕಾರ ಶಾಹಿ ಮತ್ತು ಕಾರ್ಮಿಕರು ಎನ್ನುವುದೇ ಮನುಷ್ಯನ ಸತ್ಯಗಳಲ್ಲಿ ಒಂದಾಗಿದೆ. ಆದರೆ ನಾವು ಅನೇಕರು ರೈತರು, ಕಾರ್ಮಿಕರು ಮುಂತಾದ ಸತ್ಯಗಳನ್ನು ನೋಡಲು ಹೋಗುವುದೂ ಇಲ್ಲ. ಅದನ್ನು ಗಮನಕ್ಕೆ ತರದೆ ಬೇರೆ ಯಾವುದನ್ನೋ ಹೇಳುತ್ತಾರೆ. ಅವುಗಳು ನಮ್ಮ ರಾಜಕೀಯವಾದ ಸತ್ಯಗಳೂ ಹೌದು. ಈ ರೀತಿಯ ರಾಜಕೀಯವಾದ ಪ್ರಜ್ಞೆಯು ನಮಗೆ ಅತ್ಯಂತ ಅಗತ್ಯವೂ ಆಗಿದೆ. ರಾಜಕೀಯವು ನಮಗೆ ಅನೇಕ ನಿಯಂತ್ರಣವನ್ನು ಹೇರುತ್ತದೆ. ಆದ್ದರಿಂದ ನಾವು ಅದನ್ನು ಬಿಟ್ಟು ಮಾತಾಡಲು ಬರುವುದೇ ಇಲ್ಲ. ರಾಜಕಾರಣವೇ ಅನೇಕ ಸಂದರ್ಭದಲ್ಲಿ ನಮ್ಮ ಪ್ರಜ್ಞೆಯನ್ನು ನಿಯಂತ್ರಿಸುತ್ತದೆ. ಇವುಗಳು ಸಾಂಸ್ಕೃತಿಕವಾದ ಕ್ರಿಯೆಯ ಮೇಲೆ ಪ್ರಭಾವವನ್ನು ಬೀರುತ್ತದೆ. ಈ ದೃಷ್ಟಿಯಿಂದ ಸಂಸ್ಕೃತಿ ಮತ್ತು ಅದರ

ಕ್ರಿಯೆಯು ಭಿನ್ನವಾಗುತ್ತದೆ. ಕೆಲವು ಸರ್ತಿ ಬೇರೆ ಬೇರೆ ಗುಂಪುಗಳು ಬೇರೆ ಅರ್ಥಗಳನ್ನು ಹೇಳುತ್ತವೆ. ಅವುಗಳು ಜೀವನವನ್ನು ನಿಯಂತ್ರಿಸುತ್ತವೆ. ಆದರೆ ಕೆಲವು ಸಂಗತಿಗಳು ನಿರ್ದಿಷ್ಟವಾದ ಮೌಲ್ಯವನ್ನು ಸೂಚಿಸುತ್ತವೆ. ಮತ್ತೆ ಕೆಲವು ಯಾವುದೇ ಮೌಲ್ಯವನ್ನು ಹೇಳುವುದೂ ಇಲ್ಲ. ಕೆಲವು ಸಂಗತಿಗಳು ಜಗತ್ತಿಗೆ ಅನ್ವಯವಾಗುತ್ತವೆ, ಮತ್ತು ಕೆಲವು ಸ್ಥಳೀಯ ಮಟ್ಟದಲ್ಲಿ ಮಾತ್ರವೇ ಇರುತ್ತವೆ. ಈ ಸಂಗತಿಗಳು ಲೇಖಕನ ಮೇಲೆ ಪ್ರಭಾವವನ್ನು ಬೀರುತ್ತವೆ. ವಿಶ್ವಾತ್ಮಕತೆಯು ಲೇಖಕನ ಪ್ರಜ್ಞೆಯ ಮೇಲೆ ನಿರ್ಣಾಯಕವಾದ ಪ್ರಭಾವವನ್ನು ಬೀರುತ್ತದೆ. ಮತ್ತು ಯಾವುದು ವರ್ಗವಾಗಿದೆಯೋ ಅದರ ಪ್ರಭಾವವು ಬರಹವನ್ನು ರೂಪಿಸುತ್ತದೆ. ಹಾಗೆ ನೋಡುವುದಿದ್ದರೆ ಯಾವುದು ನಮಗೆ ಮುಖ್ಯ ಮತ್ತು ಯಾವುದು ನಮಗೆ ಅಮುಖ್ಯವೆಂದು ತೀರ್ಮಾನವನ್ನು ಮಾಡಿಕೊಳ್ಳುವುದು ನಮ್ಮ ಪ್ರಜ್ಞೆಯ ಆಧಾರದ ಮೇಲೆಯೇ. ಸಾಮಾಜಿಕ ಜೀವನ ಮತ್ತು ಅದರ ಪರಿಣಾಮಗಳು ಭಿನ್ನವಾಗಿ ರೂಪು ತಳೆಯುತ್ತದೆ. ಅದರ ಹಿಂದೆ ವಿವಿಧ ಸ್ವರೂಪಗಳೂ ಇರುತ್ತವೆ. ಸಾಮಾಜಿಕ ಅಭ್ಯಾಸಗಳು ನಮ್ಮನ್ನು ನಿರ್ದೇಶಿಸುತ್ತವೆ. ನಮ್ಮ ಒಟ್ಟಾರೆಯಾದ ಸಂಗತಿಗಳನ್ನು ನಮ್ಮ ಒಟ್ಟಾದ ಜೀವನ ಮತ್ತು ಅದರ ಸಂಗತಿಗಳು ನಿರೂಪಿಸುತ್ತವೆ ಕಾಲ ಮತ್ತು ಆವಶ್ಯಕತೆಗಳೇ ಈ ದೃಷ್ಟಿಯಿಂದ ಹೆಚ್ಚು ಮುಖ್ಯವಾದ ಸಂಗತಿಯೂ ಹೌದು ಇದರ ಜೊತೆಗೆ ಸಮಾಜ ಮತ್ತು ಅದರ ರಚನೆಗಳು ನಮ್ಮ ಬರಹವನ್ನು ಹೇಳುತ್ತವೆ. ಅದರಲ್ಲಿ ವ್ಯತ್ಯಾಸಗಳೂ ಇರುತ್ತವೆ. ರಚನೆಯೇ ಅನೇಕ ಕಾರಣಗಳಿಂದ ಸಾಂಕೇತಿಕವೂ ಆಗುತ್ತದೆ. ಅವುಗಳು ನಿರ್ದಿಷ್ಟವಾದ ಸತ್ಯವನ್ನು ಮಾತ್ರವೇ ಹೇಳುತ್ತದೆ ಎಂದು ಅರ್ಥವಲ್ಲ. ಯಾಕೆಂದರೆ ಕಲಾವಿದನು ಕೆಲವನ್ನು ಆಯ್ಕೆ ಮಾಡುತ್ತಾನೆ ಮತ್ತು ಕೆಲವನ್ನು ಬದಲಿಸುತ್ತಾನೆ. ಸಂಸ್ಕೃತಿಯ ಚರ್ಚೆಗೆ ಈ ಅರ್ಥದಲ್ಲಿ ಸಾಂಕೇತಿಕತೆಯೂ ಇರುತ್ತದೆ. ನಾವು ನೋಡಬೇಕಾದ್ದು ಲೇಖಕ ಮತ್ತು ಅವನ ಮನೋಸ್ಥಿತಿಯನ್ನು ಮಾತ್ರವೇ. ಚರಿತ್ರೆಯ ಸನ್ನಿವೇಶಗಳು ನಮ್ಮನ್ನು ನಿಯಂತ್ರಿಸುತ್ತವೆ. ಮನಸ್ಸು ಮತ್ತು ನಡತೆಗೆ ಈ ದೃಷ್ಟಿಯಿಂದ ಸಂಬಂಧವೂ ಇದೆ. ಆದ್ದರಿಂದ ವ್ಯಕ್ತಿ ಮತ್ತು ಅವನ ನಡತೆಗೂ ಸಾಹಿತ್ಯಕ್ಕೂ ನೇರವಾದ ಸಂಬಂಧವೂ ಇದೆ. ಸಾಹಿತ್ಯ ಮತ್ತು ಅದರ ಚರ್ಚೆಯು ಈ ದೃಷ್ಟಿಯಿಂದ ಲೇಖಕ ಮತ್ತು ಅವನ ಮನೋಸ್ಥಿತಿಯನ್ನು ಆಧರಿಸಿಕೊಳ್ಳುವುದೂ ಅಗತ್ಯ. ಸಾಹಿತ್ಯವನ್ನು ಸಮಾಜವು ನಿರೂಪಿಸಿಕೊಳ್ಳುವುದು ಮತ್ತು ಅದರ ಅರ್ಥವನ್ನು ಹೇಳುವುದು ಅತ್ಯಂತ ಸಹಜವೂ ಆಗಿದೆ. ಸಾಹಿತ್ಯ ಮತ್ತು ಅದರ ರಚನೆಯು ಸಮಾಜದಲ್ಲಿ ಒಂದು ಮಹತ್ವದ ಪಾತ್ರವನ್ನು ವಹಿಸುತ್ತದೆ. ಲೇಖಕನ ಪ್ರಜ್ಞೆಯನ್ನು ಸಮಾಜದ ಪ್ರಜ್ಞೆಯ ಭಾಗವಾಗಿಯೂ ನೋಡಬೇಕಾಗುತ್ತದೆ. ಅಂದರೆ ಅದರಲ್ಲಿ ಲೇಖಕನಿಗೆ ಕೊಡಲಾದ

ಒಂದು ಸನ್ನಿವೇಶವೂ ಇರುತ್ತದೆ. ಮತ್ತು ಸಾಮಾಜಿಕ ರಚನೆಗಳು ಭಾಷಿಕ ರಚನೆಗಳನ್ನು ನಿಯಂತ್ರಿಸುತ್ತವೆ. ಭಾಷೆಯು ಸಮಾಜದಲ್ಲಿ ಸಂವಹನದ ಮುಖ್ಯವಾದ ಭಾಗವೂ ಆಗಿರುತ್ತದೆ. ಲೇಖಕನಿಗೂ ಭಾಷೆಯು ಸಂವಹನದ ಭಾಗವೇ ಆಗಿದೆ. ಮತ್ತು ಲೇಖಕನು ತನ್ನದೇ ಆದ ಕಾರಣವನ್ನು ಹೊಂದಿದ್ದಾನೆ. ತನ್ನ ಅಗತ್ಯವನ್ನು ಭಾಷೆಯಲ್ಲಿ ಹೇಳುತ್ತಾನೆ. ಅವನ ಆಲೋಚನೆಯು ಮಾತ್ರವೇ ಬರಹದ ಚಟುವಟಿಕೆಯಲ್ಲಿ ವ್ಯಕ್ತವಾಗುತ್ತವೆ. ಬರಹವೂ ಒಂದು ದೃಷ್ಟಿಯಲ್ಲಿ ರಚನೆಯೇ ಆಗುತ್ತದೆ. ಆ ರಚನೆಯು ಅತ್ಯಂತ ಅಗತ್ಯವೂ ಆಗುತ್ತದೆ. ಬರಹ ಮತ್ತು ಅದರ ರಚನೆಯು ಸಮಾಜ ಮತ್ತು ಅದರ ರಚನೆಯ ಭಾಗವೂ ಆಗುತ್ತದೆ. ಅದರಲ್ಲಿ ವ್ಯತ್ಯಾಸಗಳು ಇರುವುದು ಲೇಖಕ ಮತ್ತು ಅವನ ಆಲೋಚನೆಯನ್ನು ಸೂಚಿಸುವುದಕ್ಕಾಗಿಯೂ ಹೌದು. ಲೇಖಕನು ಯಾವುದನ್ನು ಆಯ್ಕೆ ಮಾಡುತ್ತಾನೆ ಅದು ಅವನ ಆಲೋಚನೆ ಮತ್ತು ಮನೋಸ್ಥಿತಿಯ ದ್ಯೋತಕವೂ ಆಗಿರುತ್ತದೆ. ಪುನರುಜ್ಜೀವನ ಕಾಲದ ಅನಂತರ ವ್ಯಕ್ತಿ ಮತ್ತು ಅವನ ವ್ಯಾಖ್ಯೆಯು ಬದಲಾಯಿತು. ವ್ಯಕ್ತಿಯು "ನಾನು" ಮತ್ತು ಸಂಸ್ಕೃತಿಯನ್ನು ನೋಡುವ ಕ್ರಮಗಳು ಬದಲಾದವು. ವ್ಯಕ್ತಿ ಮತ್ತು ಅವನ ದೇಹವನ್ನು ಗ್ರಹಿಸುವ ಚಿಂತನೆಗಳೂ ಬೇರೆಯಾದವು. ವಾಸ್ತವವವಾಗಿ ನಾನು ಎನ್ನುವುದು ಆತ್ಮರತಿಯ ಭಾಗವೂ ಹೌದು. ನಾನು ಎನ್ನುವುದು ಮೂಲಭೂತವಾಗಿ ಮತ್ತೆ ಕೆಲವು ಅಂಶಗಳನ್ನು ಹೇಳುತ್ತವೆ. ಅದು ದೇಹ ಮತ್ತು ಮನಸ್ಸಿನ ಪ್ರಶ್ನೆಯೂ ಆಗಿದೆ. ನಾನು ಎನ್ನುವ ಕಲ್ಪನೆಯು ಸಾಂಸ್ಕೃತಿಕವಾಗಿ ರಚಿತವಾಗಿರುತ್ತದೆ. ಅದು ವ್ಯಕ್ತಿಯ ಪ್ರಜ್ಞೆಯನ್ನು ಹೇಳುತ್ತದೆ. ಅದರಲ್ಲಿ ವ್ಯಕ್ತಿ ಮತ್ತು ಅವನ ನಡವಳಿಕೆಯು ಮಾತ್ರವೇ ಪ್ರಧಾನವೂ ಆಗುತ್ತದೆ. ವ್ಯಕ್ತಿ ಅವನ ಲಿಬಿಡೋ, ಅವನ ಆಲೋಚನೆ ಹಾಗೂ ಅವನ ಸ್ವ ಹಿತಾಸಕ್ತಿಯು ಕಾಣಿಸುತ್ತದೆ. ವ್ಯಕ್ತಿ ಎನ್ನುವ ಕಲ್ಪನೆಯೇ ಮಿತಿಗಳೂ ಇರುತ್ತವೆ. ವ್ಯಕ್ತಿಯ ಬಯಕೆಯನ್ನು ಸಮಾಜವು ಹತ್ತಿಕ್ಕುವುದು ನಿಜ. ವ್ಯಕ್ತಿಯು ಮುಕ್ತಾಯವಾಗುವುದು ಸಮಾಜದಲ್ಲಿ ಮಾತ್ರವೇ. ಅವನ ಸಾವು ಅವನ ಅಸ್ತಿತ್ವವನ್ನು ಮುಕ್ತಾಯ ಮಾಡುತ್ತದೆ. ಲಿಬಿಡೋ ಮತ್ತು ಬರಹಕ್ಕೆ ಕೆಲವು ರೀತಿಯ ಸಂಬಂಧವಿದೆ. ನಾನು"ಅಂದರೆ ನಿಸರ್ಗದ ಮೇಲೆ ಯಜಮಾನಿಕೆಯನ್ನು ಸಾಧಿಸುವುದೂ ಹೌದು. ಸಂವಹನ ಮತ್ತು ಭಾಷೆಯ ಮೇಲೆಯೂ ನಾನು ಎನ್ನುವ ಕಲ್ಪನೆಯು ಪ್ರಭಾವವನ್ನು ಬೀರುತ್ತದೆ. ಸಮಾಜ ಮತ್ತು ನಡವಳಿಕೆಯೂ ಪರಸ್ಪರ ಸಂಘರ್ಷವನ್ನು ಸೃಷ್ಟಿಸುತ್ತದೆ. ನಾನು ಮತ್ತು ನನ್ನ ಬರಹ ಎನ್ನುವುದು ಮೂಲಭೂತವಾಗಿ ನಿರ್ದಿಷ್ಟವಾದ ಮತ್ತು ಸ್ವಂತಿಕೆಯ ಪ್ರಶ್ನೆಯನ್ನು ಎತ್ತುತ್ತದೆ. ನಾನು ನನ್ನ ಬಯಕೆಯನ್ನು ನನ್ನ ಬರಹದಲ್ಲಿ ವ್ಯಕ್ತ ಮಾಡುತ್ತೇನೆ. ಲಿಬಿಡಿನಲ್ ಬಯಕೆಯು ಬರಹದಲ್ಲಿ ವ್ಯಕ್ತವಾಗುತ್ತವೆ.

ಸಾಮಾಜಿಕ ಜೀವನ ಮತ್ತು ನಾನು ಎನ್ನುವುದು ಬೇರೆ ಬೇರೆ ಪ್ರಯೋಗಗಳಿಗೆ ಕಾರಣವೂ ಆಗುತ್ತದೆ. ಬರೆಯುವುದು ಅಂದರೆ ನಮ್ಮನ್ನು ವ್ಯಕ್ತ ಮಾಡುವುದೂ ಅಷ್ಟೇ ಸತ್ಯ. ಆದರೆ ಬರೆಯುವುದು ವ್ಯಕ್ತಿಯನ್ನು ತೃಪ್ತಿಗೊಳಿಸುತ್ತದೆ. ಕಲ್ಪಿತ ಸಂಗತಿ ಮತ್ತು ಅದರ ಪರಿಣಾಮವನ್ನು ಈ ದೃಷ್ಟಿಯಿಂದ ನಾವು ಭಿನ್ನವಾಗಿ ಗ್ರಹಿಸಬೇಕಾಗುತ್ತದೆ. ಕಲ್ಪಿತವಾದ ಸುಖವೂ ಬರಹದಲ್ಲಿ ಕಾಣಿಸುತ್ತದೆ. ಮಾನಸಿಕವಾದ ರಚನೆಗಳು ಬರಹದ ರಚನೆಗಳಿಗೆ ಕಾರಣವೂ ಆಗುತ್ತವೆ. ಮತ್ತು ಅದರಲ್ಲಿ ನೆಮ್ಮದಿಯೂ ದೊರೆಯುತ್ತದೆ. ಮತ್ತು ಅದು ವ್ಯಕ್ತಿಯನ್ನು ನಿರ್ದಿಷ್ಟವಾಗಿ ಬಿಡುಗಡೆ ಮಾಡುತ್ತದೆ. ಸುತ್ತಲಿನ ಜಗತ್ತನ್ನು ನೋಡಿಕೊಂಡೇ ವ್ಯಕ್ತಿಯು ಬರೆಯುತ್ತಾನೆ. ಸಮಾಜ ಮತ್ತು ಅದರ ಅರಿವೂ ಅವನಿಗೆ ಹೆಚ್ಚು ಮುಖ್ಯ. ಬರಹವು ವ್ಯಕ್ತಿಯ ಆಲೋಚನೆಯ ಕ್ರಮವನ್ನು ಹೇಳುತ್ತದೆ. ಪ್ರಾಂಕ್ ಫ್ಹಾರ್ಟ್ ಸ್ಕೂಲ್ ಚರಿತ್ರೆಯನ್ನು ನೋಡುವಾಗ ಇದನ್ನೂ ಗಮನಕ್ಕೆ ತೆಗೆದುಕೊಂಡಿತ್ತು. ವ್ಯಕ್ತಿ ಮತ್ತು ಅವನ ನಡವಳಿಕೆಯು ಬರೀ ಅವನೊಬ್ಬನ್ನು ಮಾತ್ರವೇ ಸೂಚಿಸುವುದೂ ಇಲ್ಲ. ಅದು ಸಮಾಜ, ಆರ್ಥಿಕತೆ ಮುಂತಾದವುಗಳನ್ನು ಹೇಳುತ್ತವೆ. ವ್ಯಕ್ತಿಯು ಅತೃಪ್ತನಾದರೆ ಮತ್ತು ಖಿನ್ನತೆಗೆ ಒಳಗಾದರೆ ಅವನ ವ್ಯಕ್ತಿತ್ವ ಮತ್ತು ಅವನ ಸಮಾಜವೆರಡೂ ನಮ್ಮ ಗಮನಕ್ಕೆ ಬರಬೇಕಾಗುತ್ತದೆ. ಎಷ್ಟೋ ಸರ್ತಿ ವ್ಯಕ್ತಿ ಮತ್ತು ಅವನ ನಡವಳಿಕೆಯನ್ನು ಸಮಾಜವು ತಿದ್ದುತ್ತದೆ. ವ್ಯಕ್ತಿ ಮತ್ತು ಅವನ ಪ್ರಶ್ನೆಯನ್ನು ಸಮಾಜವು ನೋಡುವ ಕ್ರಮವೂ ಬೇರೆಯಾಗದೆ. ಆದ್ದರಿಂದ ಅವನ ಬರಹಕ್ಕೂ ಅವನ ನಡವಳಿಕೆಗೂ ಸಂಬಂಧವಿದೆ. ಹಾಗೆ ನೋಡುವುದಿದ್ದರೆ ವ್ಯಕ್ತಿ ಮತ್ತು ಅವನ ನಡವಳಿಕೆಯನ್ನು ಬಂಡವಾಳವಾದವು ನೋಡುವ ಕ್ರಮವು ಭಿನ್ನವಾಗುತ್ತದೆ. ಅಂದರೆ ಅದು ಕೆಲವನ್ನು ಹೇರುತ್ತದೆ. ಸಮಾಜ ಮತ್ತು ಆದರ ತಾರರಮ್ಯಗಳು ಕೂಡಾ ಬರಹವನ್ನು ನಿರ್ದೇಶಿಸುತ್ತವೆ. ತಂತ್ರಜ್ಞಾನವು ಮುಂಚೂಣಿಯಲ್ಲಿ ಇರುವ ಸಮಾಜದಲ್ಲಿ ವ್ಯಕ್ತಿ ಮತ್ತು ಅವನ ನಡವಳಿಕೆಗಳು ಒಂದು ರೀತಿಯಲ್ಲಿ ಇರುತ್ತವೆ. ಯಾವುದೇ ಸಮಾಜವು ವಿಕಾಸವಾಗುತ್ತಾ ಬಂದಂತೆ ವ್ಯಕ್ತಿಯ ನಡವಳಿಕೆಯಲ್ಲಿ ವ್ಯತ್ಯಾಸವು ಕಾಣುತ್ತದೆ. ಕ್ರಿಯೆಗಳಲ್ಲಿ ವ್ಯತ್ಯಾಸವಾಗುತ್ತದೆ. ಆದರೆ ಯಾವುದೇ ಕ್ರಿಯೆಯು ನಿರ್ದಿಷ್ಟವಾದ ಉದ್ದೇಶವನ್ನು ಹೊಂದಿರುತ್ತವೆ. ಜನರು ಮತ್ತು ಅವರ ಶಕ್ತಿಯು ಸಮಾಜದಲ್ಲಿ ಬೇರೆ ಬೇರೆ ರೀತಿಯ ನಿರ್ವಹಣೆಯನ್ನು ಮಾಡುತ್ತವೆ. ಮತ್ತು ಜನರ ಶಕ್ತಿಯೇ ಸಮಾಜದಲ್ಲಿ ಕೆಲವು ಗುಣಾತ್ಮಕವಾದ ಪರಿವರ್ತನೆಯನ್ನು ತರುತ್ತವೆ. ಯಾವುದನ್ನು ನಾವು ಲೋಕ ಗ್ರಹಿಕೆ ಎಂದು ಹೇಳುತ್ತೇವೆಯೋ ಅದು ಏಕತ್ರವೂ ಆಗಿರುತ್ತದೆ. ಅದರಲ್ಲಿ ಲೋಕ ಸಂವಾದವೂ ಇರುತ್ತದೆ. ಮತ್ತು ಅದರಲ್ಲಿ ನಿರ್ದಿಷ್ಟ ಬಗೆಯ ತತ್ವಜ್ಞಾನವೂ ಇರುತ್ತದೆ. ಆಲೋಚನೆಗಳನ್ನು ಅವುಗಳೇ

ನಿಯಂತ್ರಿಸುತ್ತವೆ. ಮತ್ತು ಅದರಲ್ಲಿ ಜೀವನ ಮತ್ತು ಅದರದೇ ಆದ ದೃಷ್ಟಿಕೋನಗಳೂ ಇರುತ್ತವೆ. ಅಂದರೆ ಅವುಗಳ ವ್ಯಕ್ತ ರೂಪವು ಒಂದು ಬಗೆಯದೂ ಹೌದು. ನಮ್ಮ ಆಲೋಚನೆ ಮತ್ತು ಅದರ ಸ್ವರೂಪವನ್ನು ಲೋಕ ದೃಷ್ಟಿಯು ಹೇಳುತ್ತದೆ. ಎದುರು ಇರುವ ವಾಸ್ತವ ಮತ್ತು ಅದರ ಗ್ರಹಿಕೆಗೆ ನಮಗೆ ಲೋಕದ ಗ್ರಹಿಕೆಯೂ ಬೇಕಾಗುತ್ತದೆ. ವಾಸ್ತವ ಮತ್ತು ವಿಶ್ವಾತ್ಮಕತೆಗಳ ನಡುವೆ ದ್ವಂದ್ವಾತ್ಮಕತೆಯೂ ಇರುತ್ತದೆ. ಆದರೆ ಯಾವಾಗ ನಾವು ಪ್ರಗತಿಪರವಾದ ಚಿಂತನೆಯನ್ನು ಹೊಂದಿರುತ್ತೇವೆಯೋ ಆಗ ನಮ್ಮ ಆಲೋಚನೆಯೂ ಕೂಡಾ ಹೆಚ್ಚು ಮಾನವೀಯವಾಗಿರುತ್ತದೆ. ಆದರೆ ನಮಗೆ ಗೊತ್ತಿರಬೇಕಾದ ಅಂಶವೆಂದರೆ ಯಾವುದನ್ನು ನಾವು ಈವತ್ತು ತತ್ವಜ್ಞಾನವೆಂದು ಹೇಳುತ್ತೇವೆಯೋ ಅದು ಮೂಲಭೂತವಾಗಿ ವಿಶ್ವಾತ್ಮಕತೆ ಮತ್ತು ಅದರ ಅಂಶಗಳನ್ನು ಹೇಳುತ್ತವೆ. ಆದರೆ ತತ್ವಜ್ಞಾನ ಮತ್ತು ಅದರ ಗ್ರಹಿಕೆಯು ನಮಗೆ ಅತ್ಯಂತ ಅಗತ್ಯವಾಗಿದೆ. ಬಾಹ್ಯ ಮತ್ತು ಅದನ್ನು ನೋಡಲು ನಾವು ಅನುಸರಿಸುವ ವಿಧಾನವೂ ಅತ್ಯಂತ ಅಗತ್ಯವಾಗಿದೆ. ಬರಹವು ನಮಗೆ ಲೋಕ ಗ್ರಹಿಕೆಗೆ ಸಹಾಯವನ್ನು ಮಾಡುತ್ತದೆ. ಅದರಲ್ಲಿ ಚರಿತ್ರೆ ಮತ್ತು ಅದರ ನಡೆಗಳೂ ಇರುತ್ತವೆ. ಸಮಾಜ ಮತ್ತು ಅದರ ಗುಂಪು ನಮಗೆ ನಿರ್ದಿಷ್ಟವಾದ ಚಹರೆಯನ್ನು ಹೇಳುತ್ತವೆ. ನಾವು ಒಂದು ತತ್ವಜ್ಞಾನದ ಒಳಗೆ ಬದುಕುವುದು ಅತ್ಯಂತ ಅನಿವಾರ್ಯವೂ ಹೌದು. ಚರಿತ್ರೆ ಮತ್ತು ಲೋಕದೃಷ್ಟಿಯು ನಮಗೆ ಅತ್ಯಂತ ಅಗತ್ಯವಾಗುತ್ತದೆ. ಆದರೆ ಅದಕ್ಕೂ ಕೆಲವು ಮಿತಿಗಳು ಇರುತ್ತವೆ ಎನ್ನುವುದನ್ನು ಮರೆಯಬಾರದು. ವಾಸ್ತವದ ಸಾಧ್ಯತೆಯು ಭಿನ್ನವಾಗುತ್ತದೆ. ಈಗಿನ ನಮ್ಮ ಸಮಾಜ ಅದರ ವರ್ತಮಾನವು ಭಿನ್ನವಾಗುತ್ತದೆ. ಫ್ರಾಯ್ಡ್ ನಡತೆ ಮತ್ತು ಅದರ ಲಿಬಿಡಿನಲ್ ಸ್ವಭಾವವು ಬರಹವನ್ನು ನಿರ್ಧರಿಸುತ್ತದೆ ಎನ್ನುತ್ತಾನೆ. ಅದು ಸಾಂಸ್ಕೃತಿಕ ಸೃಜನಶೀಲತೆಗೆ ಕಾರಣವೂ ಆಗುತ್ತದೆ. ಅದು ಪ್ರಜ್ಞೆಗೆ ಸಂಬಂಧಪಟ್ಟದ್ದು. ಜೀವನ ಮತ್ತು ಅದರ ಸಾಧ್ಯತೆಯನ್ನು ನಿರ್ಧರಿಸುವುದು ನಿಜವಾಗಿಯೂ ಪ್ರಜ್ಞೆಯೇ. ಅನೇಕ ರಚನೆಗಳು ಅನೇಕ ವಸ್ತುಗಳನ್ನು ಉತ್ಪಾದಿಸುತ್ತವೆ ಎಂದು ಗ್ರೇಮಾಸ್ ಹೇಳುತ್ತಾನೆ. ಭಾಷೆ ಮತ್ತು ಅದರ ರಚನೆಗಳು, ಚರಿತ್ರೆ ಮತ್ತು ಅದರ ರಚನೆಗಳು, ನಡತೆ ಮತ್ತು ಅದರ ಸ್ವರೂಪಗಳು ನಿರ್ದಿಷ್ಟವಾಗಿಯೇ ನಿರ್ಧಾರವಾಗುತ್ತವೆ. ಭಾವನೆಗಳು ಮತ್ತು ರಚನೆಗಳು ಜೊತೆಗೆ ಇರುತ್ತವೆ. ಅಲ್ತೂಸರ್ ಸಮಾಜ ಮತ್ತು ಅದರ ರಚನೆಯನ್ನು ಅದರ ಉತ್ಪಾದನೆಯ ಹಿನ್ನೆಲೆಯಲ್ಲಿ ನೋಡುತ್ತಾನೆ. ಮನುಷ್ಯ ಮತ್ತು ಅವನ ವರ್ತನೆಯೂ ಒಂದು ದೃಷ್ಟಿಯಲ್ಲಿ ರಚನೆಯೇ ಆಗಿದೆ. ಅದು ಮನಸ್ಸನ್ನು ಹೇಳುತ್ತದೆ. ಮಾರ್ಕ್ಸ್‌ವಾದವು ಈ ದೃಷ್ಟಿಯಲ್ಲಿ ಅತ್ಯಂತ ಮಹತ್ವದ ಅಂಶಗಳನ್ನು ನಿರೂಪಿಸುತ್ತದೆ. ಮನುಷ್ಯ ಮತ್ತು ಅವನ ಸೃಜನಶೀಲತೆಯನ್ನು

ಈ ದೃಷ್ಟಿಯಲ್ಲಿ ನಾವು ಸಮಾಜ ಮತ್ತು ವ್ಯಕ್ತಿ ಸಂಬಂಧದ ವಿವರದಲ್ಲಿಯೇ ನೋಡಬೇಕಾಗುತ್ತದೆ. ಮನುಷ್ಯನಿಗೆ ಅವನು ಹೇಳುವ ಸಂಗತಿಗಳಿಗೆ ದ್ವಂದ್ವಾತ್ಮಕವಾದ ಸಂಬಂಧವೂ ಇದೆ. ಯಾವುದೇ ರೀತಿಯಲ್ಲಿ ನಾವು ಹೇಳಿದರೂ ನಮಗೂ ನಮ್ಮ ಬರಹಕ್ಕೂ ಸಮಾಜಕ್ಕೂ ಒಂದು ನಂಟು ಇದ್ದೇ ಇರುತ್ತದೆ. ವಾಸ್ತವವಾಗಿ ಅತ್ಯಂತ ಹೆಚ್ಚು ಚರ್ಚೆಗೆ ಒಳಗಾದ, ಗೋಲ್ಡ್‌ಮನ್ ಪ್ರತಿಪಾದಿಸಿದ ಜೆನೆಟಿಕ್ ಸ್ಟ್ರಕ್ಚುರಲಿಸಂ ಸಮಾಜವನ್ನು ಕೇಂದ್ರ ಮಾಡಿಕೊಂಡಿದೆ. ಅದು ಸಾಮಾಜಿಕ ಚಿಂತನೆ ಮತ್ತು ಸಾಹಿತ್ಯವನ್ನು ಹೇಳುತ್ತದೆ. ಸಾಮಾಜಿಕ ಜೀವನ ಮತ್ತು ಸಾಹಿತ್ಯವನ್ನು ಅದು ದ್ವಂದ್ವಾತ್ಮಕವಾಗಿಯೂ ಗ್ರಹಿಸುತ್ತದೆ. ವಾಸ್ತವವಾಗಿ ಯಾವುದೇ ರಚನೆಯು ನಿರ್ದಿಷ್ಟವಾಗಿ ಕೆಲವು ಸಂಗತಿಗಳನ್ನು ಹೇಳುತ್ತದೆ. ಅದು ಸಮಾಜವನ್ನು ಗ್ರಹಿಸುವ ಮತ್ತು ಅದರ ಅಗತ್ಯವನ್ನು ನಿರೂಪಿಸುವ ಕ್ರಮವೂ ಹೌದು. ಅದರಲ್ಲಿ ಇತ್ಯಾತ್ಮಕವಾದ ಅಂಶಗಳು ಇದ್ದೇ ಇರುತ್ತವೆ. ಅಂದರೆ ವಾಸ್ತವವಾದ ರಚನೆ ಮತ್ತು ಅದರ ಚಹರೆಗಳು ವಿಶಿಷ್ಟವೂ ಹೌದು. ಸಾಮಾಜಿಕ ಜೀವನ ಮತ್ತು ಅದರ ಅಗತ್ಯಕ್ಕೆ ತಕ್ಕಂತೆ ಬೇರೆ ಬೇರೆ ರೀತಿಯ ರಚನೆಗಳು ಇರುತ್ತವೆ. ಅದನ್ನು ನಾವು ಕಟ್ಟುತ್ತೇವೆ ಮತ್ತು ಬೇಕಾದ ಅದನ್ನು ಒಡೆಯುತ್ತೇವೆ. ಅದು ಅಗತ್ಯವಾಗುತ್ತದೆ. ಜೀವನದ ಕೆಲವು ಅಂಶಗಳನ್ನು ಅದು ಹೇಳುತ್ತದೆ. ಹೇಗೆ ಬೇರೆ ಬೇರೆ ಸನ್ನಿವೇಶಗಳು ನಮ್ಮನ್ನು ನಿಯಂತ್ರಿಸುತ್ತದೆ. ಮತ್ತು ಹೇಗೆ ಬೇರೆ ಬೇರೆ ಸನ್ನಿವೇಶಗಳು ನಮ್ಮ ವಿವಿಧ ರಚನೆಗೆ ಕಾರಣವಾಗುತ್ತವೆ ಎನ್ನುವುದು ಮೂಲಭೂತವಾಗಿ ತಾತ್ವಿಕ ಪ್ರಶ್ನೆಗಳೇ ಆಗುತ್ತವೆ. ಬೇರೆ ಬೇರೆ ಸನ್ನಿವೇಶಗಳು ನಮಗೆ ಬೇರೆ ಅನುಭವಬ ಅನುಭವನ್ನು ಕೊಡುವಾಗಲೂ ಅದು ಅರ್ಧ ರಚನೆಯು ಆಗಿರುವುದೇ ಇಲ್ಲ. ಅರ್ಧ ರಚನೆ ಅಥವಾ ಅರ್ಧ ಸಾಲು, ಅಥವಾ ಒಂದು ಅಕ್ಷರವು ಯಾವುದೇ ಸಂಗತಿಯನ್ನು ಹೇಳಲಾರದು. ಒಂದು ಸಣ್ಣ ಘಟಕ ಯಾವುದನ್ನು ನಿರೂಪಿಸುವುದೂ ಇಲ್ಲ. ಇಲ್ಲಿ ನಮಗೆ ಅನೇಕ ಪ್ರಶ್ನೆಗಳು ಎದುರಾಗುತ್ತವೆ. ಘಟಕಗಳು ಸ್ವಯಂಸಂಪೂರ್ಣವಾಗಿಯೂ ಇರುವುದೂ ಇಲ್ಲ. ಕಾಲ ಮತ್ತು ಸನ್ನಿವೇಶಗಳು ಹಾಗೂ ತಾತ್ವಿಕತೆಗಳು ನಮಗೆ ರಚನೆಯನ್ನು ಕಟ್ಟಲು ಸಹಾಯವನ್ನು ಮಾಡುತ್ತವೆ. ರಚನೆ ಮತ್ತು ಅದರ ರೂಪವು ವಂಶವಾಹಿಯನ್ನು ಹೇಳುತ್ತವೆ. ಅಂದರೆ ಹಿಂದಿನ ರಚನೆ ಮತ್ತು ಅದರ ಪರಂಪರೆಯು ಮುಂದುವರಿಯುತ್ತವೆ. ಅದಕ್ಕೆ ಚಾರಿತ್ರಿಕತೆಯೂ ಇರುತ್ತದೆ. ಒಡೆಯುವುದು ಮತ್ತು ಪುನರ್ರಚಿಸುವುದು ನಮಗೆ ಅತ್ಯಂತ ಅಗತ್ಯ. ಹಾಗೆ ನೋಡುವುದಿದ್ದರೆ ಸಮಾಜ ಮತ್ತು ಅದರ ರಚನೆಗಳು ನಿಸರ್ಗವನ್ನು ವಿಶಿಷ್ಟವಾಗಿಯೇ ಹೇಳುತ್ತದೆ. ನಮ್ಮ ನಡತೆ ಮತ್ತು ಸಾಮಾಜಿಕ ನಡವಳಿಕೆಗಳು ಮೂಲಭೂತವಾಗಿ ಕೆಲವು ಸಂಗತಿಗಳನ್ನು ಹೇಳುತ್ತವೆ. ಹೇಗೆ ನಮ್ಮ ಸಮಾಜವು

ಬದಲಾಗುತ್ತವೆ ಮತ್ತು ಯಾವ ರೀತಿಯಲ್ಲಿ ಬದಲಾಗುತ್ತದೆ ಮತ್ತು ಅದರ ಕಾರಣವು ಯಾವುದು ಎನ್ನುವುದೂ ಅಷ್ಟೇ ಮುಖ್ಯ. ಸಾಹಿತ್ಯ ಮತ್ತು ಅದರ ಸ್ವರೂಪವು ಹೇಗೆ ಬದಲಾಗುತ್ತದೆ ಮತ್ತು ಅದರ ಕಾರಣವು ಯಾವುದು; ಯಾಕೆ ಬದಲಾಗುತ್ತದೆ ಎಂದು ಹೇಳಲು ನಮಗೆ ಜೋತಿಷ್ಯದ ಅಗತ್ಯವಿಲ್ಲ. ಅದರಲ್ಲಿ ನಾವು ಮತ್ತೆ ಬೇರೆ ಅಂಶಗಳನ್ನು ನೋಡಬೇಕಾಗುತ್ತದೆ. ಅದು ತರ್ಕ ರಹಿತವಲ್ಲ. ಅದರಲ್ಲಿ ಭಿನ್ನತೆಯು ಇರುತ್ತದೆ. ಹಾಗೂ ಅದರಲ್ಲಿ ನಿರ್ದಿಷ್ಟವಾದ ಆಶಯವು ಇರುತ್ತದೆ. ಲುಕಾಕ್ಸ್ ಸಾಹಿತ್ಯ ಮತ್ತು ಅದರ ಸ್ವರೂಪವು ಬದಲಾಗುವುದು ಸಾಮಾಜಿಕ ಅಗತ್ಯವೆಂದು ಹೇಳುತ್ತಾನೆ. ಆಶಯ ಮತ್ತು ಅದರ ಅರ್ಥವು ಬದಲಾಗುವುದು ಕೂಡಾ ಸಮಾಜಕ್ಕೆ ಲಗತ್ತಾಗಿಯೇ ಇರುತ್ತದೆ. ಆಶಯ ಮತ್ತು ಅದರ ಅಗತ್ಯಗಳು ಬೇರೆ ಬೇರೆ ಕಾರಣದಿಂದ ಅತ್ಯಂತ ಮಹತ್ವದ್ದೂ ಆಗುತ್ತದೆ. ಮಾನಸಿಕವಾದ ರಚನೆ ಮತ್ತು ಅದರ ಅಗತ್ಯಗಳು ನಮಗೆ ಈ ದೃಷ್ಟಿಯಿಂದ ಅತ್ಯಂತ ಮಹತ್ವದ್ದೂ ಹೌದು. ಅಸ್ತಿತ್ವ ಮತ್ತು ಅದರ ಅಗತ್ಯಗಳೂ ಕೂಡಾ ಈ ದೃಷ್ಟಿಯಲ್ಲಿ ಭಿನ್ನವಾದ ಅರ್ಥವನ್ನು ಹೇಳುತ್ತವೆ. ಮಾನಸಿಕ ರಚನೆ ಮತ್ತು ಅದರ ಅರ್ಥವು ಈ ದೃಷ್ಟಿಯಿಂದ ಭಿನ್ನವಾದ ಒಂದು ಸಂಗತಿಯೂ ಆಗುತ್ತದೆ. ಚರಿತ್ರೆ ಮತ್ತು ಅದರ ವಾಸ್ತವ ನಮಗೆ ಈ ದೃಷ್ಟಿಯಲ್ಲಿ ಮಹತ್ವದ ಕೆಲವು ಸೂಚನೆಗಳನ್ನು ಕೊಡುತ್ತವೆ. ಮತ್ತು ಅದರಲ್ಲಿ ನಮಗೆ ಅನೇಕ ಅಂಶಗಳೂ ಇರುತ್ತವೆ. ಲೇಖಕನು ಅನೇಕವನ್ನು ತನ್ನ ಕೃತಿಯಲ್ಲಿ ಹೇಳುತ್ತಾನೆ. ಮತ್ತು ಅನೇಕವನ್ನು ಬಿಡುತ್ತಾನೆ. ಅದು ಅವನ ಆಯ್ಕೆಯೂ ಆಗಿರುತ್ತದೆ. ಯಾವುದನ್ನು ಈವತ್ತು ಒಬ್ಬ ಲೇಖಕ ನೋಡುತ್ತಾನೆ ಮತ್ತು ಯಾವುದನ್ನು ನಿರಾಕರಿಸುತ್ತಾನೆ ಎನ್ನುವುದು ಮುಖ್ಯವಾದ ಪ್ರಶ್ನೆಯೂ ಆಗುತ್ತದೆ. ಸಾಹಿತ್ಯ ಮತ್ತು ಅದರ ಗುಣಮಟ್ಟವು ಬೇರೆ ಬೇರೆಯಾಗುವುದಕ್ಕೆ ಬೇರೆ ಬೇರೆ ಕಾರಣವೂ ಇರುತ್ತದೆ. ಅಂದರೆ ಸಾಹಿತ್ಯವನ್ನು ಮತ್ತು ಅದರ ಗುಣ ಮಟ್ಟವನ್ನು; ಆಯಾ ಸಮಾಜವು ನಿರ್ಧಾರ ಮಾಡುತ್ತದೆ. ಒತ್ತಡ ಮತ್ತು ಅದರ ಅಭಿವ್ಯಕ್ತಿಯೂ ಈ ದೃಷ್ಟಿಯಿಂದ ಅತ್ಯಂತ ಮಹತ್ವದ್ದೂ ಆಗುತ್ತದೆ. ಲೇಖಕನು ಆಯ್ಕೆ ಮಾಡುವ ಪದಗಳು ಮತ್ತು ಮನಸ್ಸಿನ ಒತ್ತಡಗಳು ಕೆಲವು ಸೂಚನೆಗಳನ್ನು ಕೊಡುತ್ತವೆ. ಕೆಲವು ಸಶೇಸಗಳು ನಮಗೆ ಈ ದೃಷ್ಟಿಯಲ್ಲಿ ಯಾವುದೇ ಮೇಲುನೋಟದ ತೀರ್ಮಾನವನ್ನು ಕೊಡಲು ಬಿಡುವುದೂ ಇಲ್ಲ. ಅರಿವು ಇಲ್ಲದೆಯೇ ಅನೇಕ ಸೂಚನೆಗಳು ಬರುತ್ತದೆ. ಅದು ನಮ್ಮ ಸುಪ್ತವಾದ ಪ್ರಜ್ಞೆಯಲ್ಲಿ ಇರುತ್ತದೆ. ವಾಸ್ತವವಾಗಿ ಈವತ್ತು ನಮ್ಮ ಪ್ರಶ್ನೆಗಳಲ್ಲಿ ವಿವಿಧತೆಯು ಇದೆ. ಆದರೆ ಇದು ಯಾವುದನ್ನು ಸೂಚಿಸುತ್ತದೆ ಎನ್ನುವುದು ಬಹಳ ಮುಖ್ಯ. ಪ್ರಜ್ಞೆ ಮತ್ತು ಅದರ ಸ್ವರೂಪವನ್ನು ಈವತ್ತು ನಾವು ನಮ್ಮ ಸಮಕಾಲೀನವಾದ ಸನ್ನಿವೇಶದಲ್ಲಿಯೇ ನೋಡಬೇಕಾಗುತ್ತದೆ.

ಬರಹಕ್ಕೆ ಒಂದು ನಿಶ್ಚಿತವಾದ ಗುಣವಿದೆ. ಅದು ಆಲೋಚನೆ ಮತ್ತು ಅದರ ಸಂಕೇತವನ್ನು ಹೇಳುತ್ತದೆ. ಮತ್ತು ಯಾವುದು ಆಲೋಚನೆಯಾಗಿದೆಯೋ ಅದರ ಸ್ವರೂಪವನ್ನು ಬರಹವು ಹೇಳುತ್ತದೆ. ಅದು ಅಗತ್ಯವಾದ ಪ್ರಕ್ರಿಯೆಯೂ ಹೌದು. ಆಲೋಚನೆ ಮತ್ತು ಅದರ ಕ್ರಿಯಾಶೀಲತೆಯು ಅತ್ಯಂತ ಅಗತ್ಯವಾದ ಒಂದು ಪ್ರಕ್ರಿಯೆಯೂ ಆಗಿರುತ್ತದೆ. ಅದರ ಅಗತ್ಯಗಳೂ ಕೂಡಾ ಭಿನ್ನವಾದ್ದು ಸತ್ಯ. ಆಲೋಚನೆಯು ವ್ಯಕ್ತಿಯದೂ ನಿಜ. ಆದರೆ ಇಲ್ಲಿ ಅತ್ಯಂತ ಸೂಕ್ಷ್ಮವಾಗಿ ಗಮನಿಸಬೇಕಾದ ಕೆಲವು ಅಂಶಗಳೂ ಇವೆ. ಸಾಹಿತ್ಯವೇ ಆಗಲೀ ಇತರ ಸಂಗತಿಗಳೇ ಆಗಲಿ, ಅವುಗಳು ಮೂಲರೂಪವಾಗಿ ಪ್ರಾಯೋಗಿಕ ಮತ್ತು ನೈತಿಕವಾದ ಅನೇಕ ತಿಳುವಳಿಕೆಯನ್ನು ಹೇಳುತ್ತದೆ, ಯಾವುದು ನಮ್ಮನ್ನು ನಿರ್ದಿಷ್ಟವಾಗಿ ರೂಪುಗೊಳಿಸುತ್ತದೆ ಮತ್ತು ಅದು ಯಾಕೆ ಹಾಗೆ ರೂಪಿಸುತ್ತದೆ ಎಂದು ತಿಳಿಯಬೇಕಾಗುತ್ತದೆ. ಜೀವನ ಮತ್ತು ಮನಸ್ಸಿಗೆ ಸಂಬಂಧವೂ ಇದೆ. ಅಂದರೆ ಲೇಖಕನ ಜೀವನವನ್ನು ತಿಳಿಯದೆ ನಾವು ಅನೇಕವನ್ನು ಅರ್ಥಮಾಡಿಕೊಳ್ಳಲಾರೆವು. ನಮ್ಮ ಜೀವನದಲ್ಲಿ ಯಾವುದು ಹೆಚ್ಚು ಪ್ರಭಾವಶಾಲಿಯೂ ಆಗಿದೆ ಎಂದರೆ ಹೇಳುವುದು ಅತ್ಯಂತ ಕಷ್ಟವೂ ಹೌದು. ವ್ಯಕ್ತಿಯನ್ನು ಯಾವುದು ಬರೆಯುವಂತೆ ಮಾಡಿದೆ ಮತ್ತು ಅವನು ಯಾಕೆ ಹಾಗೆ ಬರೆಯುತ್ತಾನೆ ಎನ್ನುವುದನ್ನು ಕೇಳಿದರೆ ಅದನ್ನು ವಿವರಿಸುವುದು ಅತ್ಯಂತ ಕಷ್ಟವೂ ಆಗಿದೆ. ಅಂದರೆ ಬರಹವು ಮನಸ್ಸನ್ನು ಹೇಳುತ್ತದೆ. ಮತ್ತು ಅದರಲ್ಲಿ ಜೀವನದ ಅನೇಕ ಸಂಗತಿಗಳೂ ಇರುತ್ತವೆ. ವ್ಯಕ್ತಿ ಮತ್ತು ಅವನ ಮನೋಸ್ಥಿತಿಯು ಸಂಕೀರ್ಣವಾದ್ದು. ಮನಸ್ಸು ಮತ್ತು ಅದರ ಪರಿಣಾಮ ಹಾಗೂ ಅದರ ಕಾರ್ಯ ವ್ಯವಸ್ಥೆಯು ಸುಲಭವಾದ ಒಂದು ಪ್ರಕ್ರಿಯೆಯು ಅಲ್ಲ. ಓದುವುದು ಅಂದರೆ ಈ ದೃಷ್ಟಿಯಲ್ಲಿ ಬರೀ ಓದುವುದು ಮಾತ್ರವೇ ಅಲ್ಲ. ಅದು ಒಂದು ಮನೋಸ್ಥಿತಿಯ ಜತೆಗೆ ಅನುಸಂಧಾನವನ್ನು ಮಾಡುವ ಕ್ರಮವೂ ಆಗಿದೆ. ಅದರಲ್ಲಿ ವ್ಯತ್ಯಾಸವಿದೆ. ಸಂಘರ್ಷವಿದೆ. ಅನುಸಂಧಾನವೂ ಇದೆ. ಓದುವುದು ಈ ಅರ್ಥದಲ್ಲಿ ಬರೀ ಅಕ್ಷರದ ಜೊತೆಗೆ ನಾವು ನಡೆಸುವ ಯಾಂತ್ರಿಕವಾದ ಒಂದು ಸಂಗತಿಯಲ್ಲ. ಬರಹ ಮತ್ತು ಅದರ ಸಂಕೇತಗಳನ್ನು ನಾವು ಈ ದೃಷ್ಟಿಯಿಂದ ಬರೀ ವ್ಯವಸ್ಥೆ ಎಂದು ಭಾವಿಸದೆ ಅದನ್ನು ನಾವು ಈಗ ನಮ್ಮ ಸಾಂಕೇತಿಕವಾದ ಒಂದು ಜೀವನದ ಬಹಳ ಮುಖ್ಯವಾದ ಒಂದು ಚಟುವಟಿಕೆಯೆಂದು ಭಾವಿಸಬೇಕಾಗುತ್ತದೆ. ಬರಹವನ್ನು ನಾವು ಮನಸ್ಸು ಮತ್ತು ಅದರ ಪ್ರಕ್ರಿಯೆ ಎಂದೂ ಭಾವಿಸಬೇಕಾಗುತ್ತದೆ. ಅದು ಸಮಾಜದಲ್ಲಿ ಅತ್ಯಂತ ಮಹತ್ವದ ಪಾತ್ರವನ್ನು ವಹಿಸುತ್ತದೆ. ಮನುಷ್ಯನು ಅದನ್ನು ಉತ್ಪಾದಿಸುತ್ತಾನೆ. ಅವನಿಗೆ ಅದು ಅತ್ಯಂತ ಮುಖ್ಯವಾದ ಪ್ರಕ್ರಿಯೆಯೂ ಆಗಿದೆ. ಬರಹವನ್ನು

ಓದುವುದು ಅಂದರೆ ಅದು ವ್ಯಕ್ತಿ ಮತ್ತು ಅವನ ಚಟುವಟಿಕೆಯನ್ನು ಅರ್ಥಮಾಡಿಕೊಳ್ಳುವ ಒಂದು ಕೆಲಸವೇ ಆಗಿದೆ. ವ್ಯಕ್ತಿ, ಮನೋಸ್ಥಿತಿ, ಚರಿತ್ರೆ, ಸಮಾಜಗಳ ನಡುವೆ ಒಂದು ನಿರ್ಣಾಯಕವಾದ ಸಂಬಂಧವೂ ಇದೆ. ಬಯಕೆಯು ಕೆಲವನ್ನು ಉತ್ಪಾದಿಸುತ್ತದೆ. ಮತ್ತು ಅದಕ್ಕೆ ಕೆಲವು ಕಾರಣಗಳೂ ಇರುತ್ತವೆ. ಮನುಷ್ಯ ಮತ್ತು ಅವನ ಗುಣವು ಅನೇಕ ಸಂದರ್ಭದಲ್ಲಿ ಕ್ರಿಯಾಶೀಲವೂ ಅಗಿರುತ್ತದೆ. ಮನುಷ್ಯ ಮತ್ತು ಅವನ ಗುಣ ಸ್ವಭಾವಗಳು ಈ ಕಾರಣದಿಂದ ಚಾರಿತ್ರಿಕವಾಗಿಯೂ ಕಟ್ಟಲ್ಪಟ್ಟಿರುತ್ತವೆ. ಮತ್ತು ಯಾವುದನ್ನು ಸಾಹಿತ್ಯ ಮತ್ತು ಅದರ ಸಂಯೋಜನೆ ಎಂದು ಹೇಳುತ್ತೇವೆಯೋ ಅದು ಕೂಡಾ ಬೇರೆ ಬೇರೆ ವಿಧವಾದ ಚಹರೆಯನ್ನು ಪಡೆದುಕೊಂಡಿರುತ್ತವೆ. ಖಿನ್ನತೆ ಮತ್ತು ನೋವುಗಳೂ ಮನುಷ್ಯನನ್ನು ಬರೆಯುವಂತೆ ಪ್ರೇರಣೆಯನ್ನು ನೀಡುತ್ತದೆ. ಅದು ಅವನಿಗೆ ಒಂದು ಬಿಡುಗಡೆಯೂ ಆಗಿದೆ. ಮನುಷ್ಯನು ಯಾವ ಪರಿಸರದಲ್ಲಿ ಬದುಕುತ್ತಾನೆಯೋ ಅದು ಕೂಡಾ ಪ್ರಭಾವಶಾಲಿಯಾಗಿದೆ. ಪರಿಸರದ ರಚನೆಯು ನಮಗೆ ಬೇಕಾದ ಅನೇಕವನ್ನು ಬರೆಯಲಿಕ್ಕೆ ಅವಕಾಶವನ್ನು ಕೊಡುತ್ತದೆ. ಹಾಗೆಯೇ ಅದರಲ್ಲಿ ಪಥ್ಯ ಮತ್ತು ಸಾಮಾಜಿಕ ಸತ್ಯಗಳ ಪ್ರಶ್ನೆಯೂ ಬರುತ್ತದೆ. ಸಾಮಾಜಿಕ ಸನ್ನಿವೇಶವನ್ನು ನೋಡಿಕೊಂಡು ಲೇಖಕನು ಬರೆಯುತ್ತಾನೆ. ಸನ್ನಿವೇಶವೆಂದರೆ ಅದು ಸಾಮಾಜಿಕ ಸತ್ಯಗಳ ಪ್ರಶ್ನೆ. ಅದರಲ್ಲಿ ಕಲ್ಪಿತವಾದುದು ಇರಬಹುದು ಆದರೆ ಅದು ಅಷ್ಟು ಮಾತ್ರವೇ ಆಗಿರುವುದೂ ಇಲ್ಲ. ಅದರಲ್ಲಿ ಭಿನ್ನವಾದ ಅನೇಕ ಸಮಸ್ಯೆಗಳು ಸೇರಿಕೊಂಡಿರುತ್ತವೆ. ನಾವು ನಮ್ಮ ಪರಿಸರ ಮತ್ತು ಅದರ ರಚನೆಗಳ ಮೂಲಕವೇ ಅನೇಕವನ್ನು ಗ್ರಹಿಸುತ್ತೇವೆ. ಅದು ನಮಗೆ ಅನೇಕವನ್ನು ಹೇಳುತ್ತದೆ. ವಾಸ್ತವವಾಗಿ ಕಾರಂತರ ಕಾದಂಬರಿಗಳು ಮತ್ತು ಅದರ ನಿರೂಪಣೆಗಳಲ್ಲಿ ಎದ್ದು ಕಾಣಿಸುವ ಮುಖ್ಯವಾದ ಪ್ರಶ್ನೆಯೂ ಇದುವೇ ಆಗಿದೆ. ಅವರ ಪರಿಸರದಲ್ಲಿ ಕಾಣದೇ ಇದ್ದುದನ್ನು ಅವರು ವಿವರಿಸಿಲ್ಲ. ಅದರಲ್ಲಿ ಅವರಿಗೆ ಯಾವುದು ಮುಖ್ಯವೆಂದು ಅನಿಸಿತೋ ಅದನ್ನು ಮಾತ್ರವೇ ಅವರು ಬರೆದರು. ಲೇಖಕನು ಒಂದು ಸನ್ನಿವೇಶ ಮತ್ತು ಅದರ ಸ್ವರೂಪವನ್ನು ನೋಡಿಕೊಂಡೇ ಬರೆಯುತ್ತಾನೆ. ಮತ್ತು ಅವನಿಗೆ ಅದು ಮುಖ್ಯವಾಗುತ್ತದೆ. ಆಯಾ ರಚನೆಯ ಜೊತೆಗೆ ಲೇಖಕನು ಯಾವ ರೀತಿಯ ಸಂಬಂಧವನ್ನು ಇಟ್ಟುಕೊಂಡಿದ್ದಾನೆ ಎನ್ನುವುದನ್ನು ನೋಡಿಕೊಂಡೇ ನಾವು ಕೆಲವು ನಿರ್ಧಾರಕ್ಕೂ ಬರಬಹುದು. ಆದರೆ ಕಾರಂತರ ಕಾದಂಬರಿಯನ್ನು ಓದಿದರೆ ಅದರಲ್ಲಿ ಮತ್ತೆ ಬೇರೆ ಅಂಶಗಳೂ ನಮಗೆ ಕಾಣಿಸುತ್ತದೆ. ಅದು ಅವರು ಆಯಾ ರಚನೆಯಿಂದ ಯಾವುದನ್ನು ಆಯ್ಕೆ ಮಾಡಿಕೊಂಡಿದ್ದಾರೆಯೋ ಅದು ಅವರ ವಿವರಣೆಯನ್ನು ಹೇಳುತ್ತದೆ. ಮತ್ತು ಅದರ ಕುರಿತಾದ ಅವರ

ಆನ್ವಯಿಕತೆಯನ್ನೂ ಅದು ನಿರ್ಧರಿಸುತ್ತದೆ. ಅವರ ಆಲೋಚನೆಗಳು ಅಂತ ಯಾವುದು ಇದೆಯೋ ಅದನ್ನು ಅವರು ಅವರ ಕಾದಂಬರಿಯಲ್ಲಿ ಹೇಳಿದರು. ಮತ್ತು ಅವರು ಬರೆದುದು ಒಂದು ಕಾಲದ ನಿರ್ದಿಷ್ಟವಾದ ಸಾಮಾಜಿಕ ಜೀವನ ಮತ್ತು ಅದರ ಅರ್ಥವನ್ನು ಮಾತ್ರವೇ. 'ಮೈಮನಗಳ ಸುಳಿಯಲ್ಲಿ' ಕಾದಂಬರಿಯ ಮಂಜುಳೆಗೆ ಒಂದು ನಿರ್ದಿಷ್ಟವಾದ ಮಾದರಿಯೂ ಇದೆ. ಅದು ಅವಳ ಹೆಣ್ತನವನ್ನು ಹೇಳುತ್ತದೆ. ಅವಳ ಬಯಕೆಯನ್ನು ಪ್ರಸ್ತುತ ಪಡಿಸುತ್ತದೆ. ಹೆಣ್ಣಾಗಿ ಅವಳು ಯಾವುದನ್ನು ಬಯಸುತ್ತಾಳೆ ಮತ್ತು ಅದನ್ನು ಅವಳು ಹೇಗೆ ಭಾವಿಸಿಕೊಳ್ಳುತ್ತಾಳೆ ಎನ್ನುವುದನ್ನು ಕಾರಂತರು ಅದರಲ್ಲಿ ನಿರೂಪಿಸುತ್ತಾರೆ. ವಾಸ್ತವವಾಗಿ ಇಡೀ ಕಾದಂಬರಿಯು ಅಂತಿಮವಾಗಿ ಹೇಳುವುದು ಹೆಣ್ಣೊಬ್ಬಳ ಅಂತರಂಗವನ್ನು ಮಾತ್ರವೇ ಅಲ್ಲ, ಅದು ಮನಸ್ಸನ್ನು ಹೇಳುತ್ತದೆ. ಅದರಲ್ಲಿ ಸತ್ಯವೂ ಇದೆ. ಇದನ್ನು ನಾವು ಮನೋವೈಜ್ಞಾನಿಕ ಕ್ರಮದಲ್ಲಿ ನೋಡುವುದೂ ಸಾಧ್ಯ. ಮತ್ತು ಇದನ್ನು ಗ್ರಹಿಸುವಾಗ ನಾವು ಮನೋವಿಜ್ಞಾನವನ್ನು ಮಾತ್ರವೇ ಗ್ರಹಿಸಬೇಕೆಂದು ಅರ್ಥವೂ ಅಲ್ಲ. ಹಾಗೆ ನೋಡುವುದಿದ್ದರೆ ಸಾಂಪ್ರದಾಯಿಕ ವಿಮರ್ಶಕರು ಸಾಹಿತ್ಯವನ್ನು ನೋಡುವುದು ಮತ್ತು ಗ್ರಹಿಸುವುದು ಕೇವಲ ಒಂದು ಪಾತ್ರವಾಗಿ ಮಾತ್ರವೇ. ಆದರೆ ಮನೋವೈಜ್ಞಾನಿಕ ವಿಮರ್ಶೆಯು ಸುಪ್ತಪ್ರಜ್ಞೆ ಮತ್ತು ಅದರ ಅಭಿವ್ಯಕ್ತಿಯನ್ನು ಗ್ರಹಿಸುತ್ತದೆ. ಆದರೆ ಇದರಲ್ಲಿ ನಾವು ಬಯಕೆ ಮತ್ತು ಅಭಿವ್ಯಕ್ತಿಯನ್ನು ನೋಡುವಾಗ ಬರೀ ಅಭಿವ್ಯಕ್ತಿಯನ್ನು ಮಾತ್ರವೇ ಗ್ರಹಿಸಿದರೆ ಸಾಕಾಗುವುದೂ ಇಲ್ಲ. ಈಡಿಪಸ್ ನಾಟಕದಲ್ಲಿ ಬರುವ ಅವನ ಪಾತ್ರವನ್ನು ಗ್ರಹಿಸಲು ನಮಗೆ ಬರೀ ಸಾಂಪ್ರದಾಯಿಕವಾದ ವಿಮರ್ಶೆಯು ಉಪಯುಕ್ತವಲ್ಲ. ಸಾಹಿತ್ಯದ ಅನೇಕ ಕೃತಿಗಳು ನಮಗೆ ಅಂತರಂಗವನ್ನು ಹೇಳುತ್ತವೆ. ಅದು ಬಹಳ ಅಗತ್ಯವೂ ಆಗಿರುತ್ತದೆ. ಆದ್ದರಿಂದಲೇ ಅನೇಕ ಸಾಂಪ್ರದಾಯಿಕವಾದ ವಿಮರ್ಶೆಯು ತಳೆಯುವ ಅನೇಕ ನಿರ್ಣಯಗಳು ನಮಗೆ ಬರೀ ಶೈಕ್ಷಣಿಕ ಅಗತ್ಯದಂತೆ ಕಾಣಿಸುತ್ತವೆ. ಸಮಾಜಶಾಸ್ತ್ರೀಯವಾದ ದೃಷ್ಟಿಕೋನದಲ್ಲಿ ಮನೋಸ್ಥಿತಿ ಮತ್ತು ಅದರ ಸಾಮಾಜಿಕ ನಿಲುವುಗಳ ಅಗತ್ಯವೂ ಇರುತ್ತದೆ. ಕೃತಿಯಲ್ಲಿ ಬರುವ ಪಾತ್ರಗಳು ಮತ್ತು ಅವುಗಳ ಸ್ವಭಾವಗಳು ಮನಸ್ಸು ಮತ್ತು ಅದರ ಪರಿಣಾಮವನ್ನು ಹೇಳುತ್ತವೆ. ಆದರೆ ಅದರ ಜೊತೆಗೆ ಅವುಗಳು ಕೃತಿಯಲ್ಲಿ ಹೇಗೆ ಹಾಜರಾಗುತ್ತವೆ ಎನ್ನುವುದನ್ನೂ ನೋಡಬೇಕಾಗುತ್ತದೆ. ಅವುಗಳು ಒಂದು ರೀತಿಯಿಂದ ಭೌತಿಕವಾದ ಅಸ್ತಿತ್ವವನ್ನು ಪಡೆಯುತ್ತವೆ. ಮತ್ತು ಅವುಗಳ ಸ್ವಭಾವ ಮತ್ತು ವರ್ತನೆಗಳಿಗೆ ನಿರ್ದಿಷ್ಟವಾದ ಒಂದು ಅರ್ಥವೂ ಇರುತ್ತದೆ. ಅಂದರೆ ಅವುಗಳಿಗೆ ಇರುವ ಅರ್ಥವು ಮನಸ್ಸು ಮತ್ತು ಅದರ ನಿರೂಪಣೆಯನ್ನು ಮಾಡುತ್ತವೆ. ವಸ್ತು ಮತ್ತು ಅದರ ಆಯ್ಕೆಯು

ಸಮಾಜವನ್ನು ಹೇಳುತ್ತದೆ ಎನ್ನುವುದು ಈ ದೃಷ್ಟಿಯಿಂದ ಅತ್ಯಂತ ಮಹತ್ವದ್ದಾಗಿದೆ. ನಮ್ಮ ಗಮನವು ಇರಬೇಕಾದ್ದು ಈ ದೃಷ್ಟಿಯಿಂದ ಕೃತಿ ಮತ್ತು ಅದರ ವಸ್ತುವು ಯಾವ ರೀತಿಯದು ಎನ್ನುವುದರ ಬಗೆಗೆ. ನಮಗೆ ಮನುಷ್ಯ ಮತ್ತು ಅವನ ನಿಜವಾದ ಸ್ವರೂಪವು ಮುಖ್ಯವಾಗುತ್ತದೆ. ಅದನ್ನು ಲೇಖಕನು ಹೇಗೆ ಹೇಳುತ್ತಾನೆ ಮತ್ತು ಅದನ್ನು ಅವನು ಹೇಳುವಾಗ ತಳೆಯುವ ನಿಲುವು ಯಾವುದು ಎನ್ನುವುದು ಮಾತ್ರವೇ ಮುಖ್ಯವಾಗುತ್ತದೆ. ಮನೋಸ್ಥಿತಿಯೆನ್ನುವುದು ನಿಜವಾಗಿಯೂ ನಿರ್ಮಾಣವಾಗುತ್ತದೆ. ಮತ್ತು ಅದು ಸಮಾಜ ಮತ್ತು ಪರಿಸರವನ್ನು ಅವಲಂಬಿಸುತ್ತದೆ. ಅದರಲ್ಲಿ ವ್ಯಕ್ತವಾಗುವುದು ಜೀವನ ಮತ್ತು ಅದರ ಅರ್ಥಗಳು ಮಾತ್ರವೇ. ಲೇಖಕ ಮತ್ತು ಅವನ ಮನೋಭಾವವು ಹೀಗೆ ಬೇರೆ ಬೇರೆ ರೀತಿಯಲ್ಲಿ ರೂಪುಗೊಳ್ಳುತ್ತದೆ. ಲೇಖಕನು ಸಮಾಜ ಮತ್ತು ಬಾಹ್ಯದ ಅನೇಕ ನಿಯಮವನ್ನು ಮೀರಿ ಇರುವುದು ಸಾಧ್ಯವಿಲ್ಲ. ಅವನು ಅದರ ಮೂಲಕವೇ ಅನೇಕವನ್ನು ಗ್ರಹಿಸುತ್ತಾನೆ. ಅದನ್ನು ಕ್ಷಣಗಳು ಮತ್ತು ಅದರ ಅರಿವು ಎಂದೂ ಹೇಳಬೇಕಾಗುತ್ತದೆ. ಅದರ ಜೊತೆಗೆ ಕೆಲವು ರೀತಿಯಲ್ಲಿ ಕೇಂದ್ರಗಳು ಇರುತ್ತವೆ. ಯಾವುದನ್ನು ಲೇಖಕ ಕೇಂದ್ರ ಮಾಡಿಕೊಳ್ಳುತ್ತಾನೆ ಮತ್ತು ಅದರ ಮೂಲಕ ಅವನು ನಿರೂಪಿಸುವ ಸಂಗತಿಗಳು ಯಾವುವು ಎನ್ನುವುದು ಮಾತ್ರವೇ ಬಹಳ ಮುಖ್ಯ. ಸಾರ್ತ್ರೆಯ ನಾಸಿಯಾ ಅಥವಾ ಗಿರಿಯವರ ಗತಿಸ್ಥಿತಿ ಮುಂತಾದ ಬರಹಗಳು ಸ್ವಂತವನ್ನು ಕೇಂದ್ರ ಮಾಡಿಕೊಂಡಿವೆ. ಇಲ್ಲಿ ಕೇಂದ್ರಕ್ಕೆ ಮಹತ್ವವು ಇದೆ. ಗತಿಸ್ಥಿತಿಯಲ್ಲಿ ವ್ಯಕ್ತಿಯು ವಾಸ್ತವವಾಗಿ ಕೃತಿಯಲ್ಲಿ ಬರುವ ಹೇಳಿಕೆ ಮತ್ತು ಅದರ ಅನ್ವಯಗಳಿಗೆ ನಿಜವಾದ ಅರ್ಥವು ಬೇರೆಯಿರುತ್ತದೆ. ಅದನ್ನು ಹೀಗೆಯೂ ಹೇಳಬಹುದು: ಕೃತಿಯಲ್ಲಿ ಬರುವ ಕೆಲವು ವಿಷಯಗಳು ಹೇಳಿಕೆಯನ್ನು ನೀಡುತ್ತವೆ. ಮತ್ತೆ ಕೆಲವು ಅನ್ವಯವನ್ನು ಸೂಚಿಸುತ್ತವೆ. ಬೆಟ್ಟದಜೀವ ಕಾದಂಬರಿಯಲ್ಲಿ ನಿರೂಪಕನು ನೋಡುವುದು ಅವನ ಅನ್ವಯವನ್ನೂ ಸೂಚಿಸುತ್ತದೆ. ಉದ್ದೇಶವು ಯಾವುದು ಮತ್ತು ಅದರ ಅನ್ವಯವು ಯಾವುದು ಎಂದು ಕಾದಂಬರಿಯನ್ನು ಓದುವಾಗ ತಿಳಿಯುತ್ತದೆ. ಕೃತಿಯಲ್ಲಿ ಅನ್ವಯವೇ ಕೃತಿಕಾರನ ಉದ್ದೇಶವನ್ನು ಹೇಳುತ್ತದೆ. ಮತ್ತು ಅದರಲ್ಲಿ ಅವನ ಮನೋಭಾವವೂ ಬಹಳ ಮುಖ್ಯವಾಗುತ್ತದೆ. ಕೃತಿಯಲ್ಲಿ ಬರುವ ಕ್ರಿಯೆಗಳು ಮತ್ತು ಅದರ ಸಂಗತಿಗಳೂ ಈ ದೃಷ್ಟಿಯಿಂದ ಅತ್ಯಂತ ಮಹತ್ವದ್ದಾಗಿದೆ. ಸಾಹಿತ್ಯ ಮತ್ತು ಅದರ ಲಕ್ಷಣವೂ ಒಂದು ದೃಷ್ಟಿಯಿಂದ ಮಹತ್ವದ್ದೂ ಹೌದು. ಸಾಹಿತ್ಯ ಮತ್ತು ಅದರ ಕ್ರಿಯೆ ಅದರ ಉದ್ದೇಶ ಮತ್ತು ಅದರಲ್ಲಿ ಬಳಕೆಯಾಗುವ ಪ್ರತೀಕಗಳು ಈ ದೃಷ್ಟಿಯಿಂದ ಅತ್ಯಂತ ಮಹತ್ವದ್ದು. ಅದನ್ನು ಮನೋವೈಜ್ಞಾನಿಕವಾದ ಹಿನ್ನೆಲೆಯಲ್ಲಿಯೂ ಗುರುತಿಸುವುದು ಸಾಧ್ಯ. ಬರಹವು ಒಂದು ರೀತಿಯಿಂದ

ಲೇಖಕನಿಗೆ ನೆಮ್ಮದಿಯನ್ನು ಕೊಡುತ್ತದೆ. ಅವನಿಗೆ ಖುಶಿಯೂ ಸಿಗುತ್ತದೆ. ಆ ಖುಶಿಯು ಅವನಿಗೆ ಬೇರೆಯವರ ಜೊತೆಗೆ ತೋಡಿಕೊಂಡ ಸಂಗತಿಯನ್ನು ಹೇಳುತ್ತದೆ. ವೈಯಕ್ತಿಕ ರಚನೆ ಅದರ ಅಗತ್ಯಗಳು ಈ ದೃಷ್ಟಿಯಿಂದ ಅತ್ಯಂತ ಮಹತ್ವದ್ದು. ಬರಹವು ಒಂದು ಸುಖವೂ ಹೌದು. ನಾವು ನಮ್ಮ ವಿಷಯಗಳನ್ನು ಇನ್ನೊಬ್ಬರಲ್ಲಿ ನಮಗೆ ಗೊತ್ತಿರುವುದನ್ನು ತೋಡಿಕೊಂಡ ಅನುಭವನ್ನು ಅದು ಕೊಡುವುದರಿಂದ ನಮಗೆ ನೆಮ್ಮದಿಯನ್ನು ನೀಡುತ್ತದೆ. ಹಾಗೆಂದು ಅದರಲ್ಲಿ ನಮ್ಮ ನೆಮ್ಮದಿಯು ಮಾತ್ರವೇ ಇಲ್ಲ; ನಮ್ಮ ಬರಹವನ್ನು ಓದುವ ನಮ್ಮ ಸ್ನೇಹಿತನ ನೆಮ್ಮದಿಯೂ ಇರುತ್ತದೆ. ಅವನು ಸ್ನೇಹಿತನು ಯಾಕೆಂದರೆ ಅವನು ನಮ್ಮ ಬರಹವನ್ನು ಓದುತ್ತಾನೆ. ಹಾಗೆ ನಮ್ಮೊಂದಿಗೆ ಅವನು ವಿಷಯವನ್ನು ಹಂಚುತ್ತಾನೆ. ನಮಗೆ ಗೊತ್ತಿಲ್ಲದಂತೆ ನಮ್ಮ ನಿಲುವುಗಳನ್ನು ವಿರೋಧಿಸಬಹುದು ಅಥವಾ ನಮ್ಮ ಅಭಿಪ್ರಾಯವನ್ನು ಸ್ವೀಕರಿಸಲೂ ಬಹುದು. ಅಥವಾ ನಮ್ಮ ಅಭಿಪ್ರಾಯವನ್ನು ಮುಂದುವರಿಸಲೂ ಬಹುದು. ಅಂದರೆ ನಮ್ಮ ಬರಹ ಮತ್ತು ಅದನ್ನು ಸ್ವೀಕರಿಸುವ ನಮ್ಮ ಓದುಗನು ಸಂವಾದವನ್ನು ಮಾಡುತ್ತಾನೆ. ಆದರೆ ಅದರಲ್ಲಿ ಖುಷಿಯು ಇರುತ್ತದೆ. ಆದರೆ ಇಲ್ಲಿ ಮತ್ತೆ ಕೆಲವು ಅಭಿಪ್ರಾಯವನ್ನು ನೋಡಬಹುದು: ಬರಹವನ್ನು ಯಾರು ಓದುವುದೇ ಇಲ್ಲವೋ ಅವನು ನಿಜವಾಗಿಯೂ ನಮ್ಮೊಂದಿಗೆ ಸಂವಾದವನ್ನು ಮಾಡುವುದೇ ಇಲ್ಲವೆಂದು ನಾವು ತಿಳಿಯಬೇಕಾಗುತ್ತದೆ. ಮತ್ತು ಅದರಲ್ಲಿ ನಿರ್ದಿಷ್ಟವಾದ ಕೆಲವು ಸಂಗತಿಗಳು ಇರುತ್ತವೆ. ಅಂದರೆ ಬರಹ ಮತ್ತು ಅದರ ಸ್ವರೂಪವನ್ನು ನಾವು ಈ ದೃಷ್ಟಿಯಿಂದ ನಾವು ನೋಡಬೇಕಾದ ಕ್ರಮವೂ ಬೇರೆಯಾಗುತ್ತದೆ. ಅದರ ಅರ್ಥವು ಇಷ್ಟೇ: ಬರಹವು ನಮ್ಮ ಮೌನವನ್ನು ಭೇದಿಸುತ್ತದೆ. ಮತ್ತು ಅದರಲ್ಲಿ ವೈಯಕ್ತಿಕ ರಚನೆ ಮತ್ತು ಅದರ ಸ್ವರೂಪವು ಇರುವುದು ನಮಗೆ ಬೇಕಾದ ಸಂಗತಿಗಳನ್ನು ಹೇಳಲು. ವೈಯಕ್ತಿಕ ರಚನೆಯು ನಮ್ಮ ಮನೋಭಾವನ್ನು ಹೇಳುತ್ತದೆ. ಆದರೆ ಸಮಾಜ ಮತ್ತು ಅದರ ರಚನೆಗಳು ಮತ್ತೊಂದನ್ನು ಹೇಳುತ್ತದೆ, ನಾವು ಬರೆಯುವುದು ಎಂದರೆ ಸಮಾಜ ಮತ್ತು ಅದರ ರಚನೆಯೊಂದಿಗೆ ನಾವು ಸಾಧ್ಯವಾದಷ್ಟು ಸಂಬಂಧವನ್ನು ಸ್ಥಾಪಿಸಿಕೊಳ್ಳುವುದೂ ಹೌದು. ಫ್ರಾಯ್ಡನ ವಿಶ್ಲೇಷಣೆಯಲ್ಲಿ ವೈಯಕ್ತಿಕತೆ ಮತ್ತು ಅದರ ಸ್ವರೂಪವು ಬೇರೆಯಾಗುತ್ತದೆ. ಅದರಲ್ಲಿ ವೈಯಕ್ತಿಕತೆ ಮತ್ತು ಅದರ ಸ್ವರೂಪವು ಈ ದೃಷ್ಟಿಯಿಂದ ಮನೋಸ್ಥಿತಿಯನ್ನು ಹೇಳುತ್ತದೆ. ಯಾವುದನ್ನು ನಾವು ಹೇಗೆ ಹೇಳಬೇಕು ಎನ್ನುವುದು ಮನೋಸ್ಥಿತಿಯ ಪ್ರಶ್ನೆಯನ್ನು ಅವನು ಹೇಳುವುದು ನಮಗೆ ಇರುವ ಮನೋಸ್ಥಿತಿ ಅದರಲ್ಲಿ ನಾವು ಯಾವುದನ್ನು ಹೇಳುತ್ತೇವೆಯೋ ಅದರ ನಮ್ಮ ಅಭಿವ್ಯಕ್ತಿಯೂ ಹೌದು. ಅದರಲ್ಲಿ ಮತ್ತೆ ಕೆಲವು

ಪ್ರಶ್ನೆಗಳು ಇವೆ. ಅಂದರೆ ನಾವು ಇರುವುದನ್ನು ಮತ್ತು ಮನಸ್ಸು ಯಾವುದನ್ನು ಹೇಳುತ್ತದೆಯೋ ಅದನ್ನು ಮಾತ್ರವೇ ವಿವರಿಸುವುದಿಲ್ಲ ಅದರ ಬದಲು ನಮಗೆ ಯಾವುದನ್ನು ಹೇಳಬೇಕೆಂಬ ಬಯಕೆಯು ಇರುತ್ತದೆಯೋ ಅದನ್ನೂ ಹೇಳುತ್ತೇವೆ. ಮನಸ್ಸು ಮತ್ತು ಅದರ ಒತ್ತಡಗಳು ನಮಗೆ ಬಹಳ ವಿಷಯವನ್ನು ಹೇಳುತ್ತದೆ. ಮನಸ್ಸು ಮತ್ತು ಅದರ ಸಂಕಟವು ಸಾಮಾನ್ಯರಿಗೆ ಒಂದೊಂದು ರೀತಿಯಲ್ಲಿ ಕಾಣಿಸಲೂ ಬಹುದು: ಅದು ಕೆಲವರಿಗೆ ನೋವು ಕೊಡುತ್ತದೆ. ಮನಸ್ಸು ಮತ್ತು ಅದರ ಒತ್ತಡವು ಒಬ್ಬೊಬ್ಬರಿಗೆ ಒಂದೊಂದು ರೀತಿಯಲ್ಲಿ ಕಾಣಿಸುತ್ತದೆ. ಕೆಲವರಿಗೆ ಅದು ತಲೆನೋವು, ಮತ್ತೆ ಕೆಲವರಿಗೆ ಅದು ದೇಹವನ್ನು ಹಿಂಡಿದ ಅನುಭವವನ್ನು ಮತ್ತೆ ಕೆಲವರಿಗೆ ಅದು ಸುಸ್ತನ್ನು ಉಂಟುಮಾಡಬಹುದು. ಆದರೆ ಅದು ಲೇಖಕನಲ್ಲಿ ಮಾತ್ರವೇ ಬೇರೆಯಗುತ್ತದೆ. ಒಬ್ಬ ಪ್ರಗತಿಪರ ಚಿಂತಕನು ತನ್ನ ನೋವನ್ನು ತನಗೆ ಅನಿಸಿದ್ದನ್ನು ತನ್ನ ಜೊತೆಯವರೊಂದಿಗೆ ಚಳುವಳಿಯನ್ನು ಮಾಡಬಹುದು. ಮತ್ತೆ ಕೆಲವರು ಅದನ್ನು ಬರಬೇಕಾದ ಆಶಯದ ಹಿನ್ನೆಲೆಯಲ್ಲಿಯೂ ನೋಡಬಹುದು. ಇರುವುದು ಮತ್ತು ಬರಬೇಕಾದ್ದು ಪ್ರಗತಿಪರ ಚಿಂತಕನಿಗೆ ಅತ್ಯಂತ ಆವಶ್ಯಕವೂ ಆಗಿರುತ್ತದೆ. ಮನುಷ್ಯ ಮತ್ತು ಅವನ ನಡತೆಯು ಬೇರೆ ಬೇರೆ ವಿಷಯಗಳನ್ನು ಹೇಳುತ್ತವೆ. ನಡತೆಗೂ ಒಂದು ರಾಚನಿಕವಾದ ಸ್ವರೂಪವು ಇದೆ. ಅದು ನಿರ್ದಿಷ್ಟವಾದ ಆಶಯವನ್ನು ಸೂಚಿಸುತ್ತದೆ. ರಚನೆ ಮತ್ತು ಅದರ ವಿಶ್ಲೇಷಣೆಯನ್ನು ಮಾಡುವಾಗ ನಾವು ಇದನ್ನು ಯೋಚಿಸಬೇಕಾಗುತ್ತದೆ. ರಾಚನಿಕ ವಿಶ್ಲೇಷಣೆಯಲ್ಲಿ ಚರಿತ್ರೆ ಮತ್ತು ಅದರ ಅರಿವು ಬಹಳ ಮುಖ್ಯವಾಗುತ್ತದೆ. ನಮಗೆ ಗೊತ್ತಿರಬೇಕಾದ ಅನೇಕ ಅಂಶಗಳು ಇವೆ. ವಾಸ್ತವ ಮತ್ತು ಅದರ ರಚನೆಗಳು ಸ್ಥಿರವಾಗಿ ಇರುವುದೂ ಇಲ್ಲ. ಅದು ಬದಲಾಗುತ್ತದೆ. ಮತ್ತು ಬದಲಾಗುವುದು ಬೇರೆ ಬೇರೆ ಕಾರಣಗಳಿಂದ. ಆದರೆ ಸಮಾಜ ಮತ್ತು ಅದರ ಅರಿವು ಹೆಚ್ಚು ಅಗತ್ಯವೂ ಆಗುತ್ತದೆ. ನಮಗೆ ಸಾಮಾಜಿಕ ಜೀವನ ಮತ್ತು ಅದರ ವಾಸ್ತವವಾದ ಅರಿವು ಇರಬೇಕಾಗುತ್ತದೆ. ವಾಸ್ತವವು ಕೆಲವನ್ನು ನಿರ್ಮಾಣ ಮಾಡುತ್ತದೆ. ಅದು ಅಗತ್ಯವೂ ಆಗಿರುತ್ತದೆ. ಯಾಕೆಂದರೆ ನಿಜವೆನ್ನುವುದು ನಮಗೆ ಅಗತ್ಯವಾದ ಒಂದು ಪರಿಕರವೂ ಆಗಿದೆ. ಅನೇಕ ಅಂಶಗಳನ್ನು ರಚನೆಯು ನಿರ್ಮಾಣ ಮಾಡುತ್ತದೆ. ಅದುವೇ ವಾಸ್ತವವಾದ ಸೂಚನೆಯನ್ನು ಕೊಡುವುದೂ ನಿಜ. ರಚನೆ ಮತ್ತು ಅದಕ್ಕೆ ಯಾವುದನ್ನು ನಾವು ಅನ್ವಯಿಸಬೇಕು ಎನ್ನುವುದೇ ಮುಖ್ಯ. ಯಾವುದು ಹೊಸತು ಮತ್ತು ಯಾವುದು ಅತ್ಯಂತ ಹಳೆಯದು ಎನ್ನುವುದೂ ಇಲ್ಲಿ ಗಮನಿಸಬೇಕಾದ ಅಂಶವಾಗಿದೆ. ಹಳೆಯ ರಚನೆಗೆ ಹೊಸದಾದ ಅಂಶಗಳು ಸೇರಿಕೊಂಡು ಮತ್ತೆ ಹೊಸದಾದ ರಚನೆಯು ಆಗುತ್ತದೆ. ರಚನೀಕರಣ ಮತ್ತು

ನಿರಚನೀಕರಣದ ಪ್ರಕ್ರಿಯೆಗಳು ನಡೆಯುತ್ತವೆ. ಆಂಶಿಕ ಅಗತ್ಯ ಮತ್ತು ಅದರ ಪುನರೂಪೀಕರಣವನ್ನು ನಾವು ಬೇರೆ ರೀತಿಯಲ್ಲಿಯೂ ನೋಡಬೇಕಾಗುತ್ತದೆ. ಅಂದರೆ ಅದರಲ್ಲಿ ಮೌಲ್ಯ ಮತ್ತು ಅದರ ಸ್ವರೂಪವನ್ನು ಈ ದೃಷ್ಟಿಯಿಂದ ಗಮನಿಸಬೇಕಾಗುತ್ತದೆ. ಮತ್ತೊಂದು ಅಂಶವೂ ಇದೆ. ಕೆಲವು ಸಾಮಾಜಿಕ ಅಂಶಗಳು ಚರಿತ್ರೆ ಮತ್ತು ಅದರ ಪರಿಣಾಮದಿಂದ ಹುಟ್ಟಿರುತ್ತವೆ. ಅವುಗಳಿಗೆ ಅವುಗಳೇ ಆದ ಅರ್ಥವೂ ಇರುತ್ತದೆ. ವಾಸ್ತವವಾಗಿ ಯಾವುದನ್ನು ಸಮಾಜವೆಂದು ಕರೆಯುತ್ತಿದ್ದೆವೆಯೋ ಅದು ರಚನೆ ಅದರಲ್ಲಿ ಕೆಲವು ಸಂಗತಿಗಳು ಸೇರ್ಪಡೆಯು ಆಗುತ್ತದೆ. ಮತ್ತು ಕೆಲವು ಸಂಗತಿಗಳು ನಿರಾಕರಣೆಗೆ ಗುರಿಯಾಗುತ್ತವೆ. ಅಂದರೆ ನಿರಾಕರಣೆ ಮತ್ತು ಹೊಸ ರಚನೆಗಳ ನಡುವೆ ಬೇರೆ ಬೇರೆ ಸಂಗತಿಗಳು ಸೇರುತ್ತವೆ. ಯಾವುದನ್ನು ಯಾವುದಕ್ಕೆ ಅನ್ವಯಿಸಬೇಕಿದೆ ಎಂದು ನಾವು ಯೋಚನೆಯನ್ನು ಮಾಡಬೇಕಾಗುತ್ತದೆ. ಯಾವುದೇ ಸಮಾಜಕ್ಕೆ ಹೊಸತು ಸೇರಿದರೆ ಅದರಲ್ಲಿ ಬದಲಾವಣೆಯು ಆಗುತ್ತದೆ ಮತ್ತು ಅದರಲ್ಲಿ ಹೊಸತು ಸೇರ್ಪಡೆಯಾದರೆ ಹೊಸತು ಕಾಣಿಸಿಕೊಳ್ಳುತ್ತದೆ. ಹೊಸ ಅಂಶಗಳು ಹೊಸದಾದ ರಚನೆಗೆ ಕಾರಣವೂ ಆಗುತ್ತದೆ. ಬೇರೆ ಬೇರೆ ರಚನೆಗಳು ಅವುಗಳ ಸ್ವರೂಪವನ್ನು ನೋಡುವಾಗ ನಾವು ಅದರ ಹಿನ್ನೆಲೆಯನ್ನೂ ಅರ್ಥ ಮಾಡಿಕೊಳ್ಳಬೇಕಾಗುತ್ತದೆ. ಸನ್ನಿವೇಶ ಮತ್ತು ರಚನೆಗಳಿಗೆ ದ್ವಂದ್ವಾತ್ಮಕತೆಯೂ ಇರುತ್ತದೆ. ಆದ್ದರಿಂದ ಹೊಸಮೌಲ್ಯವು ಬರುವಾಗ ಅದರ ಅರ್ಥವೂ ಬೇರೆಯಾಗುತ್ತದೆ. ಮತ್ತು ಹೊಸತರ ಜೊತೆಗೆ ಮುಖಾಮುಖಿಯೂ ಆಗುತ್ತದೆ. ಹೊಸತು ಮತ್ತು ಹಳೆಯದರ ನಡುವೆ ಸಂಘರ್ಷವಾಗುತ್ತದೆ. ಮೌಲ್ಯ ಮತ್ತು ವಿವರಣೆಗಳ ನಡುವೆಯೇ ಈ ಕೆಲವು ಸಂಗತಿಗಳು ನಡೆಯತ್ತವೆ. ರಚನೆಯು ವಾಸ್ತವವಾಗಿ ವಿಶ್ವಾತ್ಮಕತೆಯ ಜೊತೆಗೆ ಸಂಬಂಧವನ್ನು ಕಲ್ಪಿಸುತ್ತವೆ. ಮತ್ತು ಅದರ ಅಗತ್ಯವೂ ಇದೆ. ಒಂದು ಚಾರಿತ್ರಿಕ ರಚನೆಯು ಮತ್ತೊಂದು ರಚನೆಯೊಂದಿಗೆ ಹೊಂದಾಣಿಕೆಯನ್ನೂ ಮಾಡಿಕೊಳ್ಳುತ್ತವೆ. ಆದರೆ ರಚನೆಯೂ ಕೂಡಾ ಒಂದು ರೀತಿಯಲ್ಲಿ ಹೊಂದಾಣಿಕೆಯಾಗುತ್ತದೆ. ಯಾಕೆಂದರೆ ಅದು ಗುಂಪಿನಿಂದ ಕೂಡಿರುತ್ತವೆ. ರಚನೆಯು ಕೂಡಾ ಒಂದು ಬಗೆಯ ಅಭಿವ್ಯಕ್ತಿಯೂ ಹೌದು. ಅದನ್ನು ಕಲೆ ಮತ್ತು ತತ್ವಜ್ಞಾನವು ಹೇಳುತ್ತದೆ. ಮತ್ತು ಸಾಹಿತ್ಯ ಮತ್ತು ಅದರ ರಚನೆಗಳು ಮೂಲಭೂತವಾಗಿ ಒಂದು ಪ್ರತಿಕ್ರಿಯೆಯೂ ಹೌದು. ಸಾಹಿತ್ಯ ಮತ್ತು ಅದರ ರಚನೆಯು ಮಾತ್ರವೇ ಸಂವಾದದ ಬಗೆಯದೂ ಹೌದು. ಅದನ್ನು ಮನಸ್ಸು ಮತ್ತು ಅದರ ರಚನೆಯೊಂದಿಗೆ ನೋಡಬೇಕಾಗುತ್ತದೆ. ಮನಸ್ಸು ಮತ್ತು ಅದರ ರಚನೆಯು ಯಾವಾಗಲೂ ವ್ಯಕ್ತಿಯಿಂದ ರಚಿತವಾಗುತ್ತದೆ. ಮತ್ತು ಅದರಲ್ಲಿ ಅವನ ಅಭಿಪ್ರಾಯವೂ

ಸೇರಿಕೊಂಡಿರುತ್ತದೆ. ಸಂವಾದವು ಮತ್ತೊಂದು ಬಗೆಯಲ್ಲಿ ಇರುತ್ತವೆ. ಆದರೆ ಅವರೆಡೂ ಲೋಕ ಮತ್ತು ಅದರ ಸತ್ವವನ್ನು ಹೇಳುತ್ತವೆ. ಸಾಹಿತ್ಯ ಮತ್ತು ಅದರ ಅಭಿವ್ಯಕ್ತಿಯು ಈ ದೃಷ್ಟಿಯಲ್ಲಿ ಭಿನ್ನವಾದುದೂ ಹೌದು. ಅದರ ಹಿಂದೆ ರಾಜಕಾರಣ, ಸಮಾಜ, ಮನೋವಿಜ್ಞಾನ ಮತ್ತು ಇತರ ಅಂಶಗಳೂ ಸೇರಿಕೊಂಡು ಬೇರೆ ಸಂಗತಿಗಳನ್ನು ಹೇಳುತ್ತವೆ. ಹಾಗೆ ನೋಡುವುದಿದ್ದರೆ ಬರೆಯುವುದು ಮತ್ತು ಓದುವುದು ಎರಡೂ ಸಮಾಜ ಮತ್ತು ಅದರ ಪ್ರತಿಕ್ರಿಯೆಗಳೇ ಆಗಿರುತ್ತವೆ. ಓದುವುದು ಅಂದರೆ ಒಂದು ನಿರ್ದಿಷ್ಟವಾದ ರೀತಿಯ ಸಂಬಂಧವನ್ನು ನಾವು ಸ್ಥಾಪಿಸಿಕೊಳ್ಳುವುದೂ ನಿಜ. ಬರೆಯುವುದು ಮತ್ತು ಓದುವುದೂ ಕೂಡಾ ಸಮಾಜವನ್ನು ಹೇಳುತ್ತವೆ. ಸಾಹಿತ್ಯ ಮತ್ತು ಅದರೊಡನೆ ನಾವು ಸಂಬಂಧವನ್ನು ಸ್ಥಾಪಿಸಿಕೊಳ್ಳುವುದು ಅಂದರೆ ನಿಜವಾದ ಅರ್ಥದಲ್ಲಿ ಸಮಾಜ ಮತ್ತು ಅದರ ಜೊತೆಗೆ ಸಂಬಂಧವನ್ನು ಸ್ಥಾಪಿಸಿಕೊಳ್ಳುವುದೂ ಹೌದು. ಆದರೆ ಸಾಹಿತ್ಯವನ್ನು ಕಲಿಸುವ ಸಂಸ್ಥೆಗಳು ಕೆಲವನ್ನು ಓದಲು ಸೂಚಿಸುತ್ತವೆ. ಆದರೆ ಸಾಹಿತ್ಯ ಮತ್ತು ಇತರ ರಚನೆಗಳಿಗೆ ಕೆಲವು ರೀತಿಯ ಪ್ರಾಶಸ್ತ್ಯವಿರುತ್ತದೆ. ಸಮಾಜ ಮತ್ತು ಅದರ ಚಹರೆಗಳು ಬದಲಾಗುತ್ತಾ ಬಂದಂತೆ ಅದರ ಪರಿಣಾಮವು ಕಲೆಯ ಮೇಲೆ ಆಗುತ್ತದೆ. ಅದು ಅನಿವಾರ್ಯವೂ ಹೌದು. ಸಾಹಿತ್ಯವನ್ನು ಒಂದು ಅನನ್ಯವಾದ ಘಟಕವೆಂದು ಹೇಳಬೇಕಾಗಿಯೂ ಇಲ್ಲ. ಅದು ಭಿನ್ನವಾಗುತ್ತದೆ. ಅದರ ಅರ್ಥವೂ ಬೇರೆಯಾಗುತ್ತದೆ. ಕಾದಂಬರಿಯು ನಿಜವಾಗಿಯೂ ನಿರ್ದಿಷ್ಟವಾದ ಓದುಗರನ್ನು ಸೆಳೆದಿದೆ. ಕಾವ್ಯದ ರಚನೆಗೆ ಕೇಳುಗರೂ ಕಾರಣ.ಅದು ಹೊಸ ಓದುಗರನ್ನು ಸೆಳೆಯಿತು. ಮತ್ತು ಅದರಲ್ಲಿ ಹೊಸದಾದ ಅಗತ್ಯಗಳೂ ಇದ್ದವು. ಅಂದರೆ ಅವುಗಳನ್ನು ನಾವು ನೋಡಿಕೊಳ್ಳುವ ಕ್ರಮಗಳು ಭಿನ್ನವಾಗುತ್ತವೆ. ಸಾಹಿತ್ಯ ಮತ್ತು ಸಮಾಜದ ಸಂಬಂಧವನ್ನು ಅರ್ಥ ಮಾಡಿಕೊಳ್ಳಲು ನಮಗೆ ಸರಿಯಾದ ಪರಿಕರವು ಇಲ್ಲದೆ ಹೋದರೆ ಅದು ವಿಫಲವಾಗುತ್ತದೆ. ಅದನ್ನು ಗ್ರಹಿಸಲು ನಮಗೆ ಬುದ್ಧಿಜೀವಿಗಳ ಚರಿತ್ರೆಯೂ ಅಗತ್ಯವಿದೆ. ನವೋದಯವು ಬರೀ ಸಾಮಾನ್ಯರನ್ನು ಮಾತ್ರವೇ ಕೇಂದ್ರ ಮಾಡಿಕೊಂಡಿಲ್ಲ. ಅದು ಸಾಮಾನ್ಯವಾದ ಸಂವೇದನೆಯನ್ನು ಮಾತ್ರವೇ ಹೇಳುವುದೂ ಇಲ್ಲ. ಅದರಲ್ಲಿ ವ್ಯತ್ಯಾಸವೂ ಇದೆ. ಆದರೆ ಸಮಾಜ ಮತ್ತು ಸಂಸ್ಕೃತಿಯನ್ನು ಅದು ನೋಡುವ ಮತ್ತು ಗ್ರಹಿಸುವ ಕ್ರಮಗಳು ಭಿನ್ನವಾಗಿದೆ.. ಅದರಲ್ಲಿ ಸಮಾಜವೆಂದರೆ ಸುಂದರವಾದ ಒಂದು ಆದರ್ಶವೂ ಹೌದು. ಸಮಾಜವನ್ನು ನವೋದಯದ ಲೇಖಕರು ನೋಡಿದ ಮತ್ತು ಅದನ್ನು ಸ್ವೀಕರಿಸಿದ ಕ್ರಮವು ಬೇರೆಯಾಗಿದೆ. ಹಾಗೆ ನೋಡುವುದಿದ್ದರೆ ಸಮಾಜವನ್ನು ಯಾವ ಲೇಖಕರು ಯಾವ ರೀತಿಯಲ್ಲಿ ಗ್ರಹಿಸುತ್ತಾರೆ ಮತ್ತು ಅದನ್ನು ಸ್ವೀಕರಿಸಿಕೊಳ್ಳುತ್ತಾರೆ ಎನ್ನುವುದೂ

ಅಷ್ಟೇ ಮುಖ್ಯ. ಅದನ್ನು ಅವರು ನೋಡುವ ಕ್ರಮದ ಆಧಾರದ ಮೇಲೆಯೇ ನಾವು ನಿರ್ಧಾರಮಾಡಬೇಕಾಗುತ್ತದೆ. ನಾವು ನಮ್ಮ ಸಂವಹನ ಮತ್ತು ಅದರ ಹಿಂದೆ ಇರುವ ಆಲೋಚನೆಯನ್ನು ಗ್ರಹಿಸಬೇಕಾದ ಕ್ರಮವೇ ಭಿನ್ನವಾಗುತ್ತದೆ. ಸಂವಹನ ಒಂದು ಬಗೆಯಲ್ಲಿ ತಂತ್ರಗಾರಿಕೆಯೂ ಆಗಿರುತ್ತದೆ ಎಂದು ಎಡ್ಮಂಡ್ ಬರ್ಕ್ ಹೇಳುತ್ತಾನೆ. ಗೋಲ್ಡ್‌ಮನ್ ಬದ್ಧತೆ ಮತ್ತು ಮನುಷ್ಯ ಸಂಬಂಧವನ್ನು ಹೇಳುತ್ತಾನೆ. ಯಾವುದೇ ಸಮಾಜದಲ್ಲಿ ನಿರ್ದಿಷ್ಟವಾದ ಒಂದು ಸಹಯೋಗವೂ ಇರುತ್ತದೆ. ಆ ಸಹಯೋಗವನ್ನು ನಾವು ನೋಡಬೇಕಾಗುತ್ತದೆ. ಅದು ಅಗತ್ಯ ಹಾಗೆಯೇ ನಮಗೆ ಗೊತ್ತಿರಬೇಕಾದ ಮತ್ತೊಂದು ಅಂಶವೆಂದರೆ ವ್ಯಕ್ತಿಗೂ ಒಂದು ಚರಿತ್ರೆಯು ಇರುತ್ತದೆ. ಅದನ್ನೂ ನಾವು ಗಮನಿಸಬೇಕು. ವ್ಯಕ್ತಿವಾದ ಮತ್ತು ಅದರ ಚಿಂತನೆಯನ್ನು ಈ ವ್ಯಕ್ತಿ ಮತ್ತು ಅವನ ಅಸ್ತಿತ್ವದ ಹಿನ್ನೆಲೆಯಲ್ಲಿಯೇ ನೋಡಬೇಕಾಗುತ್ತದೆ. ಸಮಾಜ ಮತ್ತು ವ್ಯಕ್ತಿ ಸಂಬಂಧದಿಂದಲೇ ಆಲೋಚನೆಯು ಹುಟ್ಟುತ್ತದೆ. ಮತ್ತು ಅದರಲ್ಲಿ ವ್ಯಕ್ತಿಯು ಯಾವ ರೀತಿಯಲ್ಲಿ ಗ್ರಹಿಸುತ್ತಾನೆ, ಅದರ ಹಿನ್ನೆಲೆಯು ಯಾವ ಬಗೆಯದು ಎನ್ನುವುದು ಮಾತ್ರವೇ ಬಹಳ ಮುಖ್ಯ. ವ್ಯಕ್ತಿಯೂ ನಿಜವಾಗಿ ಒಂದು ಮೌಲ್ಯವನ್ನು ಮಾತ್ರವೇ ಪ್ರತಿನಿಧಿಸುತ್ತಾನೆ. ವ್ಯಕ್ತಿ ಮತ್ತು ಅವನ ಪ್ರಜ್ಞೆಯು ಯಾವತ್ತು ಒಂದು ಸಮಾಜವನ್ನು ಗ್ರಹಿಸುವುದು ನಿರ್ದಿಷ್ಟವಾದ ರೂಪದಲ್ಲಿ ಮಾತ್ರವೇ ಆಗಿರುತ್ತದೆ. ವ್ಯಕ್ತಿ ಮತ್ತು ಅವನ ಆಲೋಚನೆಗಳು ಯಾವತ್ತೂ ಒಂದೇ ರೀತಿಯಲ್ಲಿ ಇರುವುದಿಲ್ಲ. ಅದು ಬದಲಾಗುತ್ತದೆ. ಬದಲಾವಣೆಯನ್ನು ನಾವು ಒಂದು ಬರೀ ಘಟಕವಾಗಿ ಮಾತ್ರವೇ ಆಗಿ ನೋಡಬಾರದು. ಅದು ಸಮಾಜ ಮತ್ತು ಅದರ ಗುಂಪುಗಳನ್ನು ಆಧರಿಸಿಕೊಂಡು ಬೇರೆಯಾಗುತ್ತದೆ. ಮತ್ತೆ ಹಾಗೆ ಬದಲಾಗುದು ಅಂದರೆ ಅದು ವ್ಯಕ್ತಿ ಮತ್ತು ಅವನ ಆವಶ್ಯಕತೆಯೂ ಆಗುತ್ತದೆ. ವ್ಯಕ್ತಿ ಮತ್ತು ಅವನ ಚಿಂತನೆಯು ಕೆಲವೊಮ್ಮೆ ವಿಷಯನಿಷ್ಟವಾದುದೂ ಆಗಿರುತ್ತದೆ. ಅದರಲ್ಲಿ ಎಲ್ಲವೂ ಬರೀ ತಳಹದಿರಹಿತವಾದ ಸಂಗತಿಯೆಂದು ಗ್ರಹಿಸಬೇಕಾದ ಅಗತ್ಯವೂ ಇಲ್ಲ. ಅದು ಬದಲಾಗುತ್ತದೆ ಅಂದರೆ ಅದರ ಹಿಂದೆ ಕೆಲವು ಕಾರಣಗಳೂ ಇರುತ್ತವೆ. ವಿಷಯ ಮತ್ತು ಅದರ ಸಾಧ್ಯತೆಯು ಬೇರೆಯೂ ಆಗಿರುತ್ತದೆ. ಅಂದರೆ ಅದರಲ್ಲಿ ವ್ಯಕ್ತಿ ಮತ್ತು ಅವನ ನಿಲುವುಗಳು ಭಿನ್ನವಾದ್ದು ಕೂಡಾ ನಿಜ. ಅದರಲ್ಲಿ ಅವನ ಆಯ್ಕೆಯು ಅತ್ಯಂತ ಮಹತ್ವದ ಪಾತ್ರವನ್ನು ವಹಿಸುತ್ತದೆ. ಅವನು ಎಲ್ಲವನ್ನೂ ವಸ್ತುನಿಷ್ಟವಾಗಿಯೇ ಗ್ರಹಿಸುತ್ತಾನೆ ಎಂದು ಅರ್ಥವಲ್ಲ. ಅವನು ತನ್ನ ಭಾವನೆಗಳನ್ನು ನೋಡುವ ಮತ್ತು ಗ್ರಹಿಸುವ ಕ್ರಮಕ್ಕೆ ಅನುಗುಣವಾಗಿಯೇ ಬೇರೆ ಸಾಧ್ಯತೆಗಳು ಉಂಟಾಗುತ್ತವೆ. ಆಯ್ಕೆ ಮತ್ತು ಪರಿಸರ ಹಾಗೂ ವ್ಯಕ್ತಿತ್ವ ಮತ್ತು ಅದರ ಚಹರೆಗಳಲ್ಲಿ ಉಂಟಾಗುವ ಭಿನ್ನತೆಗಳೂ ಬಹಳ

ಮಹತ್ವದ ಪಾತ್ರವನ್ನು ವಹಿಸುತ್ತವೆ. ವಾಸ್ತವವಾಗಿ ಯಾವುದೇ ವ್ಯಕ್ತಿಯು ತನ್ನ ಮಟ್ಟಿಗೆ ತಾನೇ ನಿರ್ಧರಿಸುವುದು ಅತ್ಯಂತ ಕಷ್ಟದಾಯಕವೂ ಹೌದು. ಅದರಲ್ಲಿ ವ್ಯತ್ಯಾಸಗಳಿವೆ. ಮತ್ತು ಅದರ ಸ್ವಭಾವ ಮತ್ತು ಅದರ ಸ್ವರೂಪವನ್ನು ಆಯಾ ಸನ್ನಿವೇಶದ ಹಿನ್ನೆಲೆಯಲ್ಲಿಯೂ ನೋಡಬೇಕಾಗುತ್ತದೆ. ಅದರ ಅರ್ಥವೂ ಭಿನ್ನವಾಗುತ್ತದೆ. ಅದರಲ್ಲಿ ಕ್ರಿಯೆ ಮತ್ತು ಅದರ ಚಹರೆಗಳೂ ಮುಖ್ಯವಾಗುತ್ತದೆ. ವ್ಯಕ್ತಿವಾದಿ ಚಿಂತನೆ ಮತ್ತು ವ್ಯಕ್ತಿವಾದಿ ಗ್ರಹಿಕೆಗಳ ಒಂದು ಬಗೆಯವು. ಅದರಲ್ಲಿ ಚಿಂತನೆಯು ವ್ಯಕ್ತಿಯನ್ನು ಒಂದು ಘಟಕವಾಗಿ ಮಾತ್ರವೇ ನೋಡುತ್ತದೆ. ವ್ಯಕ್ತಿಯನ್ನು ಅದು ಪ್ರತ್ಯೇಕ ಮಾಡುತ್ತಾ ಬಂದಿದೆ. ವ್ಯಕ್ತಿ ಮತ್ತು ಅವನ ಆಲೋಚನೆಯನ್ನು ಅದು ಹೇಳುವ ಕ್ರಮಗಳು ಭಿನ್ನವಾಗಿವೆ. ಅಂದರೆ ವ್ಯಕ್ತಿ ಮತ್ತು ಅವನ ಸ್ವಭಾವವನ್ನು ಅದು ಹೇಳುವ ಕ್ರಮಗಳು ಬೇರೆಯಾಗುತ್ತದೆ. ಅದರಲ್ಲಿ ಭಿನ್ನವಾದ ಮತ್ತೆ ಕೆಲವು ಸಂಗತಿಗಳು ಸೇರಿಕೊಂಡಿವೆ. ವ್ಯಕ್ತಿಯನ್ನು ಒಂದು ಪ್ರತ್ಯೇಕವಾದ ಮೌಲ್ಯವನ್ನು ಧರಿಸುವವನು ಎಂದು ಅದು ಹೇಳುತ್ತದೆ. ಅದರಲ್ಲಿ ವ್ಯಕ್ತಿಯನ್ನು ಗ್ರಹಿಸುವಾಗ ವ್ಯಕ್ತಿ ಮತ್ತು ಅವನ ಕ್ರಿಯೆಯನ್ನು ಮಾತ್ರವೇ ಒಂದು ನಿರ್ದಿಷ್ಟವಾದ ಪ್ರಜ್ಞಾವಂತ ಸ್ಥಿತಿಯೆಂದು ಅದು ಹೇಳುತ್ತದೆ. ಅದು ಪ್ರಜ್ಞೆಯನ್ನು ನೋಡಿಕೊಳ್ಳುವ ಕ್ರಮವು ಬೇರೆ. ಪ್ರಜ್ಞೆ ಮತ್ತು ಅದರ ಸ್ಥಿತಿಯನ್ನು ಅದು ಗ್ರಹಿಸುವಾಗ ಒಂದು ಸಿದ್ಧಾಂತ ರಹಿತವಾಗಿಯೂ ನೋಡುತ್ತದೆ. ಅಂದರೆ ವ್ಯಕ್ತಿ ಮತ್ತು ಅವನ ಚಿಂತನೆಯನ್ನು ವಾಸ್ತವವಾಗಿ ಬರೀ ಒಂದು ಮೌಲ್ಯವನ್ನು ಮಾತ್ರವೇ ಹೇಳುತ್ತಾನೆ ಮತ್ತು ಅದು ಅದುವೇ ಸರ್ವತಂತ್ರ ಸ್ವತಂತ್ರವೆಂದು ಹೇಳಲು ಬರುವುದೂ ಇಲ್ಲ. ವ್ಯಕ್ತಿ ಮತ್ತು ಅವನ ಜೀವನವು ಹೇಗೆ ಭಿನ್ನವಾಗುತ್ತದೆ ಎನ್ನುವುದನ್ನು ಹೇಳಲು ಅದು ಬರೀ ಒಂದು ಮಾನದಂಡವನ್ನು ಮಾತ್ರವೇ ಬಳಸುತ್ತದೆ. ಆಧುನಿಕತೆ ಮತ್ತು ಅದರ ಸ್ವರೂಪವನ್ನೂ ವ್ಯಕ್ತಿವಾದವು ನೋಡುವ ಕ್ರಮವು ಬೇರೆಯಾಗಿದೆ. ಅದು ವ್ಯಕ್ತಿಯ ಆಧುನಿಕತೆಯನ್ನು ಮಾತ್ರವೇ ಪ್ರಧಾನವೆಂದು ಗಣಿಸುತ್ತದೆ. ಅಂದರೆ ವ್ಯಕ್ತಿ ಮತ್ತು ಅವನ ಗುಣವು ಆಧುನಿಕ ಸನ್ನಿವೇಶದಲ್ಲಿ ಚಿಂತನೆಯ ಕ್ರಮದಲ್ಲಿ ಹೇಗೆ ವ್ಯಕ್ತವಾಗುತ್ತದೆ ಎನ್ನುವುದು ಮಾತ್ರವೇ ಅದರಲ್ಲಿ ಮುಖ್ಯ. ಆಧುನಿಕತಾವಾದಿಗಳು ವ್ಯಕ್ತಿಯನ್ನು ಮಾತ್ರವೇ ಒಂದು ನಿಯಂತ್ರಣ ರೂಪವಾದ ಸಂಗತಿಯೆಂದು ಹೇಳುತ್ತಾರೆಂದರೆ ವ್ಯಕ್ತಿಯೇ ನಿರ್ದಿಷ್ಟವಾಗಿ ಒಂದು ವಿಶಿಷ್ಟವಾದ ಘಟಕವೆಂದೂ ಅದನ್ನು ಮಾತ್ರವೇ ನೋಡಿದರೆ ಸಾಕು ಎಂದೂ ಭಾವಿಸುತ್ತದೆ. ನವ್ಯತೆ ವ್ಯಕ್ತಿ ಮತ್ತು ಅವನ ನಡೆ ನುಡಿಯನ್ನು ಮತ್ತು ಅದರ ಸ್ವಭಾವವನ್ನು ಅದು ಗ್ರಹಿಸುವ ರೀತಿಯು ಬೇರೆಯಾಗುತ್ತದೆ. ವ್ಯಕ್ತಿಯೇ ಇಲ್ಲಿ ಒಂದು ಮುಖ್ಯವಾದ ವಿಷಯು. ಅದನ್ನು ನೋಡಿದರೆ ಸಾಕು ಎಂದೇ ಭಾವಿಸಲಾಗುತ್ತದೆ. ವ್ಯಕ್ತಿಯ ಸ್ವಾತಂತ್ರ್ಯವನ್ನು ಮಾತ್ರವೇ

ಅದು ನಿರ್ದಿಷ್ಟವಾದ ಅರ್ಥದಲ್ಲಿ ಗುರುತಿಸುತ್ತದೆ. ಅಂದರೆ ವ್ಯಕ್ತಿ ಮತ್ತು ಅದರ ಚಹರೆಗಳನ್ನು ವ್ಯಕ್ತಿ ಮತ್ತು ಅವನ ಗ್ರಹಿಕೆಗೆ ಕಾರಣವು ಆಗುತ್ತದೆ. ವ್ಯಕ್ತಿಯನ್ನು ವಿವರಿಸುವುದು ಮಾತ್ರವೇ ಇಲ್ಲಿ ಮುಖ್ಯ. ಸಿದ್ಧಾಂತ ಮತ್ತು ಅದರ ಸಂಘರ್ಷಗಳನ್ನು ಅದು ವ್ಯಕ್ತಿಯ ಹಂತದಲ್ಲಿ ಮಾತ್ರವೇ ನೋಡುತ್ತದೆ. ಸಿದ್ಧಾಂತ ಮತ್ತು ಅದರ ಅನ್ವಯನ್ನು ಕೂಡಾ ಅದು ನೋಡುವುದು ಬೇರೆ ರೀತಿಯಲ್ಲಿ. ವ್ಯಕ್ತಿ ಮತ್ತು ಅವನ ಹಿಂದೆ ಇರಬಹುದಾದ ಕೆಲವು ಒತ್ತಡಗಳನ್ನು ಅದು ಅಷ್ಟಾಗಿ ಗ್ರಹಿಸುವುದೇ ಇಲ್ಲ. ವ್ಯಕ್ತಿಯೆಂದರೆ ಅವನ ಪಾಡಿಗೆ ಅವನು ಸ್ವತಂತ್ರನಲ್ಲ. ಅವನು ವಿಶೇಷವಾಗಿ ಕೆಲವು ಮಾದರಿಯ ರಚನೆಯ ಭಾಗವೂ ಆಗಿರುತ್ತಾನೆ. ಸಾಮಾಜಿಕ ಗುಂಪು ಮತ್ತು ಅದರ ಪ್ರಭಾವವು ವ್ಯಕ್ತಿಯ ಮೇಲೆ ಆಗುತ್ತದೆ. ಚರಿತ್ರೆ ಮತ್ತು ಅದರ ಸ್ವರೂಪ ಹಾಗೂ ಅದರ ಪಲ್ಲಟದಲ್ಲಿ ವ್ಯಕ್ತಿಯು ಹೆಚ್ಚು ವಾಹಕನು ಮಾತ್ರವೇ ಆಗಿರುತ್ತಾನೆ. ಅಂದರೆ ಅವನ ವ್ಯಕ್ತಿತ್ವ ಮತ್ತು ಅದರ ಸ್ವರೂಪವು ಒಂದು ಪರಿಕರವೂ ಹೌದು. ಅಂದರೆ ಅದರಲ್ಲಿ ವ್ಯಕ್ತಿಯನ್ನು ನೋಡುವ ಮತ್ತು ಗ್ರಹಿಸುವ ಕ್ರಮವನ್ನು ಸಾಮಾಜಿಕ ವರ್ಗಗಳ ಹಿನ್ನೆಲೆಯಲ್ಲಿ ಮಾತ್ರವೇ ನೋಡಬೇಕಾಗುತ್ತದೆ. ಸಾಮಾಜಿಕ ವರ್ಗಗಳು ಕೆಲವನ್ನು ಸೂಚಿಸುತ್ತವೆ. ಮತ್ತು ಅದರಲ್ಲಿ ಭೂತಕಾಲ, ವರ್ತಮಾನ, ಭವಿಷ್ಯದ ಸಂಗತಿಗಳೂ ಸೇರಿಕೊಂಡಿರುತ್ತವೆ. ವ್ಯಕ್ತಿವಾದ ಮತ್ತು ಅದರ ಸ್ವರೂಪವನ್ನು ನೋಡುವುದು ಅಂದರೆ ಈ ಕಾರಣದಿಂದ ಅವನ ವ್ಯಕ್ತಿತ್ವ ಮತ್ತು ಅವನ ಚರಿತ್ರೆಯ ಹಿನ್ನೆಲೆಯನ್ನೂ ನೋಡಬೇಕಾಗುತ್ತದೆ. ಆದರೆ ಇಲ್ಲಿ ಅನೇಕ ಪ್ರಶ್ನೆಗಳು ಬರುತ್ತವೆ. ಅಂದರೆ ವ್ಯಕ್ತಿಯನ್ನು ಒಂದು ಸಮಗ್ರವಾದ ಮತ್ತು ಪ್ರತ್ಯೇಕವಾದ ವ್ಯಕ್ತಿತ್ವ ಎಂದು ಭಾವಿಸಬೇಕಾದ ಅಗತ್ಯವಿದೆಯೇ? ವ್ಯಕ್ತಿ ಮತ್ತು ಅವನ ಜೀವನದ ಪ್ರಶ್ನೆಯನ್ನು ನಾವು ಈವತ್ತು ಯಾವ ರೀತಿಯಲ್ಲಿ ನೋಡಬೇಕು ಎನ್ನುವುದೂ ಮುಖ್ಯವಾದ ಪ್ರಶ್ನೆಯೇ ಆಗುತ್ತದೆ. ವ್ಯಕ್ತಿ ಮತ್ತು ಅವನ ಸಮಸ್ಯೆಯನ್ನು ನಾವು ಈವತ್ತು ನೋಡಬೇಕಾದರೆ ಅದರಲ್ಲಿ ಸಮಾಜ ಮತ್ತು ಅದರ ಅರಿವಿನ ಪ್ರಶ್ನೆಯೇ ಮುಖ್ಯವಾಗಬೇಕಾಗುತ್ತದೆ. ನಾವು ವ್ಯಕ್ತಿ ಮತ್ತು ಅವನ ಸಮಸ್ಯೆಯನ್ನು ನೋಡುವುದು ಮತ್ತು ಗ್ರಹಿಸುವುದರಲ್ಲಿಯೂ ತಪ್ಪುಗಳಿವೆ. ವ್ಯಕ್ತಿ ಮತ್ತು ಅವನ ಅಸ್ತಿತ್ವವನ್ನು ಮಾತ್ರವೇ ನಾವು ಮಾನದಂಡವಾಗಿ ನೋಡಿದರೆ ಅದರ ಅರ್ಥವು ಬೇರೆಯಾಗುತ್ತದೆ. ಮತ್ತು ಅದರಲ್ಲಿ ಅವನನ್ನು ಒಂದು ಪ್ರತ್ಯೇಕ ಘಟಕವಾಗಿ ನೋಡಲಾಗುತ್ತದೆ. ವ್ಯಕ್ತಿ ಮತ್ತು ಅವನ ಚಿಂತನೆಯನ್ನು ಮಾತ್ರವೇ ಬಹಳ ಮುಖ್ಯವೆಂದು ಗಣಿಸಿದರೆ ಅದರ ಅರ್ಥವು ಬೇರೆಯಾಗುತ್ತದೆ. ಮತ್ತು ಅವನ ವ್ಯಕ್ತಿತ್ವವನ್ನು ಸ್ವಯಂಸಂಪೂರ್ಣವಾಗಿದೆ ಎಂದು ಗ್ರಹಿಸಲಾಗುತ್ತದೆ. ವ್ಯಕ್ತಿ ಮತ್ತು ಅವನ ವ್ಯಕ್ತಿತ್ವವನ್ನು ನೋಡಿದರೆ ಅದರ ಸ್ವರೂಪವೂ ಬೇರೆಯಾಗುತ್ತದೆ. ವ್ಯಕ್ತಿ

ಒಂದು ನಿರ್ದಿಷ್ಟವಾದ ಮೌಲ್ಯವನ್ನು ಮಾತ್ರವೇ ಪ್ರಸ್ತುತಪಡಿಸುತ್ತಾನೆ. ಮತ್ತು ಅದು ಬಹಳ ಮುಖ್ಯವೆಂದು ಅವರು ಭಾವಿಸುತ್ತಾರೆ. ವ್ಯಕ್ತಿಯು ತನ್ನದೇ ಆದ ಪಾತ್ರವನ್ನು ವಹಿಸುತ್ತಾನೆ. ಆದರೆ ಅದರಲ್ಲಿ ವ್ಯಕ್ತಿಯನ್ನು ಸಮಾಜದ ಒಂದು ಭಾಗವೆನ್ನುವ ಕಲ್ಪನೆಯೇ ಇಲ್ಲ. ಇಲ್ಲಿ ಗಮನಿಸಬೇಕಾದ ಮತ್ತೊಂದು ಅಂಶವೂ ಇದೆ. ವ್ಯಕ್ತಿ ಮತ್ತು ಅವನ ಮೌಲ್ಯವನ್ನು ಮಾತ್ರವೇ ನೋಡುವವರು ವ್ಯಕ್ತಿ ಮತ್ತು ಅವನ ನಡವಳಿಕೆಯನ್ನು ಮಾತ್ರವೇ ಗಮನಿಸುತ್ತಾರೆ. ಆದರೆ ವ್ಯಕ್ತಿ ಕೇಂದ್ರಿತ ಚಿಂತನೆಯು ಒಂದು ವಿಷಯನಿಷ್ಟವಾದ ಸಂಗತಿಯು ಮಾತ್ರವೇ ಆಗಿದೆ. ವ್ಯಕ್ತಿ ಮತ್ತು ಅವನ ಚಿಂತನೆಯು ಕ್ರಮವು ಮೂಲಭೂತವಾಗಿ ಕೆಲವು ಸಂಗತಿಗಳನ್ನು ಹೇಳುತ್ತವೆ. ಅದು ವ್ಯಕ್ತಿಯ ಕುರಿತಾಗಿ ಕೆಲವು ನಿರೂಪಣೆಯನ್ನು ಮಾಡುತ್ತವೆ. ಮತ್ತು ವ್ಯಕ್ತಿ ಮತ್ತು ಅವನ ಸ್ವಭಾವವನ್ನು ಆಧುನಿಕತೆಯು ಗ್ರಹಿಸಿದ ಕ್ರಮವು ಬೇರೆಯಾಗಿದೆ. ಅದರಲ್ಲಿ ವ್ಯಕ್ತಿಯ ನಿಲುವುಗಳೇ ಪ್ರಧಾನವಾಗುತ್ತದೆ. ಮತ್ತು ಇಲ್ಲಿ ಗಮನಿಸಬೇಕಾದ ಮತ್ತೊಂದು ಅಂಶವೂ ಇದೆ. ವ್ಯಕ್ತಿಯನ್ನು ನೋಡುವಾಗ ಅವನೇ ಅನೇಕ ಸಂಗತಿಗಳ ವಾರಸುದಾರನೆಂದು ಅದು ವಿವರಿಸುತ್ತದೆ. ವಿಷಯನಿಷ್ಟತೆ ಮತ್ತು ವಸ್ತುನಿಷ್ಟತೆಯು ಈ ಚರ್ಚೆಯಲ್ಲಿ ಬೇರೆಯಾಗುತ್ತದೆ. ಮತ್ತು ಸ್ವಾತಂತ್ರ್ಯದ ಪ್ರಶ್ನೆಯನ್ನು ಈ ಸಂಗತಿಗಳು ನೋಡುವ ಕ್ರಮವು ಬೇರೆಯಾಗುತ್ತದೆ. ಮತ್ತು ಇದರಲ್ಲಿ ಸ್ವಾತಂತ್ರ್ಯವನ್ನು ವಿವರಿಸುವ ಕ್ರಮವು ಬೇರೆಯಾಗುತ್ತದೆ. ವಿವರಣೆ ಮತ್ತು ಅದರ ಅರ್ಥವೂ ಇಲ್ಲಿ ನಿರ್ದಿಷ್ಟವಾಗುತ್ತದೆ. ಅಂದರೆ ವ್ಯಕ್ತಿಯನ್ನು ನಾವು ಬರೀ ವಿಷಯನಿಷ್ಟವಾಗಿ ಮಾತ್ರವೇ ನೋಡುವುದು ಅಸಾಧ್ಯ. ಆಧುನಿಕತೆಯು ಸಿದ್ಧಾಂತವನ್ನು ನೋಡುವುದು ಬರೀ ಒಂದು ಗ್ರಹಿಕೆಯ ಕ್ರಮವಾಗಿ ಮಾತ್ರವೇ. ಅದರಲ್ಲಿ ವ್ಯತ್ಯಾಸವಿದೆ. ಇಲ್ಲ. ಇಲ್ಲಿ ನೋಡಬೇಕಾದ ಮತ್ತೊಂದು ಅಂಶವೂ ಇದೆ. ಆಧುನಿಕತೆಯು ಹೇಗೆ ವ್ಯಕ್ತಿಯನ್ನು ಸ್ವೀಕರಿಸುತ್ತದೆ ಎನ್ನುವುದೂ ಬಹಳ ದೊಡ್ಡದಾದ ಪ್ರಶ್ನೆಯಾಗಿದೆ. ಆಧುನಿಕತೆಯಲ್ಲಿ ವ್ಯಕ್ತಿಯ ವಾಹಕನು ಮಾತ್ರವೇ ಆಗಿದ್ದಾನೆ. ಮತ್ತು ಅವನ ವ್ಯಕ್ತಿತ್ವವನ್ನು ಈ ದೃಷ್ಟಿಯಿಂದ ನೋಡಬೇಕಾದ ಕ್ರಮವೂ ಬೇರೆಯಾಗುತ್ತದೆ. ವ್ಯಕ್ತಿ ಮತ್ತು ಅವನ ಗ್ರಹಿಕೆಗಳು ಆಧುನಿಕತೆಯಲ್ಲಿ ಬೇರೆ ಬೇರೆ ಆಗುತ್ತದೆ. ವ್ಯಕ್ತಿಯು ಇದರಲ್ಲಿ ಘಟಕ ಮಾತ್ರವೇ ಆಗಿರುವುದರಿಂದ ಅದರ ಅರ್ಥವೂ ಬೇರೆಯಾಗುತ್ತದೆ. ಆದರೆ ವಾಸ್ತವವಾಗಿ ವ್ಯಕ್ತಿಯು ಬರೀ ಸ್ವಾಯತ್ತವೆನ್ನಬಹುದಾದ ಸಂಗತಿಯು ಅಲ್ಲ. ವ್ಯಕ್ತಿಯು ಅರೆ ಸಾಮಾಜಿಕನೂ ಆಗಿರುತ್ತಾನೆ. ಸಾಮಾಜಿಕ ಗುಂಪು ಮತ್ತು ವ್ಯಕ್ತಿಗೆ ಸಂಬಂಧವು ಇರುತ್ತದೆ. ಮತ್ತು ವ್ಯಕ್ತಿಯು ಗುಂಪಿನಿಂದ ಅನೇಕವನ್ನು ಪಡೆಯುತ್ತಾನೆ. ಆದ್ದರಿಂದ ವ್ಯಕ್ತಿ ಮತ್ತು ಅವನ ಸಾಧ್ಯತೆಯು ಬೇರೆಯಾಗುತ್ತದೆ. ವ್ಯಕ್ತಿಯನ್ನು ಆಧುನಿಕತೆಯು

ಯಾವ ರೀತಿಯಲ್ಲಿ ನೋಡುತ್ತದೆ ಮತ್ತು ಅದನ್ನು ಹೇಗೆ ಸ್ವೀಕರಿಸುತ್ತದೆ ಎನ್ನುವುದು ಒಂದು ಬಗೆಯ ನಿಲುವು ಆಗಿದ್ದರೆ ವ್ಯಕ್ತಿ ಮತ್ತು ಅವನ ಸಾಧ್ಯತೆಯು ಮತ್ತೊಂದು ರೀತಿಯಲ್ಲಿ ಇರುತ್ತದೆ. ವ್ಯಕ್ತಿಯು ಅವನ ಚರಿತ್ರೆಯನ್ನು ಮತ್ತು ಅವನ ಅಗತ್ಯವನ್ನು ತನಗೆ ಬೇಕಾದ ಕ್ರಮದಲ್ಲಿ ಕಟ್ಟುತ್ತಾನೆ. ಅಸ್ತಿತ್ವವನ್ನು ಉಳಿಸಿಕೊಳ್ಳಲು ಹೋರಾಟವನ್ನು ಮಾಡುತ್ತಾನೆ. ಚರಿತ್ರೆಯು ಬದಲಾಗುತ್ತಾ ಹೋದರೆ ವ್ಯಕ್ತಿಯ ಜೀವನ ಮತ್ತು ಅವನ ಸ್ವಭಾವಗಳೂ ಬದಲಾಗುತ್ತವೆ. ಅಂದರೆ ವ್ಯಕ್ತಿ ಮತ್ತು ಅವನ ಅಗತ್ಯಗಳು ಅನೇಕವನ್ನು ಹೇಳುತ್ತವೆ. ಅವನು ಅದನ್ನು ಸಾಧಿಸಲು ಯತ್ನವನ್ನು ಮಾಡುತ್ತಾನೆ. ಅವನಿಗೆ ಅದು ಹೆಚ್ಚಿನ ಮಹತ್ವದ್ದೂ ಆಗುತ್ತದೆ. ಆದರೆ ವ್ಯಕ್ತಿಯನ್ನು ಸಮಾಜ ಮತ್ತು ಅವನ ವರ್ಗವು ನಿಯಂತ್ರಿಸುತ್ತದೆ. ಅವನ ಜೀವನವನ್ನು ಅದು ನಿರೂಪಿಸುತ್ತದೆ. ವರ್ಗ ಮತ್ತು ವಿಶ್ವಾತ್ಮಕತೆಗೆ ಕೆಲವು ರೀತಿಯ ಸಂಬಂಧವೂ ಇದೆ. ಅದನ್ನು ಹೀಗೆ ಹೇಳಬಹುದು. ವ್ಯಕ್ತಿಯನ್ನು ನಾವು ನೀತಿ ಮತ್ತು ಅವನ ನಡವಳಿಕೆಯನ್ನು ಆಧರಿಸಿಕೊಂಡು ವ್ಯಾಖ್ಯಾನಿಸುತ್ತೇವೆ. ವ್ಯಕ್ತಿ ಮತ್ತು ಅವನ ಸಾಮಾಜಿಕ ವಾಸ್ತವವು ಈ ದೃಷ್ಟಿಯಿಂದ ಬಹಳ ಮುಖ್ಯವಾದ ಸಂಗತಿಯೂ ಆಗಿದೆ. ರೊಮಾಂಟಿಕ್ ಯುಗವು ವ್ಯಕ್ತಿಯನ್ನು ನೋಡಿದ ಮತ್ತು ಅದನ್ನು ಚಿತ್ರಿಸಿದ ಕ್ರಮವು ಬೇರೆಯಾಗಿದೆ. ವ್ಯಕ್ತಿಯನ್ನು ಅದು ಉದಾರವಾಗಿಯೂ ನೋಡಿತು. ಅದರಲ್ಲಿ ನೈತಿಕತೆಯು ಹೆಚ್ಚು ಮುಖ್ಯ. ದೇವರನ್ನು ರೊಮಾಂಟಿಕ್ ಯುಗವು ಸೃಷ್ಟಿಕರ್ತ ಮತ್ತು ಜೀವನವನ್ನು ಕೈಹಿಡಿದು ನಡೆಸುವವನು ಎಂದು ಭಾವಿಸುತ್ತದೆ. ಅದರೆ ಇಲ್ಲಿ ಮತ್ತೆ ಅದು ಬಾಹ್ಯ ಮತ್ತು ಅಂತರಂಗ ಶುದ್ಧಿಯನ್ನು ಮಾತ್ರವೇ ಹೇಳುತ್ತದೆ. ಜನಾಂಗ ಮತ್ತು ವಿಶ್ವಾತ್ಮಕತೆಯನ್ನು ಅದು ಹೇಳುವ ಕ್ರಮಗಳು ಬೇರೆಯಾಗಿವೆ. ಅಂದರೆ ವ್ಯಕ್ತಿಯನ್ನು ರೊಮಾಂಟಿಕ್ ಯುಗವು ಗ್ರಹಿಸುವ ಕ್ರಮವು ಈ ದೃಷ್ಟಿಯಿಂದ ಬೇರೆಯಾಗುತ್ತದೆ. ಜನಾಂಗ ಮತ್ತು ಲೋಕವನ್ನು ಅದು ಗ್ರಹಿಸುವುದು ಈ ದೃಷ್ಟಿಯಿಂದ ಬೇರೆಯಾಗುತ್ತದೆ. ಆಧುನಿಕತೆಗಿಂತ ಭಿನ್ನವಾದ ಒಂದು ಕ್ರಮವು ಇದರಲ್ಲಿದೆ. ಅದು ಲೋಕವನ್ನು ನೋಡುವುದು ಮತ್ತು ಗ್ರಹಿಸುವುದು ಭಿನ್ನವಾಗಿಯೂ ಹೌದು. ಆದರೆ ವ್ಯಕ್ತಿ ಮತ್ತು ಅವನ ಜೀವನವನ್ನು ನಾವು ನೋಡುವುದು ಅವನ ಸ್ಥಾನಮಾನದ ಹಿನ್ನೆಲೆಯಿಂದ ಮಾತ್ರವೇ. ಅವನ ಚರಿತ್ರೆ ಮತ್ತು ಅವನ ಪರಿಸರವನ್ನು ನಾವು ಅಷ್ಟಾಗಿ ಗಮನಿಸಲು ಹೋಗುವುದೇ ಇಲ್ಲ. ವಾಸ್ತವವಾಗಿ ವ್ಯಕ್ತಿ ಮತ್ತು ಅವನ ಸೌಂದರ್ಯದ ಅಭಿರುಚಿಯನ್ನು ಮಾತ್ರವೇ ರೊಮಾಂಟಿಕರು ಎತ್ತಿ ಹಿಡಿಯುತ್ತಾರೆ. ಅವರಿಗೆ ಅದು ಬಹಳ ಮುಖ್ಯವಾದ ಸಂಗತಿಯ ಹಾಗೆ ಕಾಣುತ್ತದೆ. ಹಾಗೆ ನೋಡುವುದಿದ್ದರೆ ನವೋದಯವನ್ನು ವ್ಯಕ್ತಿ ಮತ್ತು ಅವನ ಸೌಂದರ್ಯವನ್ನು ಕುರಿತು ಹೇಳುವುದು ಭಿನ್ನವಾದ ರೀತಿಯಲ್ಲಿಯೇ.

ಅದರಲ್ಲಿ ವ್ಯತ್ಯಾಸವಿದೆ. ನವೋದಯಕ್ಕೆ ಅತ್ಯಂತ ಮುಖ್ಯವಾದ ಸಂಗತಿಯು ಇರುವುದು ವ್ಯಕ್ತಿ ಮತ್ತು ಅವನ ಸೌಂದರ್ಯದ ಪರಿಕಲ್ಪನೆಯು ಮಾತ್ರವೇ. ಸಾಮಾಜಿಕ ರಚನೆಯನ್ನು ನವೋದಯದವರು ನೋಡುವುದು ಮತ್ತು ಗ್ರಹಿಸುವುದು ಭಿನ್ನವಾದ ಕ್ರಮದಲ್ಲಿಯೂ ಹೌದು. ಕಲಾವಿದರು ಸಮಾಜ ಮತ್ತು ಅದರ ಸ್ವರೂಪವನ್ನು ಹೇಗೆ ನೋಡುತ್ತಾರೆ ಎನ್ನುವುದು ಮೂಲಭೂತವಾಗಿ ಮಹತ್ವದ ಅಂಶವೇ ಆಗುತ್ತದೆ. ಎಡ್ಮಂಡ್ ಬರ್ಕೆಯು ಅದನ್ನು ಸಂವಹನದ ತಂತ್ರಗಾರಿಕೆಗಳು ಎಂದು ಕರೆಯುತ್ತಾನೆ. ಗೋಲ್ಡ್ ಮನ್ ಮಾನವೀಯತೆ ಮತ್ತು ಅದರ ಬದ್ಧತೆಯ ಹಿನ್ನೆಲೆಯಲ್ಲಿ ವಿವರಿಸುತ್ತಾನೆ. ಜನಾಂಗ ಮತ್ತು ಅದರ ಸಹಯೋಗದಲ್ಲಿ ಒಂದು ಖಚಿತತೆಯು ಇರುತ್ತದೆ. ಮತ್ತು ಅದರಲ್ಲಿ ಸಹಯೋಗವು ಅತ್ಯಂತ ಮಹತ್ವದ ಪಾತ್ರವನ್ನು ವಹಿಸುತ್ತದೆ ಎನ್ನುವುದನ್ನು ಅವನು ಹೇಳುತ್ತಾನೆ ಆದರೆ ವ್ಯಕ್ತಿವಾದಕ್ಕೆ ಒಂದು ಚರಿತ್ರೆಯು ಇದೆ ಎನ್ನುವುದನ್ನು ಅವನು ಪ್ರತಿಪಾದಿಸುತ್ತಾನೆ. ರೊಮಾಂಟಿಕರಲ್ಲಿ ಅತ್ಯಂತ ವಿಸ್ತಾರವಾದ ಒಂದು ನಂಬಿಕೆ ಮತ್ತು ವಿಶ್ವಾತ್ಮಕತೆಯು ಇರುತ್ತದೆ. ಸಮಗ್ರತೆ ಮತ್ತು ಅದರ ಕುರಿತಾದ ಕೆಲವು ಮೌಲ್ಯಗಳು ಅದರಲ್ಲಿ ಇರುತ್ತದೆ. ಸಾಮೂಹಿಕವಾದ ಒಂದು ಪ್ರಜ್ಞೆಯನ್ನು ಅದು ಹೇಳುತ್ತಾ ಬಂದಿದೆ. ಈ ಅರ್ಥದಲ್ಲಿ ಅದರ ಅರ್ಥವೂ ಬೇರೆಯಾಗುತ್ತದೆ. ಸಾಹಿತ್ಯವು ಸಮಾಜ ಮತ್ತು ಸಾಮಾಜಿಕ ಸಂಗತಿಗಳನ್ನು ಅತ್ಯಂತ ವಿಶಿಷ್ಟವಾಗಿ ಹೇಳುತ್ತದೆ ಎನ್ನುವುದನ್ನು ರೊಮಾಂಟಿಕ್ ಪಂಥವು ಒಪ್ಪುತ್ತದೆ. ನವ್ಯವು ವ್ಯಕ್ತಿ ಮತ್ತು ಯಾಂತ್ರಿಕತೆಯನ್ನು ನೋಡುವುದು ಭಿನ್ನವಾಗಿ. ಅದಕ್ಕೇ ಅದರಲ್ಲಿ ಜೀವನ ಮತ್ತು ಅದರ ದೃಷ್ಟಿಕೋನವು ಬೇರೆಯಾಗುತ್ತದೆ. ವ್ಯಕ್ತಿಯನ್ನು ಅದು ಹೇಳುವುದು ಭಿನ್ನವಾದ ನೆಲೆಯಲ್ಲಿಯೂ ಹೌದು. ಅದರಲ್ಲಿ ಬರುವ ನಿರಾಶೆಯು ಕೂಡಾ ಒಂದು ಸನ್ನಿವೇಶವನ್ನು ಹೇಳುತ್ತದೆ. ನವ್ಯವು ದೇವರಿಲ್ಲದ ಜಗತ್ತನ್ನು ಹೇಳುತ್ತದೆ. ವ್ಯಕ್ತಿ ಮತ್ತು ಅವನ ಚಿಂತನೆಗಳನ್ನು ಅದು ಹೆಚ್ಚು ಪ್ರಗತಿಪರವಾದ್ದು ಎಂದು ಹೇಳುತ್ತದೆ. ತಂತ್ರ ಮತ್ತು ಅದರ ಪ್ರಯೋಗವು ಅದರಲ್ಲಿ ಹೆಚ್ಚು ಪ್ರಭಾವಶಾಲಿಯೂ ಆಯಿತು. ತಾಂತ್ರಿಕತೆ ಮತ್ತು ಅದರ ಪರಿಣಾಮವನ್ನು ನಾವು ನವ್ಯದಲ್ಲಿ ಕಾಣುತ್ತೇವೆ. ತಂತ್ರಜ್ಞಾನ ಮತ್ತು ಅದರ ಕೌಶಲವು ಅವರಿಗೆ ಹೆಚ್ಚು ಮುಖ್ಯವಾಯಿತು. ತಾಂತ್ರಿಕತೆ ಮತ್ತು ಅದರ ಸ್ವರೂಪವು ಅತ್ಯಂತ ಹೆಚ್ಚು ಪ್ರಭಾವವನ್ನು ಬೀರಿತು. ತಾಂತ್ರಿಕತೆಯು ಅತ್ಯಂತ ಮುಖ್ಯವೆಂದು ಆ ಲೇಖಕರಿಗೆ ಅನಿಸಿತು. ವ್ಯಕ್ತಿತ್ವ ಮತ್ತು ಪರಕೀಯತೆಯನ್ನು ಅವರು ನೋಡಿದ ಮತ್ತು ಗ್ರಹಿಸಿದ ಕ್ರಮಗಳು ಬೇರೆಯಾಗಿವೆ. ನವ್ಯದಲ್ಲಿ ಪರಕೀಯತೆಯು ಅತ್ಯಂತ ಸಾಧ್ಯತೆಯನ್ನು ತೆರೆಯಿತು. ವ್ಯಕ್ತಿ ಮತ್ತು ಅವನ ಸ್ವಂತಿಕೆಯೇ ಅದರಲ್ಲಿ ಬಹಳ ಮುಖ್ಯ. ಪ್ರತ್ಯೇಕತೆಯು ಮಾತ್ರವೇ ವ್ಯಕ್ತಿ ಮತ್ತು ಅವನ ಸ್ವಾತಂತ್ರ್ಯವೆಂದು ಅದು

ಹೇಳಿತು. ಬೇರೆ ಯಾವುದೇ ರೀತಿಯ ಅತಿಮಾನುಷವಾದ ಒಂದು ಸುಂದರ ಜಗತ್ತು ಇದೆ ಎನ್ನುವುದನ್ನು ನವ್ಯವು ಒಪ್ಪುವುದೂ ಇಲ್ಲ. ಅದು ಯಾವುದು ನಿಜವಾದ ಘಟನೆ ಅಥವಾ ವಸ್ತು ಎನ್ನುವುದು ಇದೆಯೋ ಅದನ್ನು ಮಾತ್ರವೇ ಸ್ವೀಕರಿಸುತ್ತದೆ. ಘಟನೆ ಮತ್ತು ಅದರ ಮೌಲ್ಯಮಾಪನವು ಅದಕ್ಕೆ ಮುಖ್ಯ. ಆದರೆ ಕನ್ನಡದಲ್ಲಿ ದಲಿತ ಸಾಹಿತ್ಯವು ಬಂದಾಗ ಅದರ ಚಹರೆಗಳು ಬೇರೆಯಾದವು. ದಲಿತ ಮತ್ತು ಅದರ ನಂಬಿಕೆಗಳು ಭಿನ್ನವಾದವು. ಅದರ ತಾತ್ವಿಕತೆಯೇ ಈ ದೃಷ್ಟಿಯಿಂದ ಬೇರೆಯಾಗಿದೆ. ವಾಸ್ತವವಾಗಿ ವ್ಯಕ್ತಿವಾದ ಮತ್ತು ಅದರ ನಂಬಿಕೆಗಳು ಭಿನ್ನವಾಗುತ್ತದೆ. ಆಧುನಿಕ ಬಂಡವಾಳವಾದದಲ್ಲಿ ವ್ಯಕ್ತಿವಾದವು ಹೆಚ್ಚಿನ ಅವಕಾಶವನ್ನು ಪಡೆಯುತ್ತದೆ. ಆದರೆ ಅದು ಮಾತ್ರವೇ ಮುಖ್ಯವಾಗಬೇಕು ಎಂದು ಅರ್ಥವಲ್ಲ. ಅನೇಕ ಚರಿತ್ರೆಕಾರರು ಇದನ್ನು ನೋಡುವುದು ಒಂದು ವಿವರಣೆಯಾಗಿ ಮಾತ್ರವೇ. ಆದರೆ ವಿವರಣೆಯು ಮಾತ್ರವೇ ಸಾಕಾಗುವುದೇ ಇಲ್ಲ. ಅದರಲ್ಲಿ ಬರೀ ಘಟನೆ ಮತ್ತು ಅದರ ವಿವರಣೆಯು ಸಾಕಾಗುತ್ತದೆ ಎಂದು ಭಾವಿಸಬೇಕಾಗಿಯೂ ಇಲ್ಲ. ಚರಿತ್ರೆ ಮತ್ತು ಅದರ ಹಿಂದೆ ಇರುವ ತತ್ವಜ್ಞಾನವನ್ನು ನೋಡಿದರೆ ಈ ಸಂಗತಿಗಳು ನಮಗೆ ತಿಳಿಯುತ್ತದೆ. ಚರಿತ್ರೆ ಮತ್ತು ಅದರ ಹಿಂದೆ ಇರುವ ತತ್ವಜ್ಞಾನವನ್ನು ನಾವು ಅರ್ಥ ಮಾಡಿಕೊಳ್ಳುವುದು ಅತ್ಯಂತ ಅಗತ್ಯವಾಗಿದೆ. ಮತ್ತು ಅದರ ಸ್ವರೂಪವೇ ನಮಗೆ ಮುಂದೆ ಹೋಗಲು ದಾರಿಯನ್ನು ಹೇಳುತ್ತವೆ. ಅದರಲ್ಲಿ ನಿಸರ್ಗ ಮತ್ತು ಮನುಷ್ಯರ ನಡುವೆ ಇರುವ ಸಂಬಂಧ ಮತ್ತು ಅದರ ಸಂಘರ್ಷಗಳ ವಿವರಣೆಗಳೂ ನಮಗೆ ದೊರೆಯುತ್ತವೆ. ಆಲೋಚನೆ ಮತ್ತು ಅದರ ಹಿಂದೆ ಇರುವ ತತ್ವವು ಮೂಲಭೂತವಾಗಿ ವಿಶಿಷ್ಟವೂ ಹೌದು. ನಿಸರ್ಗ ಮತ್ತು ವ್ಯಕ್ತಿಯ ನಡುವಣ ಸಂಬಂಧವನ್ನು ನಾವು ಇತ್ಯಾತ್ಮಕವಾಗಿಯೂ ನೋಡಬೇಕಾಗುತ್ತದೆ. ವ್ಯಕ್ತಿ ಮತ್ತು ಅವನ ಜ್ಞಾನವು ಬೇರೆ ಬೇರೆ ವಿಧದಲ್ಲಿ ಬೆಳೆದು ಬಂದಿದೆ. ಅದನ್ನು ನಾವು ನೋಡುವ ಮತ್ತು ಗ್ರಹಿಸುವ ಕ್ರಮವೂ ಬೇರೆಯಾಗಬೇಕಾಗುತ್ತದೆ. ಪ್ರಜ್ಞೆ ಮತ್ತು ಅದರ ರಚನೆಯು ಈ ಕಾರಣದಿಂದ ಬೇರೆ ಬೇರೆ ರೀತಿಯಲ್ಲಿ ಆಗಿರುತ್ತದೆ. ವಿಜ್ಞಾನ ಮತ್ತು ತಂತ್ರಜ್ಞಾನವು ಈವತ್ತು ಅತ್ಯಂತ ಮಹತ್ವದ ಜಾಗವನ್ನು ಪಡೆದುಕೊಂಡಿದೆ. ಮತ್ತು ಅದರ ಪರಿಣಾಮವಾಗಿ ಮನುಷ್ಯ ಮತ್ತು ಅವನ ಜೀವನ ಕ್ರಮವು ಬದಲಾಗಿದೆ. ಅದರ ಅನುಭವವು ನಮಗೆ ನೇರವಾಗಿಯೂ ಆಗಿದೆ. ಮನುಷ್ಯ ಮತ್ತು ಅವನ ತಿಳುವಳಿಕೆಗಳಲ್ಲಿ ಕೇವಲ ಪ್ರಮೇಯ ಮಾತ್ರವೇ ಇರುವುದಿಲ್ಲ..ಯಾವುದನ್ನು ನಾವು ತಿಳುವಳಿಕೆ ಎಂದು ಹೇಳುತ್ತೇವೆಯೋ ಅದರಲ್ಲಿ ಕೇವಲ ಕೆಲವು ನಿಯಮವು ಮಾತ್ರವೇ ಇರುತ್ತದೆ ಎಂದು ಭಾವಿಸಬೇಕಾದ ಅಗತ್ಯವೂ ಇಲ್ಲ. ಅದರಲ್ಲಿ ಅನೇಕ

ಸಂಗತಿಗಳು ಸೇರಿಕೊಂಡು ಇರುತ್ತದೆ. ಮತ್ತು ಅದರಲ್ಲಿ ವೈಜ್ಞಾನಿಕತೆ, ಉತ್ಪಾದನೆಗಳು, ಜೀವನ ಕ್ರಮಗಳು, ಸಮಾಜ, ಚರಿತ್ರೆಗಳು ಸೇರಿಕೊಂಡಿರುತ್ತವೆ. ಮನುಷ್ಯ ಮತ್ತು ಅವನ ಜ್ಞಾನವನ್ನು ನಾವು ಅಷ್ಟು ಸುಲಭವಾಗಿ ವರ್ಗೀಕರಿಸಲು ಬರುವುದೂ ಇಲ್ಲ. ರಚನೆಯೂ ಕೂಡಾ ಇದೇ ರೀತಿಯಲ್ಲಿ ಬರುತ್ತದೆ. ಮತ್ತು ಅದನ್ನು ನೋಡುವಾಗ ಅದರ ಸಾಧ್ಯತೆಯನ್ನು ಬೇರೆ ಮಾಡಿ ನೋಡಬೇಕಾಗುತ್ತದೆ. ಅದರಲ್ಲಿ ಅನುಭವವು ಇದೆ. ಆಲೋಚನೆಗಳು ಇರುತ್ತವೆ. ಮತ್ತು ಅದನ್ನು ನೋಡಿದರೆ ಅದರ ಅರ್ಥವನ್ನು ನಮ್ಮ ಗುಣ ಮತ್ತು ನಡತೆಯ ಹಿನ್ನೆಲೆಯಲ್ಲಿಯೂ ನೋಡಬೇಕಾಗುತ್ತದೆ. ವಾಸ್ತವವಾಗಿ ಇದನ್ನು ನಾವು ಈವತ್ತು ಬೇರೆ ರೀತಿಯಲ್ಲಿಯೂ ನೋಡಬೇಕಾಗುತ್ತದೆ. ಆದರೆ ಇಲ್ಲಿ ಗಮನಿಸಬೇಕಾದ ಮತ್ತೆ ಕೆಲವು ಅಂಶಗಳೂ ಇವೆ. ಅದನ್ನು ನೋಡಬೇಕಾಗುತ್ತದೆ. ಲೇಖಕನು ಯಾವುದನ್ನು ಹೇಳುತ್ತಾನೆಯೋ ಅದು ಅವನ ಸ್ವತ್ತು ಮಾತ್ರವೇ ಅಲ್ಲ; ಅದರಲ್ಲಿ ಸಮಾಜದ ಅಂಶಗಳೂ ಸೇರುತ್ತವೆ. ಆದರೆ ಆಧುನಿಕತೆಯು ವ್ಯಕ್ತಿಯನ್ನು ನೋಡುವುದು ಮತ್ತು ಗ್ರಹಿಸುವುದು ಬೇರೆ ಕ್ರಮದಲ್ಲಿ. ಮತ್ತು ವ್ಯಕ್ತಿಯನ್ನು ಹೇಳುವ ಕ್ರಮವು ಬೇರೆಯಾಗಿದೆ. ಅವನನ್ನು ಅತ್ಯಂತ ಮಹತ್ವದ ಭಾಗವೆಂದು ಹೇಳುವುದು ಮುಖ್ಯವಾಗುತ್ತದೆ. ಅಂದರೆ ವ್ಯಕ್ತಿಯನ್ನು ಒಂದು ಘಟಕವೆಂದು ಹೇಳುವುದರಿಂದ ಅದನ್ನು ನೋಡುವ ಮತ್ತು ಗ್ರಹಿಸುವ ಕ್ರಮವು ಬೇರೆಯಾಗುತ್ತದೆ. ಲೇಖಕ ಮತ್ತು ಅವನ ಗ್ರಹಿಕೆಯು ಯಾವ ರೂಪದಲ್ಲಿ ಇರುತ್ತದೆ ಮತ್ತು ಅದರ ಸ್ವರೂಪವು ಯಾವ ಬಗೆಯದು ಎನ್ನುವುದು ಬಹಳ ಮುಖ್ಯವಾಗುತ್ತದೆ. ವ್ಯಕ್ತಿಯನ್ನು ಬರೀ ಒಂದು ನೆಲೆಯಲ್ಲಿ ಮಾತ್ರವೇ ನೋಡುವುದು ಮತ್ತು ಅದೇ ರೀತಿಯಲ್ಲಿ ಗ್ರಹಿಸುವುದು ಸರಿಯಾದ ಕ್ರಮವು ಅಲ್ಲ. ಅದನ್ನು ಮತ್ತೆ ಭಿನ್ನವಾಗಿಯೂ ನೋಡಬೇಕಾಗುತ್ತದೆ. ಲೇಖಕ ಮತ್ತು ಅವನ ಜೀವನವೂ ಹೇಗೆ ಒಂದು ಕೃತಿಯಲ್ಲಿ ಪಾತ್ರವನ್ನು ವಹಿಸುತ್ತದೆ ಮತ್ತು ಅದರ ಸ್ವರೂಪವು ಯಾವ ಬಗೆಯದು ಎಂದು ನೋಡಬೇಕಾಗುತ್ತದೆ. ಇಲ್ಲಿ ಲೇಖಕ ಮತ್ತು ಅವನ ಜೀವನ ಹಾಗೂ ಅವನ ಯೋಚನೆಯು ಅತ್ಯಂತ ಮಹತ್ವದ ಪಾತ್ರವನ್ನು ವಹಿಸುತ್ತದೆ ಎನ್ನುವುದರಲ್ಲಿ ಎರಡು ಮಾತು ಇಲ್ಲ. ಅದು ಜೀವನ ಮತ್ತು ಅವನ ಅನುಭವ ಮತ್ತು ಯೋಚನೆಯನ್ನು ಹೇಳುತ್ತದೆ. ಅದರಲ್ಲಿ ಅವನ ವ್ಯಕ್ತಿತ್ವವನ್ನು ಭಿನ್ನವಾಗಿಯೂ ಹೇಳುತ್ತದೆ. ಬರಹವೂ ಒಂದು ಬಗೆಯಲ್ಲಿ ನಿರ್ದಿಷ್ಟವಾದ ಕ್ರಿಯೆಯು ಆಗಿದೆ. ಯಾಕೆ ಬರೆಯುಲು ನಮಗೆ ಶಕ್ತಿಯು ಇರುತ್ತದೆ ಅಥವಾ ಯಾಕೆ ನಮಗೆ ಓದುವ ಮತ್ತು ಕಲ್ಪಿಸುವ ಶಕ್ತಿಯು ಇರುತ್ತದೆ ಎಂದು ಯೋಚಿಸಬೇಕು ಹೀಗಾಗಿ ಬರಹ ಮತ್ತು ಅದರ ಸನ್ನಿವೇಶವು ಬರೀ ಆಕಸ್ಮಿಕವಾದ ಚಟುವಟಿಕೆಯು ಅಲ್ಲ. ಅದರಲ್ಲಿ ಭಿನ್ನತೆ ಇದೆ. ಲೇಖಕ ಮತ್ತು ಅವನ ಟಿಪ್ಪಣಿಯೂ

ಒಂದು ಹಂತದಲ್ಲಿ ಸಹಾಯವನ್ನು ಮಾಡುವುದು ಸಾಧ್ಯ. ಪದಗಳು, ಅದರ ಜೋಡಣೆ, ಅದರ ಅಕ್ಷರದ ಸ್ವರೂಪ, ಅದರ ವಿಶಿಷ್ಟವಾದ ಅರ್ಥ, ಸಂಯೋಜನೆ ವಿಶಿಷ್ಟವಾದ ಪರಿಣಾಮವನ್ನು ಬೀರುತ್ತದೆ ಎಂದು ಫಾಸ್ಕಲ್ ಹೇಳುತ್ತಾನೆ. ಪದಗಳು ಕೂಡಾ ಸಂಕಥನವನ್ನು ಹೇಳುತ್ತದೆ. ಮತ್ತು ಅದರಲ್ಲಿ ವಿವಿಧ ರೀತಿಯ ಸಂಬಂಧ ಮತ್ತು ಅದರ ಚಹರೆಗಳೂ ಇರುತ್ತವೆ. ಹಾಗೆ ನೋಡುವುದಿದ್ದರೆ ವ್ಯಕ್ತಿ ಮತ್ತು ಅವನ ಸ್ವಭಾವವು ಅವನ ಮಾತುಗಳಲ್ಲಿ ವ್ಯಕ್ತವಾಗುತ್ತದೆ. ನಿರ್ದಿಷ್ಟವಾದ ಸನ್ನಿವೇಶ ಮತ್ತು ಸಂದರ್ಭಗಳು ವ್ಯಕ್ತಿಯ ನಡೆಯನ್ನು ನಿರ್ಧರಿಸುತ್ತದೆ. ಅದು ಕೆಲವು ಬಗೆಯ ಚಟುವಟಿಕೆಯನ್ನು ರೂಪಿಸುತ್ತದೆ. ದುರಂತ ನಾಟಕಗಳಲ್ಲಿ ವ್ಯಕ್ತಿ ಮತ್ತು ಅವನ ದುರಂತವು ಮಾತ್ರವೇ ಮುಖ್ಯವಾಗುತ್ತದೆ. ಮತ್ತು ಅದರಲ್ಲಿ ವ್ಯಕ್ತಿಯನ್ನು ನೋಡುವ ಮತ್ತು ಗ್ರಹಿಸುವ ಕ್ರಮಗಳು ಬೇರೆಯಾಗುತ್ತದೆ. ವ್ಯಕ್ತಿಯು ದುರಂತವು ಅತ್ಯಂತ ಮುಖ್ಯವಾಗುತ್ತದೆ. ವ್ಯಕ್ತಿಯು ಅದರಲ್ಲಿ ಮುಖ್ಯ. ದುರಂತ ಎನ್ನುವುದು ಮೂಲಭೂತವಾಗಿ ಕೆಲವು ಪ್ರಮೇಯಗಳನ್ನು ಇಟ್ಟು ಕೊಂಡಿವೆ. ಮತ್ತು ಅದರಲ್ಲಿ ಸ್ವಲ್ಪ ಮಟ್ಟಿಗೆ ಆಧ್ಯಾತ್ಮಿಕತೆಯು ಸೇರಿದೆ. ಅದನ್ನು ಈ ದೃಷ್ಟಿಯಿಂದ ಬೇರೆಯಾಗಿಯೂ ನೋಡಬೇಕಾಗುತ್ತದೆ. ಅದು ವ್ಯಕ್ತಿ ಮತ್ತು ಸ್ವಭಾವವನ್ನು ಮಾತ್ರವೇ ಕೇಂದ್ರ ಮಾಡಿಕೊಂಡಿದೆ. ಮಧ್ಯಯುಗದ ಅನೇಕ ನಂಬಿಕೆಗಳನ್ನು ಆಧುನಿಕ ಯುಗವು ಬದಲು ಮಾಡಿದೆ. ಮತ್ತು ಅದರ ಸ್ವರೂಪಗಳಲ್ಲಿ ವ್ಯತ್ಯಾಸವೂ ಇದೆ. ಆಧುನಿಕ ಯುಗದ ಮನುಷ್ಯನು ಈಗ ತನ್ನ ವ್ಯಾಖ್ಯೆಗಳನ್ನು ಬದಲು ಮಾಡಿದ್ದಾನೆ. ಅವನ ಚಹರೆಗಳು ಬದಲಾಗಿವೆ. ಈ ದೃಷ್ಟಿಯಿಂದ ಆಧುನಿಕರದ್ದು ಬೇರೆ ದೃಷ್ಟಿಕೋನ, ಅದರಲ್ಲಿಯೂ ರೊಮಾಂಟಿಕರು ಜೀವನ ಮತ್ತು ಅದರ ಆದರ್ಶಗಳನ್ನು ನೋಡುವ ಮತ್ತು ಗ್ರಹಿಸುವ ಕ್ರಮವು ಬೇರೆಯಾಗಿದೆ. ಅದರಲ್ಲಿ ತಾರತಮ್ಯಗಳೂ ಇವೆ. ವ್ಯಕ್ತಿ ಮತ್ತು ಅವನ ಆದರ್ಶಗಳು ಬದಲಾದಾಗ ಅದರ ಸ್ವರೂಪದಲ್ಲಿ ವ್ಯತ್ಯಾಸವೂ ಆಗುತ್ತದೆ. ರೊಮಾಂಟಿಕರು ಲೋಕವನ್ನು ನೋಡುವುದು ಮತ್ತು ಗ್ರಹಿಸುವುದು ಬೇರೆ ರೀತಿಯಿಂದಲೂ ಹೌದು. ವ್ಯಕ್ತಿಯನ್ನು ನೋಡುವುದು ಮತ್ತು ಅವನನ್ನು ಒಂದು ಕೇಂದ್ರಕ್ಕೆ ತರುವುದು ಇಲ್ಲಿ ಮುಖ್ಯವಾಗುತ್ತದೆ. ವ್ಯಕ್ತಿ ಮತ್ತು ಅವನ ರೀತಿಯು ಅದರಲ್ಲಿ ಬದಲಾಗುತ್ತದೆ. ವ್ಯಕ್ತಿಯನ್ನು ಉದಾರತೆಯಿಂದ ನೋಡಲಾಗುತ್ತದೆ. ಮತ್ತು ಅವನ ಆದರ್ಶಗಳನ್ನು ಅತ್ಯಂತ ಗೌರವದಿಂದ ಕಾಣಲಾಗುತ್ತದೆ. ಆದರೆ ವ್ಯಕ್ತಿ ಮತ್ತು ಅವನ ಸಾಧ್ಯತೆಯನ್ನು ನಾವು ಯಾವ ರೀತಿಯಲ್ಲಿ ನೋಡುತ್ತೇವೆ ಮತ್ತು ಗ್ರಹಿಸುತ್ತೇವೆ ಎನ್ನುವುದು ಮುಖ್ಯ. ಇಲ್ಲಿ ಗಮನಿಸಬೇಕಾದ ಮತ್ತೊಂದು ಅಂಶವೂ ಇದೆ. ಅದು ವ್ಯಕ್ತಿಯನ್ನು ವ್ಯಾಖ್ಯಾನಿಸುವ ಕ್ರಮವನ್ನು ಅವಲಂಬಿಸಿದೆ. ಅದರಲ್ಲಿ ಬಹಳ ಮುಖ್ಯವಾದ್ದು ವ್ಯಕ್ತಿಯನ್ನು ಗುರುತಿಸುವ

ಕ್ರಮ. ವ್ಯಕ್ತಿಯನ್ನು ಬರೀ ಒಂದು ಘಟಕವೆಂದು ಗುರುತಿಸಿದರೆ ಅದರ ಸಾಧ್ಯತೆಯು ಬೇರೆಯಾಗುತ್ತದೆ. ಅದರ ಅರ್ಥವೂ ಭಿನ್ನವಾಗುತ್ತದೆ. ಆಧುನಿಕತೆಯು ವ್ಯಕ್ತಿಯನ್ನು ಬರೀ ಒಂದು ಧರ್ಮದ ಪಾಲನೆಯನ್ನು ಮಾಡುವವನು ಎಂದು ಹೇಳುವುದೇ ಇಲ್ಲ. ಅದರಲ್ಲಿ ಅದರ ವ್ಯಾಖ್ಯೆಯು ಬೇರೆಯಾಗುತ್ತದೆ. ರೊಮಾಂಟಿಕರ ಆದರ್ಶವು ವ್ಯಕ್ತಿಯನ್ನು ಗ್ರಹಿಸುವ ಕ್ರಮವು ಬೇರೆಯಾಗಿದೆ. ಅದರಲ್ಲಿ ಅದ ಅರ್ಥವೂ ಭಿನ್ನವಾಗುತ್ತದೆ. ವ್ಯಕ್ತಿಯನ್ನು ಅತ್ಯಂತ ಸಾಚಾ ಎಂದು ಅದು ಹೇಳುತ್ತದೆ. ಅದರ ಅರ್ಥವೂ ಬೇರೆಯಾಗುತ್ತದೆ. ಅದರಲ್ಲಿ ವ್ಯಕ್ತಿಯನ್ನು ಗ್ರಹಿಸುವ ಕ್ರಮದಲ್ಲಿ ಆದರ್ಶವು ಮಾತ್ರವೇ ಬಹಳ ಮುಖ್ಯ. ಅದರಲ್ಲಿ ವ್ಯಕ್ತಿಯನ್ನು ನೋಡುವ ಮತ್ತು ಅದನ್ನು ಗ್ರಹಿಸುವ ಕ್ರಮವೂ ಭಿನ್ನವಾಗುವುದು ಅದರ ನಿರೂಪಣೆಯಲ್ಲಿ ಕಾಣಿಸುತ್ತದೆ. ವ್ಯಕ್ತಿ ಮತ್ತು ಅವನ ಆದರ್ಶವು ಅದರಲ್ಲಿ ಬಹಳ ಮುಖ್ಯವೂ ಆಗಿದೆ. ಮನುಷ್ಯನ ಹೊಸದಾದ ಘನತೆಯು ಎದ್ದು ಕಾಣಿಸುತ್ತದೆ. ವ್ಯಕ್ತಿಯನ್ನು ಅದು ಗ್ರಹಿಸುವಲ್ಲಿ ಇರುವ ಮತ್ತೊಂದು ಅಂಶವೆಂದರೆ ಉದಾರತೆಯೊಂದಿಗೆ ಬರುವ ವಿವರಣೆಗಳು. ಅವನು ಅನ್ಯಾಯವನ್ನು ಮಾಡಬಾರದು ಮತ್ತು ಅದರಲ್ಲಿ ಅವನು ಘನತೆಯನ್ನು ಹೇಳಬೇಕು. ಆದ್ದರಿಂದ ಮೂಲತಃ ನವೋದಯದಲ್ಲಿ ವ್ಯಕ್ತಿ ಮತ್ತು ಅವನ ಆದರ್ಶಗಳಿಗೆ ಅದರದೇ ಆದ ಆಯಾಮವೂ ಇದೆ. ಧರ್ಮ ಮತ್ತು ವ್ಯಕ್ತಿಯ ಸಂಬಂಧವೂ ಅದರಲ್ಲಿ ಅತ್ಯಂತ ನಿರ್ಣಾಯಕವೂ ಆಗುತ್ತದೆ. ವ್ಯಕ್ತಿ ಮತ್ತು ಅವನ ವರ್ತನೆಗಳು ಹಾಸ್ಯವಾಗುತ್ತದೆ. ಅವನು ದುರಂತವನ್ನೂ ಅಪ್ಪುತ್ತಾನೆ. ವಾಸ್ತವವಾಗಿ ವ್ಯಕ್ತಿ ಮತ್ತು ಅವನ ಜೀವನ ಕ್ರಮವೇ ಮೂಲಭೂತವಾಗಿ ರೊಮಾಂಟಿಕ್ ಪರಂಪರೆಯಲ್ಲಿ ಬೇರೆ ಬೇರೆ ವ್ಯಾಖ್ಯಾನವನ್ನು ಹೇಳುತ್ತದೆ. ಅದರಲ್ಲಿ ವ್ಯಕ್ತಿಯನ್ನು ಅವನ ಜೀವನ ಕ್ರಮದ ಆದರ್ಶದ ಹಿನ್ನೆಲೆಯಲ್ಲಿಯೂ ಹೇಳಲಾಗುತ್ತದೆ. ಹಾಗೆ ನೋಡುವುದಿದ್ದರೆ ಯಾವುದೇ ಸಾಹಿತ್ಯ ಮತ್ತು ಅದರ ರೂಪವು ನಿರ್ಧಾರವಾಗುವುದು ಅದರ ಸಾಮಾಜಿಕವಾದ ಅಗತ್ಯದ ಹಿನ್ನೆಲೆಯಲ್ಲಿಯೂ ಹೌದು. ಲುಕಾಕ್ಸ್ ರೂಪವನ್ನು ಒಂದು ಸಂಕೇತವಾದ ರಚನೆಯೆಂದೂ ಹೇಳುತ್ತಾನೆ. ಅವನ ಪ್ರಕಾರ ಸಾಹಿತ್ಯ ಮತ್ತು ಅದರ ರೂಪವು ಸಮಾಜದ ಅಗತ್ಯವಾಗುತ್ತದೆ. ಅದರಲ್ಲಿ ಅರ್ಥವೂ ಇರುತ್ತದೆ. ಅಂದರೆ ರೊಮಾಂಟಿಕರು ಬಳಸಿಕೊಂಡ ಭಾವಗೀತೆ, ಕಾದಂಬರಿಗಳು, ವಿಮರ್ಶೆಯು ಭಿನ್ನವಾದ ಒಲವನ್ನು ಸೂಚಿಸುತ್ತದೆ. ಒಂದು ಕಾದಂಬರಿಯಲ್ಲಿ ಬಳಕೆಯಾಗುವ ಜನಾಂಗವೂ ಅದರದೇ ಆದ ಅರ್ಥವನ್ನು ಹೇಳುತ್ತದೆ. ಒಂದು ಮಹಾಕಾವ್ಯದಲ್ಲಿಯೂ ಜನಾಂಗವು ಇರುತ್ತದೆ. ಅದರ ಅರ್ಥವೂ ಅದರಲ್ಲಿ ಬೇರೆಯಾಗುತ್ತದೆ. ಕಾದಂಬರಿಯಲ್ಲಿ ವ್ಯಕ್ತಿ ಮತ್ತು ಸಮಾಜವು ಜೊತೆಗೆ ಇರುತ್ತದೆ. ವ್ಯಕ್ತಿ ಮತ್ತು ಅವನ ಜೀವನದ ಕ್ರಮದಲ್ಲಿ ಪಲ್ಲಟವೂ ಬಹಳ

ದೊಡ್ಡದೂ ಹೌದು. ಪುನರುಜ್ಜೀವನ ಮತ್ತು ಅದರ ಅನಂತರದ ಬೆಳವಣಿಗೆಗಳು ಅನೇಕ ರೀತಿಯು ಸಾಹಿತ್ಯವನ್ನು ಹುಟ್ಟುಹಾಕಿದೆ. ವ್ಯಕ್ತಿ ಮತ್ತು ಅವನ ಚಹರೆಗಳು ಆಧುನಿಕ ಯುಗದಲ್ಲಿ ವ್ಯತ್ಯಾಸವೂ ಆಗಿದೆ. ವಾಸ್ತವವಾಗಿ ಆಧುನಿಕ ಯಗವು ವ್ಯಕ್ತಿಯನ್ನು ಅವನ ಅನನ್ಯತೆಯ ಹಿನ್ನೆಲೆಯಲ್ಲಿ ಗ್ರಹಿಸುತ್ತದೆ. ಅದರೊಂದಿಗೆ ಆಧುನಿಕ ಯಗವು ಹುಟ್ಟುಹಾಕಿದ ರೊಮಾಂಟಕ್ ಪರಂಪರೆಯು ಆಧುನಿಕ ಸಮಾಜದ ನಿರ್ದಿಷ್ಟವಾದ ವರ್ಗವನ್ನು ಹೇಳುತ್ತದೆ. ರೊಮಾಂಟಿಕ್ ವ್ಯಕ್ತಿಯು ಮಧ್ಯಮ ವರ್ಗದವನು. ಅವನು ನಿರ್ದಿಷ್ಟವಾದ ವರ್ಗವನ್ನು ಸೂಚಿಸುತ್ತಾನೆ. ಅವನದು ನಿರ್ದಿಷ್ಟವಾದ ಮತ್ತು ಅತ್ಯಂತ ಸುರಕ್ಷಿತವಾದ ಅಕ್ಷರಸ್ಥವಾದ ವರ್ಗವಾಗಿದೆ. ಅವನಿಗೆ ಸ್ವಂತ ಎನ್ನುವುದೂ ಅತ್ಯಂತ ಮುಖ್ಯವಾಗಿದೆ. ಜೀವನದ ಪ್ರೀತಿಯು ಇದೆ. ವ್ಯಕ್ತಿಯು ಜೀವನದ ವಿರೋಧಿಯು ಅಲ್ಲ. ಅವನಿಗೆ ಅವನದೇ ಆದ ಸ್ವಂತಿಕೆ ಮತ್ತು ಕನಸುಗಳೂ ಇದೆ. ಹೊಸದಾಗಿ ಶುರುವಾದ ಒಂದು ವರ್ಗವನ್ನು ಅವನು ಪ್ರತಿನಿಧಿಸುತ್ತಾನೆ. ಅಂದರೆ ಆಗ ವಸಾಹತುಕಾಲದ ಕೆಲವು ವರ್ಗವನ್ನು ಆಧುನಿಕ ರೊಮಾಂಟಿಕ್ ಕವಿಗಳು ಸೂಚಿಸುತ್ತಾರೆ. ಅವರು ಆಗಿನ ಶಿಕ್ಷಣದಿಂದ ಅನೇಕವನ್ನು ಪಡೆದುಕೊಂಡಿದ್ದಾರೆ. ಮತ್ತು ಅವರಿಗೆ ದೇಶ ಮತ್ತು ಅದರ ಅಗತ್ಯವು ಇತ್ತು. ಅವರಿಗೆ ಒಂದು ಕಡೆಯಿಂದ ವಡ್ಸವರ್ತನ ಪ್ರಭಾವವೂ ಇದೆ. ಮತ್ತೊಂದು ಕಡೆಯಿಂದ ಅರವಿಂದರ ಪ್ರಭಾವವೂ ಇದೆ. ಅವರ ಆಯ್ಕೆಗಳು ಕೂಡಾ ಸಂವಾದಿಯಾಗಿದೆ. ಆಲೋಚನೆ ಮತ್ತು ಅದರ ಸ್ವರೂಪದಲ್ಲಿ ಇದನ್ನು ನಾವು ಕಾಣಬೇಕಾಗುತ್ತದೆ. ಅದರಲ್ಲಿ ಹೊಸದಾದ ಕಲ್ಪನೆಯು ಇದೆ. ಅದರಲ್ಲಿ ಅವರದೇ ಆದ ಆಲೋಚನೆಯು ಇದೆ. ಆಲೋಚನೆ ಮತ್ತು ಭಾವನೆಗಳು , ಹಾಗೂ ಉದಾರತೆಗಳು ಸಮನ್ವಯವಾಗುತ್ತದೆ. ಅದರಲ್ಲಿ ವಿಶಿಷ್ಟವಾದ ಮೌಲ್ಯಗಳು ಇವೆ. ಆದರೆ ಕನ್ನಡದ ಅನೇಕ ಕವಿಗಳು ತಮಗೆ ಬೇಕಾದ್ದನ್ನು ಮಾತ್ರವೇ ಬರೆದರು ಎಂದು ಹೇಳುವಂತೆ ಇಲ್ಲ. ಅವರ ಬರಹಗಳಲ್ಲಿ ವ್ಯಕ್ತಿ ಮತ್ತು ಅವನ ಜೀವನದ ದೃಷ್ಟಿಕೋನವು ಒಂದು ಕಾಲದ ಚರಿತ್ರೆಯನ್ನು ಹೇಳುತ್ತವೆ. ಒಂದು ಗುಂಪಿನ ಆವಶ್ಯಕತೆ ಮತ್ತು ಅದರ ಅಗತ್ಯಗಳನ್ನು ಅವರ ಕವಿತೆಗಳು ಹೇಳುತ್ತವೆ. ವ್ಯಕ್ತಿ ಮತ್ತು ವಿಶ್ವದ ಅಗತ್ಯವೇ ಅದರಲ್ಲಿ ಕಾಣಿಸುತ್ತದೆ. ವ್ಯಕ್ತಿ ಮತ್ತು ಅವನ ಅಗತ್ಯಗಳನ್ನು ಅದು ಸೂಚಿಸುತ್ತದೆ. ವ್ಯಕ್ತಿಯು ಹೊಸದಾದ ಜೀವನವನ್ನು ನೋಡುತ್ತಾನೆ ಮತ್ತು ಅದನ್ನು ಅವನು ಹೇಗೆ ಸ್ವೀಕರಿಸುತ್ತಾನೆಯೋ ಅದರ ಅನುಸಾರವಾಗಿಯೂ ಬರೆಯುತ್ತಾನೆ. ಇದು ರೊಮಾಂಟಿಕರ ನಿಲುವುಗಳೂ ಹೌದು. ವೈಯಕ್ತಿಕತೆ ಮತ್ತು ಅದರ ಗ್ರಹಿಕೆಗೆ ಬೇರೆ ಬೇರೆ ಆಯಾಮವೂ ಇದೆ. ವ್ಯಕ್ತಿತ್ವ ಮತ್ತು ಅದರ ಗುರಿಯು ಅದರಲ್ಲಿ ಭಿನ್ನ ಚಹರೆಗಳನ್ನು ಹೇಳುತ್ತವೆ. ರಚನೆಗಳು ಮತ್ತು ಅದರ

ಕುರಿತಾದ ಸಮಾಜ ಜ್ಞಾನವು ಕೂಡಾ ರೊಮಾಂಟಿಕರಲ್ಲಿ ಮುಖ್ಯವಾಗುತ್ತದೆ. ರಚನೆ ಮತ್ತು ಅದರ ಅರ್ಥವೂ ರೊಮಾಂಟಿಕರಲ್ಲಿ ಬೇರೆಯಾಗುತ್ತದೆ. ಜೀವನದ ಅನೇಕ ದೃಷ್ಟಿಕೋನಗಳನ್ನು ಅವುಗಳು ಹೇಳುತ್ತವೆ. ಅಂದರೆ ವ್ಯಕ್ತಿಯು ಸಮಾಜ ಮತ್ತು ಅದರ ಪ್ರಶ್ನೆಯಿಂದ ಹೊರಗಿನವನು ಅಲ್ಲವೆನ್ನುವುದು ನವೋದಯದಲ್ಲಿ ಬಹಳ ಮುಖ್ಯ. ಕವಿಗಳು ಮತ್ತು ಅವರ ಜೀವನದ ವಿಧಾನಕ್ಕೂ ಅವರು ಬರೆದ ಕವಿತೆಗಳಿಗೂ ಸಂಬಂಧವಿದೆ. ಅದರಲ್ಲಿ ವ್ಯಕ್ತಿ ಮತ್ತು ಸಮೂಹವಿದೆ. ನವೋದಯದ ಕವಿತೆಗಳಲ್ಲಿ ವ್ಯಕ್ತಿ ಅವನ ಧಾರ್ಮಿಕವಾದ ನಂಬಿಕೆಗಳು, ಅವನ ಆಲೋಚನೆ, ಅವನ ಹಿಂದೆ ಇರುವ ಸಂಸ್ಥೆಗಳು, ಅವನ ನೈತಿಕ ನಿಲುವುಗಳು ವಿಭಿನ್ನವಾಗಿ ವ್ಯಕ್ತವಾಗುತ್ತವೆ. ಅಂದರೆ ವ್ಯಕ್ತಿಯು ಸಮಾಜ ಮತ್ತು ಅವನ ಜ್ಞಾನದ ಮೂಲಕ ಒಂದು ಸಂಬಂಧವನ್ನು ಸ್ಥಾಪಿಸುತ್ತಾನೆ. ಸಮಾಜಕ್ಕೆ ಇರುವ ನಿಯಮವನ್ನು ಬೇಂದ್ರೆಯವರು ತಿರಸ್ಕಾರ ಮಾಡುತ್ತಿಲ್ಲ. ಅವರು ಅದನ್ನು ಒಂದು ಚೌಕಟ್ಟಿನಲ್ಲಿ ಹೇಳುತ್ತಾರೆ. ಒಂದು ನಿಯಮವು ಇದೆ. ಮತ್ತೊಂದು ಕಡೆಗೆ ಒಂದು ನೈತಿಕತೆಯು ಇದೆ. ಬೇರೊಂದು ಕಡೆಗೆ ಪ್ರಜೆಯಾಗಿ ತಾನು ಮಾಡಬೇಕಾದ ಕರ್ತವ್ಯವೂ ಇದೆ. ಅದು ಪ್ರಜ್ಞೆಯನ್ನು ಹೇಳುತ್ತದೆ. ನಾಗರಿಕವಾದ ನಿಲುವನ್ನು ಹೇಳುತ್ತದೆ. ನವೋದಯ ಕಾಲದ ಕಾದಂಬರಿಗಳು ನೀತಿ ಮತ್ತು ಅಮೂರ್ತವಾದ ಆದರ್ಶವನ್ನು ಹೇಳುತ್ತವೆ. ಅದರಲ್ಲಿ ಕೆಲವು ಹಾಜರಾಗುತ್ತವೆ. ಮತ್ತು ಮತ್ತೆ ಕೆಲವು ಗೈರುಹಾಜರಿಯಾಗುತ್ತವೆ. ಕಾದಂಬರಿಯಲ್ಲಿ ಬರುವ ಧೋರಣೆಗಳು ಸಮಾಜ ಮತ್ತು ಅದರ ಬೆಳವಣಿಗೆಯನ್ನು ಹೇಳುತ್ತವೆ. ಅದರಲ್ಲಿ ಸಮಾಜವು ಒಂದು ಮೌಲ್ಯವನ್ನು ಮಾತ್ರವೇ ಹೇಳಿಕೊಳ್ಳುವುದೂ ಇಲ್ಲ. ಅದು ದೊಡ್ಡದಾದ ಸಮಾಜದೊಂದಿಗೆ ಸಂಬಂಧವನ್ನು ಇಟ್ಟುಕೊಳ್ಳುತ್ತದೆ. ಸಾಹಿತ್ಯವೆನ್ನುವುದು ನಾವು ಭಾಷೆಯ ಮೂಲಕ ನಡೆಸುವ ಅನುಸಂಧಾನ. ಅದು ಒಂದು ಮಾದರಿಯ ಚಟುವಟಿಕೆಯೂ ಹೌದು. ರೊಮಾಂಟಿಕ್ ಪರಂಪರೆಯು ವಾಸ್ತವವಾಗಿ ಒಂದು ರೀತಿಯಲ್ಲಿ ಒಂದು ಭಾವವನ್ನು ಮಾತ್ರವೇ ಹೇಳುತ್ತದೆ. ಅದರಲ್ಲಿ ವ್ಯಕ್ತಿಯು ಯಾವುದನ್ನು ಸೂಚಿಸುತ್ತಾನೆಯೋ ಅದರ ಭಾವಗಳು ಮಾತ್ರವೇ ಮುಖ್ಯವಾಗುತ್ತವೆ. ಇಲ್ಲಿ ಮತ್ತೊಂದು ಅಂಶವನ್ನು ಹೇಳಬೇಕಾಗುತ್ತದೆ. ವ್ಯಕ್ತಿಯ ರೊಮಾಂಟಿಕ್ ಕಲ್ಪನೆಯು ವಾಸ್ತವವವಾಗಿ ಒಂದು ಕ್ಷಣವನ್ನು ಹೇಳುತ್ತದೆ. ಆಯಾಮವೂ ಭಿನ್ನ ಅದರಲ್ಲಿ ಒಂದು ಕ್ಷಣವೆನ್ನುವುದು ಒಂದು ಕಾಲವನ್ನು ಮಾತ್ರವೇ ಸೂಚಿಸುತ್ತದೆ. ಅದರಲ್ಲಿ 'ಆ ನಿಮಿಷ' ಎನ್ನುವುದು ಮತ್ತು 'ಆ ಸೂಚನೆ' ಎನ್ನುವುದು ಮಾತ್ರವೇ ಬಹಳ ಮುಖ್ಯ. ಇಲ್ಲಿ ಮತ್ತೊಂದು ಅಂಶವನ್ನು ನಾವು ಹೇಳಬೇಕಾಗುತ್ತದೆ. ಚಿತ್ರದಲ್ಲಿ ಬರುವ ಒಂದು ಕಲ್ಪನೆಯು ಲ್ಯಾಂಡ್ ಸ್ಕೇಪ್ ಪರಿಕಲ್ಪನೆಯು ನಮಗೆ

ಬಹಳ ಮುಖ್ಯ. ಅದನ್ನು ಸುಂದರವೆಂದು ಹೇಳುತ್ತೇವೆ. ಅದರಲ್ಲಿ ಬರುವ ಸಂಯೋಜನೆಯು ಯಾವುದೇ ಚಲನೆಯನ್ನು ಹೇಳುವುದೂ ಇಲ್ಲ. ಅದರಲ್ಲಿಯೂ ಕಲಾವಿದನು ನೋಡುವ ನೋಟ ಮಾತ್ರವೇ ಮುಖ್ಯವಾಗುತ್ತದೆ. ಲಿರಿಕಲ್ ಕವಿತೆಯೂ ಕೂಡಾ ಒಂದು ದೃಷ್ಟಿಯಿಂದ ಒಂದು ಬಗೆಯ ಲ್ಯಾಂಡ್‌ಸ್ಕೇಪ್. ಅದರಲ್ಲಿ ನಿಸರ್ಗವೂ ಇದೆ. ಅದರಲ್ಲಿ ನೀತಿಯೂ ಇದೆ. ಭಾವಗೀತೆಗಳಲ್ಲಿ ವ್ಯಕ್ತಿ ಮತ್ತು ಅವನ ಭಾವನೆಗಳು ಮಾತ್ರವೇ ಇದೆ. ಅದರಲ್ಲಿ ಅದು ವಿಷಯನಿಷ್ಟವಾದ ಒಂದು ನಿರೂಪಣೆಯೂ ಹೌದು. ಇಲ್ಲಿ ಗಮನಿಸಬೇಕಾದ ಮತ್ತೊಂದು ಅಂಶವೂ ಇದೆ. ಭಾವಗೀತೆಯು ವ್ಯಕ್ತಿ ಮತ್ತು ಅವನ ಕೆಲವು ಸಂಗತಿಗಳನ್ನು ಹೇಳುತ್ತವೆ. ಅದರಲ್ಲಿ ಅವನ ಒಂದು ಕ್ಷಣದ ಭಾವನೆಗಳು ಮಾತ್ರವೇ ಇದೆ. ಭಾವಗೀತೆಗಳು ವ್ಯಕ್ತಿಯ ಕೆಲವು ವಿಷಯಗಳನ್ನು ಮಾತ್ರವೇ ಹೇಳುತ್ತವೆ. ಅದರಲ್ಲಿ ಭಾವನೆ ಮತ್ತು ಅದರ ಸ್ವರೂಪಗಳು ಇತ್ಯಾತ್ಮಕವಾಗಿಯೂ ಇರುತ್ತದೆ. ಅಂದರೆ ವ್ಯಕ್ತಿಯು ಒಂದು ಕ್ಷಣಕ್ಕೆ ಯಾವುದನ್ನು ಕಾಣುತ್ತಾನೆಯೋ ಅದನ್ನು ಮಾತ್ರವೇ ಅವನು ಹೇಳುತ್ತಾನೆ. ಅದರಲ್ಲಿ ಭಾವನೆ ಮತ್ತು ಅದರ ವಿಷಯನಿಷ್ಟವಾದ ಒಂದು ಸಂಗತಿಯು ಮಾತ್ರವೇ ಇರುತ್ತದೆ. ಭಾವಗೀತೆಯು ಹೆಚ್ಚು ಅಭಿವ್ಯಕ್ತಾತ್ಮಕವೂ ಆಗುತ್ತದೆ. ಅದು ನಿಯತಿಯನ್ನು ಒಪ್ಪುತ್ತದೆ. ಅದರಲ್ಲಿ ನಿತ್ಯವೇ ಹೆಚ್ಚು ಮುಖ್ಯ. ನಿತ್ಯವನ್ನು ಅದು ತನ್ನದೇ ಆದ ಮಾತುಗಳಲ್ಲಿ ಹೇಳುತ್ತದೆ. ಅದರಲ್ಲಿ ನಿತ್ಯವು ಹೊಸಮಾತನ್ನು ಪಡೆಯುತ್ತದೆ. ಅದರಲ್ಲಿ ವ್ಯಕ್ತಿ ಮತ್ತು ಅವನ ಜೀವನದ ಕ್ರಮವೂ ಹೆಚ್ಚು ಮುಖ್ಯವಾಗುತ್ತದೆ. ಅವರ ಜೀವನ ಮತ್ತು ಅದರ ಸುಂದರ ಕ್ಷಣಗಳು ಅದರಲ್ಲಿ ಹೆಚ್ಚು ಮುಖ್ಯವಾಗುತ್ತದೆ. ಅಂದರೆ ನವೋದಯಕ್ಕೆ ಸುಂದರವಾದುದರ ಬಗ್ಗೆ ಮಾತ್ರವೇ ಹೆಚ್ಚು ಆಸಕ್ತಿ. ಜೀವನ ಮತ್ತು ಅದರ ವ್ಯಾಖ್ಯೆಯು ಅದರಲ್ಲಿ ಬೇರೆಯಾಗುತ್ತದೆ. ಯಾವುದನ್ನು ನಾವು ಸಂದರ್ಭವೆಂದು ಹೇಳುತ್ತೇವೆಯೋ ಅದರ ಸ್ವರೂಪವೂ ನವೋದಯದಲ್ಲಿ ತೀರಾ ಒಂದು ಕ್ಷಣದ ಆಸಕ್ತಿಯನ್ನು ಹೇಳುತ್ತವೆ. ಅದರಲ್ಲಿ ಅನೇಕ ಸಮಾಜಿಕವಾದ ಸಂಗತಿಗಳೂ ಸೇರಿಕೊಳ್ಳಬಹುದು. ಗಾಂಧಿಯವರ ಕುರಿತು ಗಾಂಧಿಗೆ ಭಾಷ್ಪಾಂಜಲಿ ಎನ್ನುವ ಕವಿತೆಯನ್ನು ಕುವೆಂಪು ಬರೆದರೆ ಮೂವತ್ತಮೂರು ಕೋಟಿಯ ಕುರಿತು ಬೇಂದ್ರೆಯವರು ಬರೆದರು. ಅದರಲ್ಲಿ ಬರುವ ಸಂಗತಿಗಳು ಒಂದು ಕಾಲವನ್ನು ಹೇಳುತ್ತದೆ. ಅದರಲ್ಲಿ ಆಗಿನ ಬುದ್ಧಿಜೀವಿಗಳ ಚಟುವಟಿಕೆಯೂ ಕಾಣಿಸುತ್ತದೆ. ಬರಹವೇ ಒಂದು ದೃಷ್ಟಿಯಲ್ಲಿ ಬುದ್ಧಿಜೀವಿಗಳ ಚಟುವಟಿಕೆಯೂ ಆಗಿರುತ್ತದೆ. ಅದರಲ್ಲಿ ಒಂದು ದೊಡ್ಡದಾದ ಚಲನೆಯೂ ಇದೆ. ವಾಸ್ತವವಾಗಿ ಬರೆಯುವುದು ಅಂದರೆ ಅದು ದೊಡ್ಡದಾದ ಕೆಲಸವೂ ಆಗಿದೆ. ಅದನ್ನು ಬರೆಯುವ ಮೊದಲು ನಾವು ಮಾಡಿಕೊಳ್ಳುವ

ಟಿಪ್ಪಣಿಗಳೂ ಒಂದು ಲ್ಯಾಬಿನಂತೆ ಕೆಲಸವನ್ನು ಮಾಡುತ್ತದೆ. ಅದರಲ್ಲಿ ಅನ್ವಯವೂ ಇರುತ್ತದೆ. ಪ್ರಮೇಯವೂ ಇರುತ್ತದೆ. ಹಾಗೂ ಅದರಲ್ಲಿ ಬೇರೆ ಬೇರೆ ಸಂಗತಿಗಳೂ ಸೇರಿಕೊಂಡಿರುತ್ತವೆ. ವಾಸ್ತವವಾಗಿ ಸಾಹಿತ್ಯದಲ್ಲಿ ಬರುವ ಬೇರೆ ಬೇರೆ ವಾದಗಳು ಬೇರೆ ಬೇರೆ ರೀತಿಯ ವರ್ಗೀಕರಣಗಳೂ ಆಗಿರುತ್ತವೆ. ಸಾಹಿತ್ಯ ಮತ್ತು ಅದರ ಗುಣಾತ್ಮಕವಾದ ನಿಲುವುಗಳನ್ನು ನಾವು ನೋಡುವಾಗ ಅದನ್ನು ಹೇಗೆ ಅನ್ವಯಿಸುತ್ತೇವೆ ಎನ್ನುವುದೂ ಅಷ್ಟೇ ಮುಖ್ಯವಾಗುತ್ತದೆ. ವಾದಗಳನ್ನು ನಾವು ಬಳಸುವುದು ನಮ್ಮ ಗ್ರಹಿಕೆ ಮತ್ತು ನಮ್ಮ ಬದ್ಧತೆಯ ಕಾರಣಕ್ಕೆ ಎನ್ನುವುದನ್ನು ಇಲ್ಲಿ ಗಮನಿಸಬೇಕಾಗುತ್ತದೆ. ಅದರಲ್ಲಿ ಇವುಗಳು ನಿರ್ದಿಷ್ಟವಾದ ಅನೇಕ ಸಂಗತಿಗಳನ್ನು ಹೇಳುತ್ತವೆ. ವಾದಗಳು ಮತ್ತು ಅವುಗಳ ಆವಶ್ಯಕತೆಯು ಅತ್ಯಂತ ಮಹತ್ವದ್ದೂ ಆಗಿದೆ. ಅದರಲ್ಲಿ ನಾವು ಅಧ್ಯಯನ ಮಾಡಲು ಬೇಕಾದ ಪರಿಕರವೂ ಇರುತ್ತದೆ. ಅದರಲ್ಲಿ ಬೇರೆ ಬೇರೆ ವಿಮರ್ಶಾತ್ಮಕವಾದ ಪರಿಕರವೂ ಇರುತ್ತದೆ. ಅದರಲ್ಲಿ ಮಾದರಿಗಳೂ ಇರುತ್ತವೆ. ಸಮಾಜವಾದಿ ದೃಷ್ಟಿಕೋನವು ಯಾಕೆ ಬೇಕು ಎನ್ನುವುದಕ್ಕೆ ಅದು ಉತ್ತರವನ್ನು ಕೊಡುತ್ತದೆ. ಸಮಾಜವಾದಿ ವಾಸ್ತವವಾದವು ಒಂದು ನಿಲುವನ್ನು ಹೇಗೆ ತಳೆಯುತ್ತದೆ ಎನ್ನುವುದನ್ನು ನೋಡಲು ನಮಗೆ ಅದರ ಸಾರವೇ ಅತ್ಯಂತ ಮುಖ್ಯವಾಗುತ್ತದೆ. ಅದರಲ್ಲಿ ಸಾಹಿತ್ಯ ಮತ್ತು ಅದರ ನಿರ್ವವಚನವೂ ಇರುತ್ತದೆ. ಸಾಹಿತ್ಯವನ್ನು ಸಮಾಜವಾದಿ ವಾಸ್ತವವು ನೋಡುವುದು ಮತ್ತು ಗ್ರಹಿಸುವುದು ಒಂದು ಕ್ರಮದಲ್ಲಿ. ಅದರಲ್ಲಿ ಸೃಜನಶೀಲತೆ ಮತ್ತು ಅದರ ಚಹರೆಗಳು ಭಿನ್ನವಾಗುತ್ತದೆ. ಅದೇ ರೀತಿಯಲ್ಲಿ ನವೋದಯವೂ ಕೂಡಾ ಸಾಹಿತ್ಯ ಮತ್ತು ಅದರ ನಿರ್ವಚನವು ಒಂದು ರೀತಿಯಲ್ಲಿ ಇರುತ್ತದೆ. ನವ್ಯ ಮತ್ತು ಅದರ ನಿರ್ವಚನವು ಬೇರೆ. ಆದರೆ ನಮಗೆ ಗೊತ್ತಿರಬೇಕಾದ ಅಂಶವೆಂದರೆ ಸಾಹಿತ್ಯ ಮತ್ತು ಅದರ ರಚನೆಯು ಲೇಖಕ ಮತ್ತು ಅವನ ಮನಸ್ಸನ್ನು ಹೇಳುತ್ತದೆ ಎಂಬುದು. ಈ ದೃಷ್ಟಿಯಿಂದ ಸಮಾಜಶಾಸ್ತ್ರೀಯವಾದ ವಿಮರ್ಶೆಯು ನಮಗೆ ಗೊತ್ತು ಗುರಿಯನ್ನು ಸೂಚಿಸುತ್ತದೆ. ಸಮಾಜ ಮತ್ತುಅದರ ಕ್ರಮವು ಅದಕ್ಕೆ ಹೆಚ್ಚು ಮುಖ್ಯ. ಸಮಾಜವನ್ನು ಇಟ್ಟುಕೊಂಡು ಅದು ಸಾಹಿತ್ಯವನ್ನು ಗ್ರಹಿಸುತ್ತದೆ. ಸಾಮಾಜಿಕ ಜೀವನ ಮತ್ತು ಅದರ ಪರಿಣಾಮಗಳು ಸಾಹಿತ್ಯದ ಮೇಲೆ ಆಗುತ್ತದೆ ಎನ್ನುವುದು ಅದರ ವಾದವಾಗಿದೆ. ಜೀವನ ಮತ್ತು ಅದರ ಪ್ರಾತಿನಿಧಿಕತೆಯು ಬಹಳ ಮುಖ್ಯವೆಂದು ಅದು ಹೇಳುತ್ತದೆ. ಜೀವನ ಮತ್ತು ಅದರ ಅನೇಕ ಸಂಗತಿಗಳನ್ನು ಸಾಹಿತ್ಯವು ಹೇಳುತ್ತದೆ ಮತ್ತು ಅದರಲ್ಲಿ ವ್ಯಕ್ತಿ ಮತ್ತು ಅವನ ಗ್ರಹಿಕೆಗಳು ಬಹಳ ಮುಖ್ಯವೆಂದು ಅದರ ಪ್ರತಿಪಾದನೆಯೂ ಆಗಿದೆ. ಸಾಹಿತ್ಯ ಮತ್ತು ಅದರ ಗುಣವನ್ನು ಹೇಳುವುದೂ ಕೂಡಾ ಸಮಾಜಶಾಸ್ತ್ರವೇ ಆಗಿದೆ. ಅದರಲ್ಲಿ ತಾರತಮ್ಯವೂ ಇರುತ್ತದೆ.

ಸಾಹಿತ್ಯ ಮತ್ತು ಅದರ ತಾತ್ವಕತೆಯನ್ನು ಹೊರತುಪಡಿಸಿಕೊಂಡು ನಾವು ಯಾವುದನ್ನು ಹೇಳಲಾಗುವುದೂ ಇಲ್ಲ. ಲೇಖಕನು ಆಯ್ಕೆಯನ್ನು ಮಾಡುತ್ತಾನೆ. ಅದನ್ನು ಬರೆಯುತ್ತಾನೆ. ಸಮಾಜ ಮತ್ತು ಕಲೆಯ ಪ್ರಶ್ನೆಯು ಈ ದೃಷ್ಟಿಯಿಂದ ಸಂಕೀರ್ಣವೂ ಆಗುತ್ತದೆ. ಅದರಲ್ಲಿ ಬರೀ ಕಲ್ಪನೆಯು ಮಾತ್ರವೇ ಇದೆ ಎಂದು ಹೇಳಬೇಕಾಗಿಯೂ ಇಲ್ಲ. ಯಾವುದೇ ಲೇಖಕ ಬರೀ ಕಲ್ಪನೆಯಿಂದ ಯಾವುದನ್ನೂ ಉತ್ಪಾದಿಸಲಾರ. ಯಾವುದೇ ಪ್ರತೀಕ ಮತ್ತು ಕಲ್ಪನೆಯು ಕೆಲವನ್ನು ಮಾತ್ರವೇ ಹೇಳುತ್ತದೆ. ಅದು ಕೆಲವನ್ನು ಸೂಚಿಸುತ್ತದೆ. ಲೇಖಕ ಮತ್ತು ಅವನ ಶಕ್ತಿಯು ಒಂದು ರೀತಿಯಲ್ಲಿ ಇರುತ್ತದೆ. ಅದರಲ್ಲಿ ಬರಹ ಮತ್ತು ಅದರ ಸಾಧ್ಯತೆಯೂ ಇರುತ್ತದೆ. ಕೆಲವು ಪ್ರತಿಮೆಗಳಿಗೆ ವೈಜ್ಞಾನಿಕತೆಯೂ ಇರುತ್ತದೆ ಎನ್ನುವುದನ್ನು ಮರೆಯಲು ಆಗುವುದೂ ಇಲ್ಲ. ಆದರೆ ಇಲ್ಲಿ ಗಮನಿಸಬೇಕಾದ ಮತ್ತೊಂದು ವಿಚಾರವೂ ಇದೆ. ಅದನ್ನು ಹೀಗೆ ಹೇಳಬಹುದು: ಮಾರ್ಕ್ಸವಾದವು ರೊಮಾಂಟಿಕ್ ಪರಂಪರೆಯನ್ನು ನೋಡಿದ್ದು ಅದರ ಹಿಂದೆ ಇರುವ ತಾತ್ವಿಕತೆಯು ದೆಸೆಯಿಂದಲೇ. ಆದ್ದರಿಂದ ಅದಕ್ಕೆ ಸಮಾಜ ಮತ್ತು ಚರಿತ್ರೆಯು ಮುಖ್ಯವಾದವು. ಲೇಖಕ ಮತ್ತು ಅವನ ಶಕ್ತಿಯನ್ನು ಅವನ ಬರಹದಲ್ಲಿ ನೋಡುತ್ತೇವೆ ನಿಜ. ಆದರೆ ಅದರಲ್ಲಿ ವ್ಯಕ್ತಿ ಮತ್ತು ಅವನ ಪ್ರಜ್ಞೆಯ ಇರುತ್ತದೆ. ಅದರ ಅಗತ್ಯವೂ ಆಗುತ್ತದೆ. ವ್ಯಕ್ತಿಯನ್ನು ನೋಡುವುದು ಮತ್ತು ಅವನ ಚೈತನ್ಯವನ್ನು ಗುರುತಿಸುವುದು ಮೂಲಭೂತವಾಗಿ ಒಂದು ಅಗತ್ಯವಾಗಿ ಮಾತ್ರವೇ. ಯಾವುದೇ ಕಲಾಕೃತಿಯಲ್ಲಿ ಬರುವ ಅನೇಕ ಸಂಕೇತಗಳು ಮೂಲತಃ ಕೆಲವು ತಾತ್ವಿಕತೆಯನ್ನು ಹೇಳುತ್ತದೆ. ಅದಲ್ಲಿ ಅದು ಮೂಲಭೂತವಾಗಿ ಒಂದು ಕ್ರಮ ಮಾತ್ರವೇ ಆಗಿರುತ್ತದೆ. ಬುಡಕಟ್ಟು ಸಮಾಜ ಮತ್ತು ಅದರ ಸ್ವರೂಪವು ಒಂದು ಬಗೆಯಲ್ಲಿ ಇತ್ತು. ಅದರಲ್ಲಿನ ಭಾವನೆಗಳು ಅವರ ಅಭಿವ್ಯಕ್ತಿಯನ್ನು ಹೇಳುತ್ತದೆ. ಬುಡಕಟ್ಟು ಸಮಾಜ ಮತ್ತು ಅವರು ಕಟ್ಟುವ ಕತೆಗಳು ಒಂದು ಬಗೆಯಲ್ಲಿ ಇರುತ್ತವೆ. ಅದರಲ್ಲಿ ಬರುವ ಆಶಯವು ಒಂದು ಬಗೆಯಲ್ಲಿ ಇದ್ದರೆ ಶಿಷ್ಟರು ಹೇಳುವ ಕತೆ ಮತ್ತು ಅವರ ಬರಹಗಳ ನಿಲುವು ಮತ್ತೊಂದು ಥರ ಇರುತ್ತದೆ. ಬರಹ ಮತ್ತು ಅದರಲ್ಲಿ ಬರುವ ಪ್ರತೀಕಗಳು ವಾಸ್ತವವಾಗಿ ಒಂದು ಉದ್ದೇಶವನ್ನು ಹೊಂದಿರುತ್ತದೆ. ಆದರೆ ಪ್ರತೀಕವನ್ನು ಹೇಳುವಾಗ ಸಹಜವಾದಿಗಳು ಅವನ ಅನುಭವಕ್ಕೆ ಮಾತ್ರವೇ ಬದ್ಧರಾಗುತ್ತಾರೆ. ಆದರೆ ಅದು ಮಾತ್ರವೇ ಸಾಕಾಗುವುದೂ ಇಲ್ಲ. ಸಹಜವಾದಿಗಳಲ್ಲಿ ಅಭಿವ್ಯಕ್ತಿ ಮತ್ತು ಅದರ ಪ್ರಶ್ನೆಯು ಅತ್ಯಂತ ಸೀಮಿತವೂ ಆಗುತ್ತದೆ. ಅದರಲ್ಲಿ ಅಭಿವ್ಯಕ್ತಿಯು ಸರಳೀಕರಣವನ್ನು ಸೂಚಿಸುತ್ತದೆ. ಆದರೆ ಒಬ್ಬ ನಿಜವಾದ ಕಲಾವಿದನು ಕಲೆಯನ್ನು ಬಳಸುವುದು ತಾನು ಯಾವುದನ್ನು ನೋಡಿದ್ದಾನೆಯೋ ಅದನ್ನು ಮಾತ್ರವೇ

ಹೇಳಲು ಅಲ್ಲ. ಅದರಲ್ಲಿ ಅಷ್ಟನ್ನು ಮಾತ್ರವೇ ಹೇಳಿದ್ದಾನೆ ಎಂದರೆ ಅದರ ಸ್ವರೂಪವು ಮಿತಿಗೆ ಮಾತ್ರವೇ ಒಳಪಡುತ್ತವೆ. ಕಲಾವಿದನು ಕಲೆಯನ್ನು ಬಳಸುವುದಕ್ಕೂ ಅವನ ನಿಲುವಿಗೂ ಸಂಬಂಧವಿರುತ್ತದೆ. ಈ ಕಾರಣದಿಂದ ಅವನ ಆಲೋಚನೆ ಮತ್ತು ಅವನ ಅಭಿಪ್ರಾಯವು ಅತ್ಯಂತ ಸಂಕೀರ್ಣವಾಗುತ್ತದೆ. ಜೀವನವು ಅತ್ಯಂತ ಮುಖ್ಯವಾದ ಕೆಲವು ಸಂಗತಿಗಳನ್ನು ಹೇಳುತ್ತವೆ. ಅದರಲ್ಲಿ ಬಹಳ ಮುಖ್ಯವಾಗಿ ದಿನ ನಿತ್ಯ ಮತ್ತು ಅದರ ಆಳವಾಗಿ ಕಲಕುವ ಸಂಗತಿಗಳು ನಮಗೆ ಅತ್ಯಂತ ಮುಖ್ಯವಾಗುತ್ತದೆ. ದಿನ ನಿತ್ಯವೆನ್ನುವುದು ವ್ಯಕ್ತಿಯನ್ನು ಮತ್ತು ಅವನ ಪ್ರಜ್ಞೆಯನ್ನು ಬಾಧಿಸುತ್ತದೆ. ಕಲಾತ್ಮಕವಾದ ಪ್ರತೀಕಗಳು ಎಂದರೆ ಅದರಲ್ಲಿ ಜೀವನ ಮತ್ತು ಅದರ ಅಭಿವ್ಯಕ್ತಿಯು ನಿಜ. ಆದರೆ ಇಲ್ಲಿ ಮತ್ತೊಂದು ಅಂಶವನ್ನು ನಾವು ನೋಡಬೇಕಾಗುತ್ತದೆ. ವ್ಯಕ್ತಿಯು ಕಟ್ಟುವ ಪ್ರತೀಕಗಳು ರಚನೆಗಳು ಮಾತ್ರವೇ. ಆದರೆ ಈ ಪ್ರತೀಕಗಳು ಆಧುನಿಕ ಜಗತ್ತಿನಲ್ಲಿ ಬೇರೆ ಬೇರೆ ಸಂಜ್ಞೆಗಳಾಗಿವೆ. ಅದರಲ್ಲಿ ವ್ಯಕ್ತಿ ಮತ್ತು ಅವನ ಬಯಕೆಗಳು ಇವೆ. ಅದರಲ್ಲಿ ವ್ಯಕ್ತಿತ್ವ ಮತ್ತು ಬದಲಾಗುತ್ತಿರುವ ಸಮಾಜ ಪ್ರಶ್ನೆಗಳು ಇವೆ. ಕೆಲವು ಅಗತ್ಯಗಳು ನಮಗೆ ಕೆಲವನ್ನು ಕಟ್ಟುವ ಅಗತ್ಯವನ್ನು ಸೂಚಿಸುತ್ತವೆ. ಸಂದರ್ಭ ಎನ್ನುವುದೂ ಅಷ್ಟೇ ಮುಖ್ಯ. ಆದರೆ ಇರುವ ಅನೇಕ ಪ್ರಶ್ನೆಗಳು ರೊಮಾಂಟಿಕ್ ಯುಗವನ್ನು ನೋಡಿದ ಕ್ರಮವನ್ನು ಮಾತ್ರವೇ ಹೇಳುತ್ತವೆ. ವಾಸ್ತವವಾಗಿ ಸಾಹಿತ್ಯವು ನಿಜವಾಗಿಯೂ ಜೀವನ ಮತ್ತು ಅದರ ಪಲ್ಲಟಗಳನ್ನು ಹೇಳುತ್ತದೆ. ಅಂದರೆ ಸಾಹಿತ್ಯಕ್ಕೆ ಒಂದು ಆಳವಾದ ಸಂಗತಿಯೂ ಇರುತ್ತದೆ. ಅದರಲ್ಲಿ ದಿನ ಮತ್ತು ಅದರ ಕುರಿತಾದ ಪ್ರಜ್ಞೆಯು ಅತ್ಯಂತ ಮಹತ್ವದ್ದೂ ಆಗಿದೆ. ಕಲಾತ್ಮಕವಾದ ಒಂದು ಪ್ರಜ್ಞೆಯು ಕೂಡಾ ಜೀವನ ಮತ್ತು ಅದರ ಗ್ರಹಿಕೆಯನ್ನು ಹೇಳುತ್ತದೆ. ಅಂದರೆ ಅದರಲ್ಲಿ ಜೀವನದ ಕುರಿತಾದ ನೋಟವು ಇರುತ್ತದೆ. ಹಾಗೂ ಅದನ್ನು ವ್ಯಕ್ತಿ ಮತ್ತು ಅವನ ಭಾವನೆಗೆ ಸಂಬಂಧ ಪಟ್ಟಂತೆ ಹೇಳಬೇಕಾಗುತ್ತದೆ. ಅಂದರೆ ವ್ಯಕ್ತಿ ಮತ್ತು ಅವನ ಭಾವನೆಯು ವಾಸ್ತವವಾಗಿ ಅವನ ಅಭಿವ್ಯಕ್ತಿಗೆ ಕಾರಣವಾಗುತ್ತದೆ. ಆದರೆ ಇದರಲ್ಲಿ ವ್ಯಕ್ತಿ ಮತ್ತು ಅವನ ನಿಲುವು ಅತ್ಯಂತ ಮಹತ್ವದ್ದೂ ಆಗಿದೆ. ನಮಗೆ ಯಾವುದನ್ನು ಹೇಳಬೇಕು ಮತ್ತು ಯಾವುದನ್ನು ಹೇಳಬಾರದು ಎನ್ನುವ ವಿವೇಕವು ಇರಬೇಕಾಗುತ್ತದೆ. ಮತ್ತು ಸಾಮಾನ್ಯವಾಗಿ ಇರುತ್ತದೆ. ಅದರಲ್ಲಿ ಅಗತ್ಯ ಮತ್ತು ಪ್ರತೀಕವನ್ನು ಕಟ್ಟುವ ಕೆಲಸವು ಅತ್ಯಂತ ಮುಖ್ಯವಾದ ಸಂಗತಿಯೂ ಆಗಿರುತ್ತದೆ. ಇಲ್ಲಿ ಮತ್ತೊಂದು ಸಂಗತಿಯನ್ನು ಹೇಳಬೇಕಾಗುತ್ತದೆ. ಸಾಹಿತ್ಯವೆನ್ನುವುದು ಬುದ್ಧಿಜೀವಿಗಳ ಕೆಲಸ ಎನ್ನುವುದಕ್ಕೆ ಎರಡು ಮಾತು ಇಲ್ಲ. ಅದರಲ್ಲಿ ವ್ಯಕ್ತಿ ಮತ್ತು ಅವನ ಗುಣ ಅವನ ಗ್ರಹಿಕೆ ಮುಂತಾದವು ಅತ್ಯಂತ ಮಹತ್ವದ ಪಾತ್ರವನ್ನು

ವಹಿಸುತ್ತದೆ. ಇಲ್ಲಿ ಮತ್ತೊಂದು ಅಂಶವನ್ನು ಹೇಳಬೇಕಾಗುತ್ತದೆ. ವ್ಯಕ್ತಿಯು ತನ್ನದೇ ಆದ ನಿಲುವನ್ನು ಹೊಂದುತ್ತಾನೆಯಾದರೂ ಅವನಿಗೆ ಅದನ್ನು ಹೇಳುವಾಗ ಯಾವ ಸನ್ನಿವೇಶವು ಕಾರಣವಾಗಿದೆ ಎನ್ನುವುದು ಅತ್ಯಂತ ಮುಖ್ಯವಾದ ಅಂಶ ಸಾಹಿತ್ಯದಲ್ಲಿ ಯಾವುದನ್ನು ಹೆಚ್ಚು ಸ್ಪಷ್ಟವಾಗಿ ಹೇಳುತ್ತೇವೆಯೋ ಅದರ ಕಾರಣವು ಅವನ ಅಮೂರ್ತವಾದ ಆಲೋಚನೆಯೂ ಆಗಿದೆ. ವಾಸ್ತವವಾಗಿ ಲಿರಿಕ್ ಎನ್ನುವುದು ವಿಷಯ ನಿಷ್ಟವಾದ ಒಂದು ಸಂಗತಿಯೂ ನಿಜ ಆದರೆ ಮಹಾಕಾವ್ಯಗಳು ಹಾಗೆ ಇಲ್ಲ. ಅದರಲ್ಲಿ ಸಮಾಜದ ಅನೇಕ ಅಂಶಗಳು ಇರುತ್ತವೆ. ಯಾವುದೇ ಮಹಾಕಾವ್ಯಗಳು ನಿರ್ದಿಷ್ಟವಾದ ಒಂದು ಉದ್ದೇಶವನ್ನು ಹೊಂದಿರುತ್ತವೆ. ಮಹಾಕಾವ್ಯಗಳು ಬರೀ ಸ್ಫೂರ್ತಿಯನ್ನು ಮಾತ್ರವೇ ಹೇಳುವುದೂ ಇಲ್ಲ. ಮಹಾಕಾವ್ಯವನ್ನು ಬರೀ ಒಂದು ಪ್ರತಿಭಾಜನ್ಯವಾದ ಸಂಗತಿಯೆಂದು ಹೇಳಬೇಕಾಗಿಯೂ ಇಲ್ಲ. ಅದರಲ್ಲಿ ಉದ್ದೇಶವೂ ಅತ್ಯಂತ ಸ್ಪಷ್ಟವಾದ ಸಂಗತಿಯೂ ಇರುತ್ತದೆ. ಸಾಹಿತ್ಯ ಮತ್ತು ಅದರ ಅಗತ್ಯಗಳು ಸಾಮಾಜಿಕವೂ ಆಗಿರುತ್ತದೆ. ಅದು ಸಾಮಾಜಿಕವಾದ ಕೆಲವು ನಿಲುವನ್ನು ಸೂಚಿಸುತ್ತದೆ. ಬರೀ ಕವಿಗಳು ಮಾತ್ರವೇ ಒಂದು ಸಮಾಜದ ಅಗತ್ಯವನ್ನು ಪೂರೈಸುತ್ತಾರೆ ಎಂದು ಭಾವಿಸಬಾರದು. ಆದರೆ ಕವಿಗಳ ಭಾವನಾತ್ಮಕವಾದ ಪ್ರತಿಕ್ರಿಯೆಯು ಕೂಡಾ ಕೆಲವು ತಾತ್ವಿಕತೆಯನ್ನು ಹೇಳುತ್ತದೆ. ಯಾವುದೇ ಉದ್ದೇಶ ಮತ್ತು ಅದರ ಅಗತ್ಯಗಳು ಯಾವಾಗ ಯಾವ ರೀತಿಯಲ್ಲಿ ಇರುತ್ತದೆ ಎನ್ನುವುದು ಮಾತ್ರವೇ ಇಲ್ಲಿ ಗಮನಿಸಬೇಕಾದ ಸಂಗತಿಯೂ ಆಗುತ್ತದೆ. ಉದ್ದೇಶಕ್ಕೂ ಅದರ ಹಿಂದೆ ಇರುವ ಆಲೋಚನೆಗೂ ಒಂದು ಸಂಬಂಧವಿದೆ. ಜೀವನ ಮತ್ತು ಅದರ ಕುರಿತಾದ ಕೆಲವು ನಂಬಿಕೆಗಳನ್ನು ಲೇಖಕರು ಹೇಳುತ್ತಾರೆ. ಮತ್ತು ಅದರ ಅಗತ್ಯವನ್ನು ಅವರು ನಿರೂಪಿಸುತ್ತಾರೆ. ಯಾವುದನ್ನು ನಾವು ಭಾವನಾತ್ಮಕವಾದ ಸಂಗತಿಯೆಂದು ಹೇಳುತ್ತೇವೆಯೋ ಅದು ಕೂಡಾ ಕೆಲವು ತಾತ್ವಿಕತೆಯನ್ನು ಹೇಳುತ್ತವೆ. ಲೇಖಕರು ಮತ್ತು ಸ್ಪೂರ್ತಿ ಮತ್ತು ಅದರ ಪರಿಣಾಮವು ಸಾಹಿತ್ಯದ ಮೇಲೆ ಆಗುತ್ತದೆ. ಆದರೆ ಅದರಲ್ಲಿ ಬೇರೆ ಸಂಗತಿಗಳೂ ಇರುತ್ತವೆ. ಅದು ಸಮಾಜದ ಒಂದು ಅಂಗವೂ ಆಗಿದೆ. ಸಮಾಜ ಮತ್ತು ಅದರ ಅಗತ್ಯಗಳು ಯಾವ ರೀತಿಯಲ್ಲಿ ಇರುತ್ತದೆಯೋ ಅದಕ್ಕೆ ಸರಿಯಾಗಿ ನಾವು ಬರೆಯುತ್ತೇವೆ. ಆಲೋಚನೆಯನ್ನು ನಾವು ಯಾವ ರೀತಿಯಲ್ಲಿ ಹೇಳಬೇಕು ಮತ್ತು ಅದರ ಸ್ವರೂಪವು ಯಾವ ಬಗೆಯದು ಎನ್ನುವುದೂ ಇಲ್ಲಿ ಮುಖ್ಯ. ವಾಸ್ತವವಾಗಿ ಸಾಹಿತ್ಯ ಮತ್ತು ಅದರ ಸ್ವರೂಪಕ್ಕೂ ಅದರ ವಸ್ತುವಿಗೂ ಒಂದು ಸಂಬಂಧವಿದೆ. ಸಾಹಿತ್ಯ ಮತ್ತು ಅದರ ಆಶಯವು ಅತ್ಯಂತ ಮುಖ್ಯವಾದದ್ದೂ ಆಗಿದೆ. ಸಾಮಾಜಿಕ ಆಶಯವೆಂದರೆ ಅದು ಬರೀ ಒಂದು ನಿರೂಪಣೆಯು

ಮಾತ್ರವೇ ಆಗುವುದೂ ಇಲ್ಲ. ಅದರಲ್ಲಿ ಬೇರೆ ಅಂಶಗಳೂ ಇರುತ್ತವೆ. ಲೇಖಕರು ಅವರ ಆಸಕ್ತಿ ಮತ್ತು ಅವರ ಅನಾಸಕ್ತಿಯೆರಡೂ ಬಹಳ ಮುಖ್ಯವಾದ ಪಾತ್ರವನ್ನು ವಹಿಸುತ್ತವೆ. ಸಾಮಾಜಿಕ ಅನುಭವ ಎಂದರೆ ಅದು ಒಂದು ವಿಷಯವು ಮಾತ್ರವೇ ಆಗುವುದೂ ಇಲ್ಲ. ಕ್ರಿಯೆ, ಪ್ರತಿಕ್ರಿಯೆ, ಸಾರಾಂಶ ಮುಂತಾದವುಗಳು ಸಾಮಾಜಿಕವಾದ ದೃಷ್ಟಿಕೋನವನ್ನು ಹೇಳುತ್ತವೆ. ನಮ್ಮ ಸಾಮಾಜಿಕ ನಡತೆ ಮತ್ತು ಅದರ ಸ್ವಭಾವವವೂ ಕೂಡಾ ಸಮಾಜದ ಕುರಿತಾಗಿ ನಾವು ತಳೆಯುವ ಅಭಿಪ್ರಾಯವೂ ಆಗಿರುತ್ತದೆ. ಆದರೆ ನಮಗೆ ಗೊತ್ತಿರಬೇಕಾದ ಅಂಶವೆಂದರೆ ಅದರಲ್ಲಿ ಕೆಲವು ಸಂಗತಿಗಳು ಇರುತ್ತವೆ. ಸಾಮಾಜಿಕ ಸಂಬಂಧವೆಂದರೆ ಸಮಾಜದ ಜೊತೆಗೆ, ಅದರ ನಿರ್ದಿಷ್ಟವಾದ ಘಟಕಗಳ ಜೊತೆಗೆ ನಾವು ಸ್ಥಾಪಿಸಿಕೊಳ್ಳುವ ಸಂಬಂಧವೂ ಆಗಿರುತ್ತದೆ. ಅದರಲ್ಲಿ ಜೀವನ ಮತ್ತು ಅದರ ಅರ್ಥವಂತಿಕೆಯು ಇರುತ್ತದೆ. ಸಾಮಾಜಿಕ ನಡತೆಯೆಂದರೆ ನಾವು ಅದಕ್ಕೆ ತೋರಿಸುವ ಒಂದು ನಿಲುವು ಮಾತ್ರವೇ ಆಗಿರುತ್ತದೆ. ಸಮಾಜದಲ್ಲಿ ಕೆಲವು ಸಂಬಂಧಗಳು ಮೂಲಭೂತವಾಗಿರುತ್ತವೆ. ಅದನ್ನು ಬದಲಿಸುವುದು ಅಸಾಧ್ಯ. ಗಂಡು ಮತ್ತು ಹೆಣ್ಣುಗಳ ಸಂಬಂಧವು ಅತ್ಯಂತ ಅಗತ್ಯದ್ದೂ ಹೌದು. ಸಮಾಜವು ಅನೇಕ ರೀತಿಯ ಸಂಬಂಧಗಳನ್ನು ಹೊಂದಿರುತ್ತವೆ. ಆದರೆ ಅವುಗಳು ನಿರ್ದಿಷ್ಟವಾದ ಅರ್ಥವನ್ನು ಹೇಳುತ್ತವೆ. ಅದರಲ್ಲಿ ಮೂಲಭೂತವಾದ ನಿಲುವುಗಳು ಇರುತ್ತವೆ. ಸಾಮಾಜಿಕ ಸಂಬಂಧವೆನ್ನುವುದು ನಮ್ಮ ಅಗತ್ಯವನ್ನು ನಿರೂಪಿಸುತ್ತವೆ. ಸಾಮಾಜಿಕ ಸಂಬಂಧವೆನ್ನುವುದು ನಮ್ಮ ಲೋಕ ದೃಷ್ಟಿಯೂ ಹೌದು. ಸಾಹಿತ್ಯದಲ್ಲಿ ನಾವು ನಿರೂಪಣೆಯ ಕಾರಣಕ್ಕಾಗಿ ಅದನ್ನು ಬದಲಿಸುತ್ತೇವೆ, ಹೊಸದಾದ ಆಯಾಮವನ್ನು ಕೊಡುತ್ತೇವೆ, ಸಂಯೋಜನೆಯನ್ನು ಮಾಡುತ್ತೇವೆ. ಆದರೆ ಅದನ್ನು ನಾವು ಅರ್ಥವಾದ ಸಂಗತಿಯೆಂದು ಹೇಳಬೇಕಾಗುತ್ತದೆ. ಮತ್ತು ಅದರಲ್ಲಿ ತಾತ್ವಿಕತೆಯು ಇರುತ್ತದೆ. ಯಾವುದೇ ಸಂಬಂಧವನ್ನು ನಾವು ನಿರ್ಭಾವುಕ ಎಂದು ಹೇಳಬೇಕಾಗಿಯೂ ಇಲ್ಲ. ಇಲ್ಲಿ ಮಾತು ಮತ್ತು ಬರಹವೆರಡೂ ಮೂಲಭೂತವಾಗಿ ಸಮಾಜದ ನಡುವೆ ಸಂಬಂಧವನ್ನು ಸೂಚಿಸುವ ಪ್ರಕ್ರಿಯೆ ಎನ್ನುವುದನ್ನು ನಾವು ಮರೆಯಬಾರದು. ಲೋಕದೃಷ್ಟಿಯೆನ್ನುವುದಕ್ಕೆ ಕಾರಣವು ಇರುವುದರಿಂದ ಅದರ ಸ್ವರೂಪವೂ ಬಹಳ ಮುಖ್ಯ ಅದರಲ್ಲಿ ವಿಶಿಷ್ಟತೆಯು ಇರುತ್ತದೆ. ಮನುಷ್ಯ ಮತ್ತು ಅವನ ಚಟುವಟಿಕೆಯು ಮೂಲಭೂತವಾಗಿ ಮನಸ್ಸಿಗೆ ಸಂಬಂಧ ಪಟ್ಟದ್ದೂ ಆಗಿದೆ. ಆದ್ದರಿಂದ ಬರಹ ಮತ್ತು ಮಾತುಗಳು ಸಾಮಾಜಿಕ ಜೀವನವನ್ನು ಹೇಳುತ್ತವೆ. ಆದರೆ ಇಲ್ಲಿ ಗಮನಿಸಬೇಕಾದ ಮತ್ತೊಂದು ಅಂಶವೂ ಇದೆ. ಒಬ್ಬೊಬ್ಬ ಲೇಖಕರಿಗೆ ಒಂದೊಂದು ಬಗೆಯ ನಿಲುವುಗಳು ಇರುತ್ತವೆ. ಮತ್ತು

ಒಂದೊಂದು ಬಗೆಯ ಬರಹಗಳನ್ನು ಅವರು ಮಾಡುತ್ತಾರೆ. ಅದು ಅವರಿಗೆ ಯಾವುದು ಹೆಚ್ಚು ಅನುಕೂಲವನ್ನು ಕಲ್ಪಿಸುತ್ತದೆಯೋ ಅದರ ಸೂಚನೆಯು ಮಾತ್ರವೇ ಆಗುತ್ತದೆ. ವ್ಯಕ್ತಿಯು ಯಾವುದನ್ನು ಹೇಗೆ ಹೇಳಬೇಕು ಎಂದು ಯೋಚಿಸುತ್ತಾನೆಯೋ ಆ ರೀತಿಯಲ್ಲಿ ಅದನ್ನು ನಿರೂಪಿಸುತ್ತಾನೆ. ಕಾರಂತರಿಗೆ ಕಾದಂಬರಿಯು ಹೆಚ್ಚು ಮುಖ್ಯವಾದ ಸಾಹಿತ್ಯ ರೂಪವಾಗಿತ್ತು. ಅದನ್ನು ಅವರು ಅಳವಡಿಸಿಕೊಂಡರು. ಅವರಿಗೆ ಅದು ಸುಲಭವೆಂದು ಅನಿಸಿರಬಹುದು. ಆದರೆ ಅವರಿಗೆ ಅದು ಅನುಕೂಲವಾದರೆ ಬೇಂದ್ರೆಗೆ ಕಾವ್ಯವು ಮಾಧ್ಯಮವಾಗಿತ್ತು. ಕುಮಾರವ್ಯಾಸನಿಗೆ ಷಟ್ಪದಿಯೇ ಹೆಚ್ಚು ಅನುಕೂಲವನ್ನು ಕೊಟ್ಟಿತು. ಅವರ ಅಭಿವ್ಯಕ್ತಿಯಲ್ಲಿ ಭಿನ್ನತೆಯೂ ಇದೆ. ಅವರು ಹೇಳಿದ ವಿಷಯಗಳೂ ಬೇರೆಯಾಗಿವೆ. ಅವರ ಆಲೋಚನೆಯನ್ನು ಅವರ ಬರಹಗಳು ಹೇಳುತ್ತವೆ. ಹಾಗೆ ನೋಡುವುದಿದ್ದರೆ ಮನುಷ್ಯ ಮತ್ತು ಅವನ ವರ್ತನೆಗಳನ್ನು ಅವರ ಬರಹಗಳು ಅನನ್ಯವಾಗಿಯೇ ನಮಗೆ ತೋರಿಸಿಕೊಟ್ಟಿವೆ. ನಂಬಿದವರ ನಾಕ ನರಕದಲ್ಲಿ ಬರುವ ವಾಗ್ದೇವಿ ಅಂತರಂಗವು ಕಾರಂತರಿಗೆ ಹೆಚ್ಚು ಮುಖ್ಯವಾಗುತ್ತದೆ. ಅದು ಕಾರಂತರ ಜೀವನದ ದೃಷ್ಟಿಕೋನವನ್ನು ಹೇಳುತ್ತದೆ. ಆ ಕಾದಂಬರಿಯು ಅವರ ನಿಲುವನ್ನು ಸೂಚಿಸುತ್ತದೆ. ಅದರಲ್ಲಿ ಅವರಿಗೆ ಒಂದು ಉದ್ದೇಶವೂ ಇದೆ. ಕಾರಂತರ ಸಾಹಿತ್ಯದ ದೃಷ್ಟಿಕೋನವನ್ನು ಅದು ಸೂಚಿಸುತ್ತದೆ. ಅಂದರೆ ಕಾರಂತರೂ ಒಂದು ಜೀವನ ದರ್ಶನವನ್ನು ಹೇಳುತ್ತಾರೆ. ಅದರಲ್ಲಿ ಧರ್ಮ ಮತ್ತು ಕರ್ಮದ ಭಾಷೆಯೂ ಬೇರೆಯಾಗಿದೆ. ಅದು ಒಂದು ಕಾಲದ ಸನ್ನಿವೇಶವನ್ನು ಹೇಳುತ್ತದೆ. ಅದರಲ್ಲಿ ಒಂದು ಕಾಲದ ಸಮಾಜ ಮತ್ತು ಅದರ ಸಂಬಂಧದ ನಿರೂಪಣೆಯೂ ಇದೆ. ಅವರ ಕಾದಂಬರಿಗಳು ಪ್ರಯೋಗ ಮತ್ತು ಜೀವನದ ದೃಷ್ಟಿಕೋನವನ್ನು ಸೂಚಿಸುತ್ತದೆ. ಕಾರಂತರು ಅವರ ಬರಹಗಳಲ್ಲಿ ಚರಿತ್ರೆ ಮತ್ತು ಸಮಾಜವು ಬದಲಾಗುವುದನ್ನು ಹೇಳಿದರು. ಕಾರಂತರ ಕಣ್ಣಿನ ಮೂಲಕವೇ ಅದು ನಮಗೆ ಬಂದಿದೆ. ಕಾರಂತರ ದೃಷ್ಟಿಕೋನವು ಇದೆ. ಆದರೆ ಇದೇ ಮಾತನ್ನು ನಾವು ಕುಮಾರವ್ಯಾಸನಿಗೆ ಹೇಳಲು ಬರುವುದಿಲ್ಲ. ಅದು ಸಂಕೀರ್ಣವಾಗಿದೆ. ಅನೇಕ ಸಂಗತಿಗಳನ್ನು ಅದು ಹೇಳುವುದು ಭಿನ್ನವಾದ ಪ್ರಕ್ರಿಯೆಯಲ್ಲಿ. ಲಿರಿಕಲ್ ಕೆಲಸದಲ್ಲಿ ಕಲಾವಿದ ಮತ್ತು ಅವನ ಭಾವನೆಗಳು ಹಾಗೂ ಅವನ ನಿಲುವುಗಳು ಬೇರೆಯಾಗಬಹುದು. ಈ ಅರ್ಥದಲ್ಲಿ ಬೇರೆ ಬೇರೆ ಪ್ರಕಾರಗಳು ಬೇರೆ ಬೇರೆ ಮನೋಭಾವವನ್ನು ಹೇಳುತ್ತವೆ. ಮತ್ತು ಬೇರೆ ಬೇರೆ ಕಾಲದಲ್ಲಿ ಬೇರೆ ಬೇರೆ ಮಾದರಿಗಳು ಚಾಲ್ತಿಗೆ ಬರುತ್ತವೆ. ಬೇರೆ ಸನ್ನಿವೇಶಗಳು ಬೇರೆ ಸೃಜನಶೀಲತೆಯನ್ನು ಸೂಚಿಸುತ್ತವೆ. ಆದರೆ ನಾವು ಇಲ್ಲಿ ಮತ್ತೆ ಯೋಚಿಸಬೇಕಾದ ಕೆಲವು ಅಂಶಗಳೂ

ಇವೆ. ಸಾಹಿತ್ಯ ಮತ್ತು ಸಮಾಜವನ್ನು ಕುರಿತು ಯೋಚಿಸುವಾಗ ಅದರೆ ಚರಿತ್ರೆಯನ್ನು ನಾವು ಅರ್ಥ ಮಾಡಿಕೊಳ್ಳಬೇಕಾಗುತ್ತದೆ. ಲೇಖಕರು ಹೇಗೆ ಒಂದು ಸನ್ನಿವೇಶಕ್ಕೆ ಪ್ರತಿಕ್ರಿಯೆಯನ್ನು ಕೊಡುತ್ತಾರೆ ಎನ್ನುವುದೂ ಇಲ್ಲಿ ಬಹಳ ಮುಖ್ಯವಾದ ಸಂಗತಿಯೂ ಆಗುತ್ತದೆ. ಸಾಮಾಜಿಕ ಜೀವನ ಮತ್ತು ಅದರ ವಿವರಣೆಯು ನಮಗೆ ಅತ್ಯಂತ ಮುಖ್ಯವಾದ ಸಂಗತಿಯೂ ಆಗಿರುತ್ತದೆ. ಯಾವುದೇ ಸಮಾಜದಲ್ಲಿ ಬೇರೆ ಬೇರೆ ಒತ್ತಡಗಳು ಕೆಲಸವನ್ನು ಮಾಡುತ್ತವೆ. ನಮ್ಮ ಆಲೋಚನೆ ಮತ್ತು ಅದರ ವಿವರಣೆಗಳು ಬಹಳ ಮುಖ್ಯವಾದುದು ಆಗುತ್ತದೆ. ಆಲೋಚನೆ ಮತ್ತು ಅದರ ಅಭಿವ್ಯಕ್ತಿಯನ್ನು ಈ ದೃಷ್ಟಿಯಿಂದ ನೋಡಬೇಕಾಗುತ್ತದೆ. ಯಾವುದೇ ಒಂದು ವರ್ಗಕ್ಕೆ ಇರುವ ಸಾಮಾನ್ಯವಾದ ತಾತ್ವಿಕತೆ ಮತ್ತು ಅದರ ಸ್ವರೂಪವು ಒಂದು ರೀತಿಯಲ್ಲಿ ಇರುತ್ತದೆ. ಆದರೆ ಕಲಾವಿದನು ಅದನ್ನು ಸ್ವೀಕರಿಸುವುದು ಮತ್ತು ಅದನ್ನು ಪುನಃ ಬೇರೆ ರೀತಿಯಲ್ಲಿ ರೂಪಿಸುತ್ತಾನೆ. ಹಾಗೂ ಅದನ್ನು ನಾವು ಲೇಖಕನ ತಾತ್ವಿಕತೆಯೆಂದು ಹೇಳುತ್ತೇವೆ. ಅವನ ಯಾವುದನ್ನು ಹೇಳುತ್ತಾನೆ ಮತ್ತು ಅದನ್ನು ಹೇಗೆ ಹೇಳುತ್ತಾನೆ ಅದರ ಸ್ವರೂಪವು ಯಾವ ಬಗೆಯದು ಎನ್ನುವುದು ಇಲ್ಲಿ ಮುಖ್ಯವಾಗುತ್ತದೆ. ಒಂದು ವರ್ಗ ಮತ್ತು ಅದರ ಮನೋಭಾವವು ಒಂದು ಕೃತಿಯ ಮೇಲೆ ಪ್ರಭಾವವನ್ನು ಬೀರುತ್ತದೆ. ಅದರ ಪ್ರಭಾವವು ಸಣ್ಣದು ಅಲ್ಲವೆನ್ನುವುದನ್ನು ನಾವು ಒತ್ತುಕೊಟ್ಟು ನೋಡಬೇಕಾಗುತ್ತದೆ. ವ್ಯಕ್ತಿಯನ್ನು ಪ್ರಭಾವಿಸುವುದು ಆಯಾ ಸನ್ನಿವೇಶಗಳು. ಅವನ ಆಲೋಚನೆಯನ್ನು ಅದು ಹೇಳುತ್ತದೆ. ಅದು ಅಗತ್ಯವಾಗುತ್ತದೆ. ಆದರೆ ಇಲ್ಲಿ ಮತ್ತೆ ನೋಡಬೇಕಾದ ಅಂಶಗಳು ಇವೆ. ವ್ಯಕ್ತಿ ಮತ್ತು ಅವನ ಮನೋಭಾವವು ಒಂದು ದೃಷ್ಟಿಯಿಂದ ಬಹಳ ಮಹತ್ವದ್ದೂ ಆಗಿರುತ್ತದೆ. ಅಂದರೆ ಅವನ ಮನೋಭಾವವನ್ನು ಒಂದು ಸನ್ನಿವೇಶವು ಆಳುತ್ತದೆ. ಅದರಲ್ಲಿ ಅವನ ಪರಿಸರ ಮತ್ತು ಅವನ ಕುಟುಂಬ, ಅವನ ಕಾಲ ಮುಂತಾದವು ಬಹಳ ಮುಖ್ಯವಾಗುತ್ತದೆ. ಅಂದರೆ ಅದರ ಪ್ರಭಾವವು ಅವನ ಬರಹವನ್ನು ರೂಪಿಸುತ್ತದೆ. ಅದರಲ್ಲಿ ಮತ್ತೆ ಕೆಲವು ಅಂಶಗಳೂ ಇರುತ್ತವೆ. ಅಂದರೆ ಸಮಾಜ ಮತ್ತು ಅದರ ಪರಿಣಾಮವನ್ನು ನಾವು ಶೂನ್ಯವೆಂದು ಹೇಳಲು ಆಗುವುದೂ ಇಲ್ಲ. ಸಾಹಿತ್ಯವೆಂದರೆ ಅದು ಸಮಾಜದ ಪ್ರಶ್ನೆಯೂ ಆಗುತ್ತದೆ. ಅದರಲ್ಲಿ ಯಾವುದು ಅಗತ್ಯವಿದೆಯೋ ಅದನ್ನು ಮಾತ್ರವೇ ಲೇಖಕನು ಹೇಳುತ್ತಾನೆ. ಅದು ಅವನಿಗೆ ಮುಖ್ಯವೆಂದು ಕಾಣಬೇಕು. ಲೇಖಕ ಮತ್ತು ಅವನ ಸಾಮಾಜಿಕ ರಾಜಕೀಯವಾದ ಸಿದ್ಧಾಂತಗಳು ಅವನ ಬರಹವನ್ನು ಸೂಚಿಸುತ್ತದೆ. ಒಂದು ಚರಿತ್ರೆ ಮತ್ತು ಅದರ ನಿರ್ಣಯವು ಲೇಖಕನನ್ನು ಪ್ರಭಾವಿಸುತ್ತದೆ. ಅದು ಅವನ ಮೇಲೆ ಬೀರುವ ಪ್ರಭಾವವನ್ನು ನಾವು ವಿವರಿಸುವ ಅಗತ್ಯವು ಇಲ್ಲವೆಂದು ಹೇಳಬೇಕಾಗಿಲ್ಲ. ವ್ಯಕ್ತಿ

ಮತ್ತು ಅವನ ಸಮಾಜವು ಅವನ ಮೇಲೆ ಉಂಟು ಮಾಡುವ ಪ್ರಭಾವವು ಸಣ್ಣದು ಅಲ್ಲ. ಅದರಲ್ಲಿ ಇಂತಹುದು ಮಾತ್ರವೇ ಪ್ರಭಾವವನ್ನು ಬೀರಿದೆ ಎಂದು ಹೇಳಲು ಬರುವುದೂ ಇಲ್ಲ. ಪ್ರಭಾವಕ್ಕೆ ಬೇರೆ ಬೇರೆ ಆಯಾಮವು ಇರುತ್ತದೆ. ಅದರಲ್ಲಿ ಒಂದು ಸನ್ನಿವೇಶವು ಮಾತ್ರವೇ ಇದೆ ಎಂದು ಹೇಳಲು ಆಗುವುದೂ ಇಲ್ಲ. ಆದರೆ ಸಮಾಜಶಾಸ್ತ್ರೀಯವಾದ ದೃಷ್ಟಿಕೋನವನ್ನು ಹೊರಗಟ್ಟಲು ಈಚೆಗೆ ಅನೇಕ ಸಿದ್ಧಾಂತಗಳು ಬಂದಿವೆ. ಅದನ್ನು ಬೇಕೆಂದೇ ಚಾಲ್ತಿಗೆ ತರಲಾಯಿತು. ಅದರಲ್ಲಿ ವರ್ಗಗಳ ನಿರಾಕರಣೆಯೂ ಇದೆ. ಅದರಲ್ಲಿ ಅನೇಕ ಸಮಸ್ಯೆಗಳೂ ಇವೆ. ಇಲ್ಲಿ ಮತ್ತೆ ಕೆಲವು ಅಂಶಗಳನ್ನು ನಾವು ನೋಡಬೇಕಾಗುತ್ತದೆ. ಕೆಲವರು ರಾಷ್ಟ್ರವನ್ನು ಮಾತ್ರವೇ ಕೇಂದ್ರವಾಗಿ ಇರಿಸಿಕೊಂಡರು. ಕೆಲವರು ಕಾಲವನ್ನು ಗಣನೆಗೆ ತರದೆ ಅದನ್ನು ಬರೀ ಕಲೆಯೆಂದು ಮಾತ್ರವೇ ಗುರುತಿಸುವ ಪ್ರಯತ್ನವನ್ನು ಮಾಡಿದರು ಅದರ ಉದ್ದೇಶವು ಅತ್ಯಂತ ಸೀಮಿತವಾದ್ದೂ ಆಗಿದೆ. ಇನ್ನು ಕೆಲವರಿಗೆ ಪ್ರದೇಶ ಮಾತ್ರವೇ ಕಾಣಿಸಿತು. ಮತ್ತೊಂದಿಷ್ಟು ಜನರು ಪ್ರಜಾಪ್ರಭುತ್ವ ಮತ್ತು ಅದರ ಉದಾರವಾದವನ್ನು ಮಾತ್ರವೇ ಗ್ರಹಿಸಿದರು. ಅದರ ಮೂಲಕವೇ ಕೆಲವು ಸ್ಥಾಪಿತವಾದ ಹಿತಾಸಕ್ತಿಯನ್ನು ಗುರುತಿಸಿದರು. ಮೌಲ್ಯ ಮತ್ತು ಅದರ ಪ್ರಶ್ನೆಯನ್ನು ಕೆಲವರು ಸೀಮಿತವಾಗಿ ನೋಡುವ ಯತ್ನವನ್ನು ಮಾಡಿದರು. ಜನರು ಮತ್ತು ಅವರ ಮೌಲ್ಯವು ಯಾವ ಬಗೆಯದು ಎನ್ನುವುದೂ ಅಷ್ಟೇ ಮುಖ್ಯ. ಬರೀ ನಮ್ಮ ಎದುರು ಇರುವ ವಾಸ್ತವವನ್ನು ಮಾತ್ರವೇ ನೋಡಿಕೊಂಡು ಅದನ್ನು ವಿವರಿಸುವುದು ಸರಿಯಾದ ಕ್ರಮವಲ್ಲ. ಅದರಲ್ಲಿ ಯಾವುದು ಹಿನ್ನೆಲೆಯು ಆಗಿದೆ ಎಂದೂ ನೋಡಬೇಕಾಗುತ್ತದೆ. ಇರುವ ವಾಸ್ತವವು ಕಣ್ಣಿಗೆ ಕಾಣಿಸುತ್ತದೆ. ಆದರೆ ಇದರ ಸ್ವರೂಪವನ್ನು ನಾವು ಮೇಲು ನೋಟದೊಂದಿಗೆ ಮಾತ್ರವೇ ವಿವರಿಸುವ ಅಗತ್ಯವಿಲ್ಲ. ಒಂದು ಸಾಮಾನ್ಯೀಕೃತವಾದ ಹೇಳಿಕೆಯು ಯಾವ ರೀತಿಯ ಸಹಾಯವನ್ನು ಮಾಡುವುದಿಲ್ಲ. ಲೇಖಕ ಮತ್ತು ಅವನ ಉದ್ದೇಶವನ್ನು ನೋಡದೆ ಯಾವುದೇ ತೀರ್ಮಾನವನ್ನು ನಾವು ಮಾಡಲು ಬರುವುದೇ ಇಲ್ಲ. ವಾಸ್ತವ ಮತ್ತು ಅದರ ಸಾಧ್ಯತೆಗಳು ಬೇರೆ ಇರುತ್ತವೆ. ಅದರ ಕಾರಣಗಳೂ ಭಿನ್ನವಾಗುತ್ತವೆ. ವಾಸ್ತವವೆಂದು ಯಾವುದನ್ನು ಹೇಳುತ್ತೇವೆಯೋ ಅದರ ಅರ್ಥಗಳು ಭಿನ್ನವೂ ಆಗಿದೆ. ಅದರ ಹಿಂದೆ ಚರಿತ್ರೆಯು ಇದೆ. ಆ ಚರಿತ್ರೆಯನ್ನು ಲೇಖಕನು ಹೇಗೆ ಗ್ರಹಿಸುತ್ತಾನೆ ಎನ್ನುವುದೂ ಅಷ್ಟೇ ಮುಖ್ಯ. ವಾಸ್ತವ ಮತ್ತು ಅದರ ಆಶಯವನ್ನು ನಾವು ವಿಸ್ತರಿಸಲು ಸಾಧ್ಯ. ಅದರ ಬೇರು ಸಮಾಜದಲ್ಲಿ ಇದೆ. ಕಾರಂತರು ಬರೆದಿರುವ ಚೋಮನದುಡಿ ಕೃತಿಯನ್ನು ಬರೀ ಕಾದಂಬರಿಯಾಗಿ ನೋಡದೆ ಅದನ್ನು ಒಂದು ಸಮಾಜದ ಸಮಸ್ಯೆ ಎಂದು ನೋಡಿದರೆ ಅದರ

ಅರ್ಥವು ಬೇರೆಯಾಗುತ್ತದೆ. ಚೋಮನು ರಾಷ್ಟ್ರೀಯ ನಾಯಕನು ಅಲ್ಲ. ಆದರೆ ಅವನಿಗೆ ಸಮಸ್ಯೆಯು ಇದೆ. ಅದರಲ್ಲಿ ಅವನ ವ್ಯಕ್ತಿತ್ವ ಮತ್ತು ಅದರ ಸ್ವರೂಪಗಳು ಇವೆ. ಈ ಅರ್ಥದಲ್ಲಿ ಕಾರಂತರು ಒಬ್ಬ ಚೋಮನ ಮೂಲಕ ಒಂದು ಸಮಾಜದ ಸಮಸ್ಯೆಯನ್ನು ಹೇಳುತ್ತಿದ್ದಾರೆ. ಸಾಮಾಜಿಕ ಜೀವನ ಮತ್ತು ಅದರ ಸಮಸ್ಯೆಗಳನ್ನು ಕಾರಂತರು ಹೇಳುತ್ತಾ ಬಂದಿದ್ದಾರೆ. ರಾಷ್ಟ್ರೀಯತೆ ಮತ್ತು ಅದರ ವಿವಿಧ ವರ್ಗಗಳನ್ನು ಕಾರಂತರು ಭಿನ್ನವಾದ ನೆಲೆಯಲ್ಲಿ ಶೋಧಿಸಿದ್ದಾರೆ. ವರ್ಗಗಳು ಮತ್ತು ಅವುಗಳ ವಿವಿಧ ಸಂಸ್ಕೃತಿಗಳು ಕಾರಂತರಿಗೆ ಹೆಚ್ಚು ಮುಖ್ಯವಾಗಿದೆ. ಅವುಗಳನ್ನು ಕಾರಂತರು ಒಂದು ಚರಿತ್ರೆಯ ಮೂಲಕವೇ ಕಂಡುಕೊಳ್ಳಲು ಯತ್ನವನ್ನು ಮಾಡುತ್ತಾರೆ. ರಾಷ್ಟ್ರ ಮತ್ತು ಅದರ ಒಳಗೆ ಇರುವ ತಾರತಮ್ಯವನ್ನು ಅತ್ಯಂತ ಯಶಸ್ವಿಯಾಗುವಂತೆ ಕಾರಂತರು ಕಾದಂಬರಿಗಳಲ್ಲಿ ಹೇಳುತ್ತಾರೆ. ಸಂಕಪ್ಪಯ್ಯ, ಕೆಂಚ, ಬೆಳ್ಳಿ, ಸೂರ, ಕೊರ್ಕರ್ಣೆ ಶೀನ, ಮಂಜುಳೆ ಹೀಗೆ ಅವರ ಕಾದಂಬರಿಗಳಲ್ಲಿ ಅನೇಕ ಪಾತ್ರಗಳು ಬರುತ್ತವೆ. ಮತ್ತು ಆ ಪಾತ್ರಗಳು ಬಂದದ್ದು ರಾಷ್ಟ್ರ ಮತ್ತು ಅದರ ಚರ್ಚೆಯ ಸಂದರ್ಭದಲ್ಲಿ ಎಂದು ಮನಗಾಣಬೇಕಾಗುತ್ತದೆ. ಆದರೆ ಈ ಪಾತ್ರಗಳು ಕೆಲವು ರೀತಿಯ ಚಲನೆಯನ್ನು ಹೇಳುತ್ತವೆ. ಕೆಲವು ಮೊದಲಿನ ಸ್ಥಿತಿಯಲ್ಲಿ ಇಲ್ಲ. ಸೂರ ಮುಂತಾದವರು ಇರುವುದು ಹಳೆಯ ಸಮಾಜದಲ್ಲಿ ಅಲ್ಲ. ಅವರ ಜೀವನ ಮತ್ತು ಅವರ ನೋಟಗಳು ಬದಲಾಗಿವೆ. ಕುಡಿಯರ ಕೂಸು ಕಾದಂಬರಿಯಲ್ಲಿ ಬರುವ ಕೆಂಚ ಬೂದ ಮುಂತಾದವರ ಜೀವನವನ್ನು ನಾವು ಮಧ್ಯಕಾಲೀನ ಸಮಾಜದಲ್ಲಿ ನೋಡಲು ಬರುವುದೂ ಇಲ್ಲ. ಆದರೆ ಜೀವನಕ್ಕೆ ಒಂದು ಚರಿತ್ರೆಯು ಇದೆ. ಅದರಲ್ಲಿ ಅವರ ವರ್ತಮಾನವೂ ಇದೆ. ವಿಲಾಯಿತಿಯವರು ಬಂದಿದ್ದಾರೆ. ಮತಾಂತರ ಮಾಡುತ್ತಾರೆ. ಅವರದು ಒಂದು ಬಗೆಯ ಶೋಷಣೆಯೇ. ಆದರೆ ಅವರ ಶೋಷಣೆ ಮತ್ತು ಅವರು ಒಡ್ಡುವ ಆಮಿಶವು ಬೇರೆ ಬೇರೆ ಕಾರಣಗಳಿಂದ ಸೆಳೆಯುತ್ತದೆ. ಕುಡಿಯರ ಬಡತನ, ಅವರ ಜಾತಿ, ಅವರ ನಂಬಿಕೆಗಳನ್ನು ಮಿಶಿನರಿಗಳು ಬಳಸಿಕೊಳ್ಳುತ್ತವೆ. ತಿರುಮಲ ಭಟ್ಟನ ದರ್ಪವು ಮತ್ತೊಂದು ಬಗೆಯದು. ಅವನೂ ಸಾಮಾನ್ಯನಲ್ಲ. ಅವನಿಗೆ ಬೇರೆ ಆಸಕ್ತಿಯೂ ಇದೆ. ಮಾರುಕಟ್ಟೆ ಮತ್ತು ಅದರ ಧಾರಣೆಯು ಅವನಿಗೆ ಗೊತ್ತಿದೆ. ಚರಿತ್ರೆ ಮತ್ತು ಅದರ ಸಮಸ್ಯೆಗಳು ವ್ಯಕ್ತಿಯನ್ನು ಹೇಗೆ ರೂಪಿಸುತ್ತವೆ ಎನ್ನುವುದಕ್ಕೆ ಕಾರಂತರ ಕಾದಂಬರಿಗಳಲ್ಲಿ ಹೇರಳವಾದ ಉದಾಹರಣೆಗಳು ಇವೆ. ಆದರೆ ಇದೇ ಸಮಸ್ಯೆಯನ್ನು ಮರಳಿಮಣ್ಣಿಗೆ ಕಾದಂಬರಿಯ ಲಚ್ಚನು ಎದುರಿಸುವುದಿಲ್ಲ. ಸಂದರ್ಭ ಮತ್ತು ವ್ಯಕ್ತಿಗಳು ಬದಲಾಗಿದ್ದಾರೆ. ಆದರೆ ಸಾಹಿತ್ಯ ಮತ್ತು ಅದರ ಪ್ರಶ್ನೆಗಳನ್ನು ನೋಡುವುದು ಮತ್ತು ಗ್ರಹಿಸುವುದು ಮುಖ್ಯವಾಗಿ ನಾವು ಒಂದು ದೃಷ್ಟಿಯಲ್ಲಿ ಮಾತ್ರವೇ. ಆದ್ದರಿಂದ

ಸಮಸ್ಯೆಯು ಆಗಿದೆ. ಅದರಲ್ಲಿ ಸಾಹಿತ್ಯವನ್ನು ನಾವು ಅದರ ಸಾಮಾಜಿಕವಾದ ಕಾರ್ಯದ ಹಿನ್ನೆಲೆಯಲ್ಲಿ ನೋಡುವುದು ಅತ್ಯಂತ ಕಡಿಮೆ. ಆಲೋಚನೆಯನ್ನು ನಾವು ಹೆಚ್ಚು ನಿಗದಿ ಮಾಡುತ್ತೇವೆ. ಅದನ್ನು ಸೀಮಿತವಾಗಿ ಗ್ರಹಿಸುವ ಪ್ರಯತ್ನವನ್ನು ಮಾಡುತ್ತೇವೆ. ಹಾಗೆ ನೋಡುವುದಿದ್ದರೆ ಪ್ರಜಾಪ್ರಭುತ್ವ ಮತ್ತು ಅದರ ದೃಷ್ಟಿಕೋನವನ್ನು ಉದಾರವಾಗಿ ಗ್ರಹಿಸಿದ್ದು ಹೆಚ್ಚು. ಮತ್ತು ಜೀವನ ಮತ್ತು ಅದರ ಉದಾತ್ತವಾದ ಮೌಲ್ಯವನ್ನು ಹೇಳುವುದೇ ಭಿನ್ನವಾದ ರೀತಿಯಲ್ಲಿ ಮನುಷ್ಯನು ಉದಾರನಾಗಬೇಕು ಮತ್ತು ಸಾಮಾನ್ಯರನ್ನು ಹೆಚ್ಚು ಪ್ರೀತಿಯಿಂದ ಕಾಣಬೇಕು ಎನ್ನುವುದು ಅದರ ನಿಲುವು. ಆದರೆ ಉದಾತ್ತತೆಯೆಂದರೆ ಏನು ಎನ್ನುವುದೇ ನಿಜವಾದ ಸಮಸ್ಯೆಯೂ ಆಗುತ್ತದೆ. ಯಾವುದು ನಿಜವಾದ ಅರ್ಥದಲ್ಲಿ ಮಾನವೀಯವಾದ ಮೌಲ್ಯ ಎನ್ನುವುದೇ ನಿಜವಾದ ಸಮಸ್ಯೆಯು ಆಗುತ್ತದೆ. ಆದರೆ ಅದನ್ನು ನೋಡುವಾಗ ನಾವು ಅನೇಕ ರೀತಿಯಲ್ಲಿ ಸಮಸ್ಯೆಯನ್ನು ಅನುಭವಿಸುತ್ತೇವೆ. ಪ್ರತಿಯೊಂದು ವರ್ಗವೂ ತನ್ನದೇ ಆದ ಮನೋಸ್ಥಿತಿಯನ್ನು ಅವಲಂಬಿಸುತ್ತದೆ. ಜೀವನ ಮತ್ತು ಅದರ ಅರ್ಥವನ್ನು ಕೂಡಾ ನಿರ್ಧರಿಸುವುದು ಕೂಡಾ ಅದೇ. ಆರ್ಥಿಕತೆ ಮತ್ತು ಸಮಾಜವೆನ್ನುವುದು ಈ ಕಾರಣದಿಂದ ಅತ್ಯಂತ ಮಹತ್ವದ್ದೂ ಆಗಿದೆ. ಅಂದರೆ ಅದು ನಿರ್ಣಾಯಕವಾದ ಪಾತ್ರವನ್ನು ವಹಿಸುತ್ತದೆ. ಅಂದರೆ ಸಾಮಾಜಿಕ ಜೀವನ ಮತ್ತು ಅದರ ಸಾಧ್ಯತೆಗಳು ಯಾವಾಗಲೂ ನಮಗೆ ನಿರ್ದಿಷ್ಟವಾದ ಅರ್ಥವನ್ನು ಕೊಡುತ್ತದೆ. ಆದರೆ ಅನೇಕರು ಜೀವನ ಮತ್ತು ಅದರ ವರ್ಗವನ್ನು ತಿರಸ್ಕರಿಸಿದರು. ಮತ್ತು ಅದರ ಪರಿಣಾಮವಾಗಿ ಕೆಲವನ್ನು ಅವರು ನೋಡಿದ ಕ್ರಮವು ಬೇರೆಯಾಗುತ್ತದೆ. ಅಂದರೆ ಅವರು ಜೀವನವನ್ನು ನೋಡುವುದು ಮತ್ತು ಗ್ರಹಿಸಿಸುವುದು ಬರೀ ಒಂದು ಸ್ವಾಯತ್ತವಾದ ಸಂಗತಿಯೆನ್ನುವ ಹಾಗೆ. ಅಂದರೆ ಅದರಲ್ಲಿಯೇ ಅವರಿಗೆ ಅರ್ಥ ಪೂರ್ಣತೆಯು ಕಾಣಿಸುತ್ತದೆ. ಸಮಾಜ ಮತ್ತು ಅದರ ಕುರಿತಾದ ಸಾಮಾಜಿಕ ಸಿದ್ಧಾಂತಗಳನ್ನು ಹೊರಗಟ್ಟುವುದು ಹೇಗೆ ಎನ್ನುವುದು ಮಾತ್ರವೇ ಅವರಿಗೆ ಮುಖ್ಯವಾಯಿತು. ಮತ್ತೆ ಕೆಲವರು ರಾಷ್ಟ್ರ ಮತ್ತು ಅದರ ಸಾಹಿತ್ಯವನ್ನು ಮಾತ್ರವೇ ಬಹಳ ಮುಖ್ಯವೆಂದು ಭಾವಿಸಿದರು. ಸಾಹಿತ್ಯ ಮತ್ತು ಅದರ ಸಾಮಾಜಿಕ ಸಂಬಂಧವನ್ನು ನೋಡದೆ ಅನೇಕರು ಬರೀ ಸಾಹಿತ್ಯವನ್ನು ಮಾತ್ರವೇ ಕೇಂದ್ರಮಾಡಿಕೊಂಡರು. ಪ್ರಜಾಪ್ರಭುತ್ವ ಮತ್ತು ಅದರ ಪ್ರಶ್ನೆಗಳನ್ನು ಎತ್ತಿಕೊಂಡು ಅನೇಕರು ಮತ್ತೆ ವಾದ ವಿವಾದವನ್ನು ಮಾಡಿದರು. ಸಾಹಿತ್ಯವನ್ನು ಉದಾರತೆಯೊಂದಿಗೆ ವಿವರಿಸುವ ಪ್ರಯತ್ನವನ್ನು ಮಾಡಿದರು. ಮತ್ತೆ ಅವರು ಅದನ್ನು ನೋಡಿದ್ದು ಮತ್ತು ವಿವರಿಸಿದ್ದು ಬರೀ ಒಂದು ಉಪಯೋಗವನ್ನು ಮಾತ್ರವೇ. ಪ್ರಜಾಪ್ರಭುತ್ವ ಮತ್ತು ಅದರ ಉದಾರತೆಯು

ಮಾತ್ರವೇ ಸಾಕಾಗುವುದಿಲ್ಲ. ಅದರಲ್ಲಿ ಬೇರೆ ಪ್ರಶ್ನೆಯೂ ಇದೆ. ಮನುಷ್ಯ ಮತ್ತು ಅವನ ಮೌಲ್ಯವೆನ್ನುವುದು ಬರೀ ಒಂದು ಸೀಮಿತವಾದ ಸಂಗತಿಯು ಮಾತ್ರವೇ ಆಗಿಲ್ಲ. ಮನುಷ್ಯ ಮತ್ತು ಅವನ ಜೀವನದ ಮೌಲ್ಯವನ್ನು ನಾವು ಸೀಮಿತವಾಗಿ ನೋಡಲು ಸಾಧ್ಯವೇ ಇಲ್ಲ. ಅನೇಕ ಸರ್ತಿ ಲೇಖಕ ಮತ್ತು ಅವನ ನಂಬಿಕೆಯನ್ನು ನೋಡಬೇಕಾಗುತ್ತದೆ. ಲೇಖಕ ಮತ್ತು ಅವನ ಸಾಧ್ಯತೆಗಳು ರೂಪುಗೊಳ್ಳುವುದು ಮತ್ತು ಅದು ವಿಸ್ತಾರವಾಗುವುದು ನಿಜವಾದ ಒಂದು ಸಾಮಾಜಿಕವಾದ ಸ್ಥಿತಿಯಿಂದ. ವ್ಯಕ್ತಿ ಮತ್ತು ಅವನ ಮೌಲ್ಯಗಳು ಒಂದು ಸಾಧಾರಣವಾದ ಸ್ಥಿತಿಯು ಅಲ್ಲವಾಗಿದೆ. ಅದರಲ್ಲಿ ಅನೇಕ ಅಂಶಗಳು ಸೇರಿಕೊಳ್ಳುತ್ತವೆ. ಆದರೆ ನಮಗೆ ಹೆಚ್ಚು ಅವಕಾಶವನ್ನು ಕೊಡುವುದು ಸಾಹಿತ್ಯದಲ್ಲಿ ವಾಸ್ತವತೆಯು ಮಾತ್ರವೇ ಆಗಿದೆ. ಅದನ್ನು ನಾವು ನೋಡಲು ಹೆಚ್ಚು ಕಷ್ಟ ಪಡಬೇಕಾಗಿಲ್ಲ. ಅದರಲ್ಲಿ ನೇರವಾದ ನಿಲುವು ಇರುತ್ತದೆ. ಆದರೆ ಉಳಿದ ಪ್ರಕಾರಗಳು ನಮಗೆ ವಕ್ರತೆಯನ್ನು ಹೇಳುತ್ತವೆ. ವಕ್ರತೆಯು ನಮಗೆ ಕೊಡುವ ಅನುಭವಗಳು ಬೇರೆ. ಆದರೆ ಅದನ್ನು ಸಮಾಜ ಮತ್ತು ಅನ್ಯವಾದ ನಿಲುವು ಎಂದು ಭಾವಿಸಬಾರದು. ಮನುಷ್ಯ ಮತ್ತು ಅವನ ಆಗತ್ಯಗಳು ಯಾವಾಗಲೂ ಬೇರೆಯಾಗಿರುತ್ತದೆ. ಆದರೆ ಅದನ್ನು ಸಮಾಜದಿಂದ ಬೇರೆ ಎಂದು ತಿಳಿಯಬಾರದು. ವಾಸ್ತವವನ್ನು ಇಟ್ಟುಕೊಂಡು ನಾವು ವಾಸ್ತವವಾದವನ್ನು ನೋಡಬೇಕಾಗುತ್ತದೆ. ವಾಸ್ತವವಾದ ಮತ್ತು ಅದರ ನಿಲುವನ್ನು ನಾವು ವಿಮರ್ಶೆಯಲ್ಲಿ ವಿವರಿಸಲು ಸಾಧ್ಯ. ಅದರ ಬೇರು ಸಮಾಜದಲ್ಲಿ ಇದೆ. ಅದಕ್ಕೂ ಚರಿತ್ರೆಯ ಆಗು ಹೋಗುಗಳಿಗೂ ನೇರವಾದ ಸಂಬಂಧವಿದೆ. ಕಾರಂತರ ಚೋಮನದುಡಿ ಮತ್ತು ಅದರ ನಿಲುವನ್ನು ನಾವು ಆ ಕಾಲದ ಅಗತ್ಯ ಮತ್ತು ಆ ಕಾಲದ ಪ್ರಶ್ನೆಯಾಗಿಯೂ ನೋಡಬೇಕಾಗುತ್ತದೆ. ಹಾಗೆ ನೋಡುವುದಿದ್ದರೆ ಚೋಮನದುಡಿಯಲ್ಲಿ ಬರುವ ಚೋಮನು ರಾಷ್ಟ್ರ ಮತ್ತು ಅದರ ಉತ್ತರಾಧಿಕಾರಿಯು ಅಲ್ಲ. ಅವನಿಗೆ ಕೆಲವು ಸಮಸ್ಯೆಯು ಇದೆ. ಮತ್ತು ಆ ಸಮಸ್ಯೆಯನ್ನು ಅವನು ನೋಡುವುದು ತನ್ನ ಜೀವನ ಮತ್ತು ಅದರ ವಿನ್ಯಾಸದಲ್ಲಿ ಎಂದು ಮನಗಾಣಬೇಕಾಗುತ್ತದೆ. ಸಾಹಿತ್ಯವು ವಿಕಾಸದ ಹಾದಿಯನ್ನು ಹೇಳುತ್ತದೆ. ಅದು ಚರಿತ್ರೆ ಮತ್ತು ಸಮಾಜವು ಬೆಳೆದು ಬಂದ ಬಗೆಯನ್ನು ನಿರೂಪಿಸುತ್ತದೆ. ರಾಷ್ಟ್ರ ಮತ್ತು ಅದರ ಸಂಗತಿಯನ್ನು ಇಟ್ಟುಕೊಂಡು ಅದರ ಸ್ವರೂಪವನ್ನು ಸಾಹಿತ್ಯಕ್ಕೆ ಅನ್ವಯಿಸುವುದು ಸಾಧ್ಯವೇ ಎನ್ನುವುದು ಮುಖ್ಯವಾದ ಪ್ರಶ್ನೆ. ಅದನ್ನು ಹಾಗೆ ಹೇಳುವುದು ಸಮರ್ಥನೀಯವಲ್ಲ. ಸಾಹಿತ್ಯವು ಅದರದೇ ಆಗಿರುವ ಅನನ್ಯತೆಯನ್ನು ಹೊಂದಿರುತ್ತದೆ. ಅದನ್ನು ಅದರ ವಿಕಾಸದಲ್ಲಿಯೇ ನೋಡಬೇಕಾಗುತ್ತದೆ. ರಾಷ್ಟ್ರ ಮತ್ತು ಅದರ ಒಳಗಡೆಗೆ ಇರುವ ಬೇರೆ ಬೇರೆ

ವರ್ಗಗಳನ್ನು ನಾವು ಅಂಗೀಕರಿಸಬೇಕಾಗುತ್ತದೆ. ಹಾಗೆ ನೋಡುವುದಿದ್ದರೆ ಸಾಹಿತ್ಯ ಮತ್ತು ಅದರ ಅರ್ಥವು ಬೇರೆಯಾಗುತ್ತದೆ. ಅದರಲ್ಲಿ ಭಿನ್ನವಾದ ನೆಲೆಗಳು ಇರುತ್ತದೆ. ಚರಿತ್ರೆ ಮತ್ತು ಅದರ ಆಚೆಗೆ ಇರುವ ಸಂಗತಿಗಳು ಎಂದು ವರ್ಗವನ್ನು ಹೇಳಲು ಬರುವುದೂ ಇಲ್ಲ. ಆದು ನಿರ್ದಿಷ್ಟವಾದ ಅರ್ಥವನ್ನು ಹೊಂದಿರುತ್ತದೆ. ವರ್ಗವೂ ಒಂದು ಅರ್ಥದಲ್ಲಿ ನಿರ್ದಿಷ್ಟವಾದ ಒಂದು ಚರಿತ್ರೆಯನ್ನು ಹೇಳುತ್ತದೆ. ಅದರಲ್ಲಿ ಸಮಾಜ ಮತ್ತು ಅದರ ಸ್ವರೂಪವೂ ಇರುತ್ತದೆ. ಅದರಲ್ಲಿ ಆ ರೀತಿಯಲ್ಲಿ ನೋಡುವಾಗ ಅದರ ಅರ್ಥವನ್ನು ನಾವು ಸಮಾಜ ಮತ್ತು ಅದರ ಸೃಷ್ಟಿಯಲ್ಲಿಯೂ ನೋಡಬೇಕಾಗುತ್ತದೆ. ಸಮಾಜ ಮತ್ತು ಅದರ ಅರ್ಥವನ್ನು ಈ ದೃಷ್ಟಿಯಿಂದ ಭಿನ್ನವಾಗಿಯೂ ನೋಡಬೇಕಾಗುತ್ತದೆ. ಅಂದರೆ ಅದು ಸಮಾಜವನ್ನು ಹೇಳುತ್ತದೆ. ಸಮಾಜವೇ ಒಂದು ಅರ್ಥದಲ್ಲಿ ಸಾಹಿತ್ಯವನ್ನು ಸೂಚಿಸುತ್ತದೆ. ಅದರ ನಿಲುವು ಈ ದೃಷ್ಟಿಯಿಂದ ಸಾಮಾಜಿಕ ಸ್ವರೂಪವನ್ನು ಅದರ ಅರ್ಥದಲ್ಲಿ ನೋಡುವಾಗ ಅದರ ಇತಿಹಾಸ ಮತ್ತು ಅದರ ಅಗತ್ಯಗಳೂ ಬಹಳ ಮುಖ್ಯವಾಗುತ್ತದೆ. ಅನೇಕ ಸಾಮಾಜಿಕ ಚಳುವಳಿಗಳು ಒಂದು ಕಾರಣಕ್ಕೆ ಹುಟ್ಟಿರುತ್ತವೆ. ಚಳುವಳಿಗಳು ಸಾಮಾಜಿಕ ಜೀವನದಲ್ಲಿ ಮಹತ್ವದ ಪಾತ್ರವನ್ನು ವಹಿಸುತ್ತದೆ. ಅದರ ಪರಿಣಾಮವೂ ಸಾಹಿತ್ಯದ ಮೇಲೆ ಆಗುತ್ತದೆ. ಅಂದರೆ ಸಾಹಿತ್ಯವನ್ನು ಅನೇಕ ಸಂದರ್ಭದಲ್ಲಿ ಚಳುವಳಿಗಳು ನಿರ್ದೇಶನ ಮಾಡುತ್ತವೆ. ಅದರ ಸ್ವರೂಪವನ್ನು ನಿರ್ಧರಿಸುತ್ತವೆ. ಸಮಾಜವು ತನಗೆ ಯಾವುದು ಅಗತ್ಯವಾಗಿದೆಯೋ ಅದನ್ನು ಉತ್ಪಾದಿಸುತ್ತವೆ. ಅದರಲ್ಲಿ ಅತ್ಯಂತ ಮುಖ್ಯವಾಗಿ ನಾವು ಗಮನಿಸಬೇಕಾದ್ದು ಅದರ ನಿಜವಾದ ಅಥೆಂಟಿಕ್ ಆದ ಆಸಕ್ತಿಯನ್ನು ಮಾತ್ರವೇ. ಸೌಂದರ್ಯ ಮತ್ತು ಅದರ ಅರ್ಥ ಪೂರ್ಣತೆಯನ್ನು ಈ ದೃಷ್ಟಿಯಿಂದ ನಾವು ಗಮನಿಸಬೇಕಾಗುತ್ತದೆ. ಆದರೆ ಯಾವುದನ್ನು ಈವತ್ತು ನಿಜವಾದ ಕಲಾತ್ಮಕವಾದ ಸೌಂದರ್ಯವೆಂದು ಹೇಳುತ್ತೇವೆಯೋ ಅದು ಕೆಲವು ಸಂಗತಿಗಳನ್ನು ಮಾತ್ರವೇ ಹೇಳುವುದೂ ಇಲ್ಲ. ಅದರಲ್ಲಿಯೂ ಸಾಹಿತ್ಯದಲ್ಲಿ ಬರುವ ವಾಸ್ತವವಾದ ಮಾತ್ರವೇ ಸಾಹಿತ್ಯ ಮತ್ತು ಅದರ ಗುಣಾತ್ಮಕವಾದ ಮೌಲ್ಯವನ್ನು ನಿರ್ಧರಿಸಲು ಇರುವ ಮಾನದಂಡವಾಗಬೇಕಾಗಿಲ್ಲ. ಅದು ನಿಚ್ಚಳ ವಾಗಿರುತ್ತದೆ. ಆದರೆ ಅಷ್ಟಕ್ಕೆ ಅದು ಸ್ವಯಂಸಂಪೂರ್ಣವೆಂದು ಹೇಳಬೇಕಾಗಿಯೂ ಇಲ್ಲ. ರಾಷ್ಟ್ರೀಯವಾದಿಗಳು ಸಾಹಿತ್ಯವನ್ನು ಹೇಗೆ ನಿರ್ವಚಿಸುತ್ತಾರೆ ಎನ್ನುವುದಕ್ಕಿಂತ ವರ್ಗಗಳನ್ನು ಹೇಗೆ ಕಾಣುತ್ತಾರೆ ಎನ್ನುವುದೂ ಅಷ್ಟೇ ಮುಖ್ಯ. ರಾಷ್ಟ್ರೀಯತೆ ವರ್ಗವನ್ನು ಹೇಗೆ ಕಾಣುತ್ತದೆ ಮತ್ತು ಅದನ್ನು ಹೇಗೆ ನಿರ್ವಚಿಸುತ್ತದೆ ಎನ್ನುವುದೂ ಅಷ್ಟೇ ಮುಖ್ಯವಾಗುತ್ತದೆ. ಸಾಹಿತ್ಯವನ್ನು ನೋಡುವಾಗ ಅದರ ಸ್ವರೂಪವನ್ನು ಅದರ ಸಾಮಾಜಿಕತೆಯ ಆಧಾರದ ಮೇಲೆ

ನಿರ್ಧರಿಸಬೇಕಾಗುತ್ತದೆ. ಜೀವನ ಮತ್ತು ಅದರ ಸಾಧ್ಯತೆಯು ಯಾವಾಗಲೂ ಒಂದು ನಿಲುವನ್ನು ಹೊಂದಿರುವುದಿಲ್ಲ. ಮತ್ತು ಅದನ್ನು ಬರೀ ಒಂದು ರಾಷ್ಟ್ರದ ನಿರ್ವಚನವಾಗಿ ನೋಡಬೇಕಾಗಿಯೂ ಇಲ್ಲ. ಜೀವನ ಮತ್ತು ಅದರ ಸಾಧ್ಯತೆಯು ನಿರ್ಧಾರವಾಗುವುದು ಬರೀ ಒಂದು ರಾಷ್ಟ್ರೀಯತೆಯ ಆಧಾರದ ಮೇಲೆ ಅಲ್ಲವೆನ್ನುವುದು ಇಲ್ಲಿ ಉಲ್ಲೇಖನೀಯ. ವರ್ಗ ಮತ್ತು ಅದರ ರಚನೆಯು ಬರೀ ಒಂದು ದೇಶದ ಆಧಾರದ ಮೇಲೆ ನಡೆಯುವುದಿಲ್ಲ. ಅದರ ಅರ್ಥವು ಇರುವುದು ಅದರ ಆರ್ಥಿಕತೆಯನ್ನು ಹೇಳುತ್ತದೆ. ವರ್ಗವೇ ವಾಸ್ತವವಾಗಿ ಒಂದು ನಿಜವಾದ ಸಾಧ್ಯತೆಯೂ ಆಗುತ್ತದೆ. ಅಂದರೆ ವರ್ಗವೇ ಮನೋಭಾವವನ್ನು ಹೇಳುತ್ತದೆ. ಅದರಲ್ಲಿ ಕೆಲವು ಮುಖ್ಯವಾದ ಸಂಗತಿಯು ಇರುತ್ತದೆ. ವರ್ಗವು ನಿಸ್ಸಂಶಯವಾಗಿ ಒಂದು ನಿರ್ಣಾಯಕವಾದ ಪಾತ್ರವನ್ನು ವಹಿಸುತ್ತದೆ. ಆದರೆ ಅದರೊಂದಿಗೆ ನಾವು ಒಂದು ಸಂಗತಿಯನ್ನು ಹೇಳಬೇಕಾಗುತ್ತದೆ. ಅಂದರೆ ವ್ಯಕ್ತಿಯನ್ನು ನಾವು ನೋಡಬೇಕಾದ್ದು ಅವನ ಸಮಾಜ ಮತ್ತು ಅವನ ಪರಿಸರದ ಹಿನ್ನೆಲೆಯಲ್ಲಿ. ಅದರ ಪರಿಣಾಮವಾಗಿ ಕೆಲವು ತಾತ್ವಿಕತೆಗಳು ಉಂಟಾಗುತ್ತವೆ. ಮತ್ತು ಅದರ ಕಾರಣವಾಗಿ ನಾವು ವರ್ಗವನ್ನು ನೋಡುವುದು ಮತ್ತು ಅದನ್ನು ಗ್ರಹಿಸುವುದರ ಅರ್ಥವೂ ಬೇರೆಯಾಗುತ್ತದೆ. ಆದರೆ ಇಂತಹಾ ಸಂದರ್ಭದಲ್ಲಿ ನಾವು ಅದು ಹೇಗೆ ಸಮಾಜ ಮತ್ತು ಸಾಹಿತ್ಯವನ್ನು ನಿರ್ಧರಿಸುತ್ತದೆ ಎಂದೂ ನೋಡಬೇಕಾಗುತ್ತದೆ. ಸಾಹಿತ್ಯವನ್ನು ಅದು ನಿರ್ದೇಶಿಸುತ್ತದೆ. ಸಮಾಜದಲ್ಲಿ ಸಾಹಿತ್ಯ ಮತ್ತು ಅದರ ಸ್ವರೂಪವು ಹೇಗೆ ನಿರ್ಧಾರವನ್ನು ಮಂಡಿಸುತ್ತದೆ. ಮತ್ತು ಅದರ ಅಗತ್ಯವು ಹೇಗಾಗಿದೆ ಎನ್ನುವುದನ್ನು ಇಲ್ಲಿ ನೋಡಬೇಕಾಗುತ್ತದೆ. ಅಂದರೆ ಸಾಹಿತ್ಯವನ್ನು ಸಮಾಜವು ನಿರ್ಧಾರ ಮಾಡುತ್ತದೆ. ಅಂದರೆ ಅದರಲ್ಲಿ ಸಾಮಾಜಿಕ ಜೀವನವು ಇರುತ್ತದೆ. ಅದರಲ್ಲಿ ಸಮಾಜವು ನಿರ್ಣಾಯಕವಾಗುತ್ತದೆ. ಸಾಹಿತ್ಯವೂ ಕೂಡಾ ನಿರ್ಣಾಯಕವಾದ ಪಾತ್ರವನ್ನು ವಹಿಸುತ್ತದೆ. ಅದರಲ್ಲಿ ಈ ದೃಷ್ಟಿಯಿಂದ ಅರ್ಥವಂತಿಕೆಯು ಇರುತ್ತದೆ. ಒಂದು ಸಮಾಜದಲ್ಲಿ ಬುದ್ಧಿಜೀವಿಗಳ ಪಾತ್ರವನ್ನು ನಿರಾಕರಿಸಲು ಬರುವುದೂ ಇಲ್ಲ. ಒಂದು ದೇಶದಲ್ಲಿ ವಿವಿಧ ವರ್ಗಗಳ ಪಾತ್ರ ನಿರ್ಣಾಯಕವೂ ಆಗಿರುತ್ತದೆ. ಜನಾಂಗವೂ ಅಷ್ಟೇ ಮುಖ್ಯವಾದ ಸಂಗತಿ ಅದನ್ನು ಹೊರತು ಪಡಿಸಿದ ಸಂಗತಿಗಳು ಇಲ್ಲವಾಗಿದೆ. ಪ್ರತಿ ಸಮಾಜಕ್ಕೂ ಅದರದೇ ಆದ ಒಂದು ನಿಲುವು ಇರುತ್ತದೆ. ಅದನ್ನು ಅದರ ಸೃಜನಶೀಲತೆಯು ಹೇಳುತ್ತದೆ. ಹಾಗೆ ನೋಡುವುದಿದ್ದರೆ ಸೃಜನಶೀಲತೆಯು ನಿರ್ದಿಷ್ಟವಾದ ಪಾತ್ರವನ್ನು ಪಾತ್ರವನ್ನು ವಹಿಸುತ್ತದೆ. ಸಮಾಜದಲ್ಲಿ ಬುದ್ಧಿಜೀವಗಳ ಪಾತ್ರವನ್ನು ನಿರಾಕರಿಸಲು ಬರುವುದೇ ಇಲ್ಲ. ಆ ಬುದ್ಧಿಜೀವಗಳು ಯಾವುದನ್ನು ಹೇಳುತ್ತಾರೆ ಮತ್ತು ಅವರ ಪಾತ್ರವು

ಯಾವ ಬಗೆಯದು ಎನ್ನುವುದು ಮಾತ್ರವೇ ಬಹಳ ಮುಖ್ಯವಾಗುತ್ತದೆ. ಯಾವುದೇ ರಾಷ್ಟ್ರವು ತನ್ನದೇ ಆದ ಚೌಕಟ್ಟನ್ನು ಹೊಂದಿರುತ್ತದೆ ಮತ್ತು ಅದರಲ್ಲಿ ನಿಜವಾದ ಸಂಗತಿಯು ಯಾವ ಬಗೆಯದು ಎನ್ನುವುದು ಬಹಳ ಮುಖ್ಯವಾಗುತ್ತದೆ. ನಿಜವಾಗಿಯೂ ಅದು ಹುಸಿಯಾದ ರಾಷ್ಟ್ರದವಾದವನ್ನು ಹೇಳುತ್ತದೆ ಎಂದರೆ ಅದರಲ್ಲಿ ಅರ್ಥವೇ ಇರುವುದಿಲ್ಲ. ಅದು ಅನಗತ್ಯವಾದ ಒಂದು ನಿಲುವನ್ನು ಹೊಂದಿರುತ್ತದೆ. ಆ ಕಾಲಕ್ಕೆ ಅನುಗುಣವಾಗಿ ಸಾಮಾಜಿಕ ಜೀವನ ಮತ್ತು ಅದರ ಸಾಂಸ್ಕೃತಿಕವಾದ ನಿಲುವನ್ನು ಹೊಂದಿರುತ್ತದೆ. ಮತ್ತು ಆಯಾ ಕಾಲಕ್ಕೆ ಅನುಗುಣವಾಗಿ ಧರ್ಮ ಮತ್ತು ನಂಬಿಕೆಗಳು ಬದಲಾಗುತ್ತವೆ. ಕೆಲವು ನಿರ್ದಿಷ್ಟವಾದ ತಾತ್ವಿಕತೆಯು ಹುಟ್ಟುತ್ತದೆ. ಯಾವುದನ್ನು ನಾವು ನಿಜವಾದ ಪರಂಪರೆ ಎಂದು ಹೇಳುತ್ತೇವೆಯೋ ಅದರ ಅರ್ಥವು ಆಯಾ ಕಾಲದ ಸನ್ನಿವೇಶಗಳಿಂದ ನಿರ್ಧಾರವಾಗುತ್ತದೆ. ಸಾಹಿತ್ಯಕ್ಕೂ ಒಂದು ನಿರ್ದಿಷ್ಟವಾದ ತಳಹದಿಯು ಇರುತ್ತದೆ. ಅದನ್ನು ಲೇಖಕನು ವಿಸ್ತರಿಸುತ್ತಾನೆ. ಅವನಿಗೆ ಅದು ಅಗತ್ಯವೂ ಆಗುತ್ತದೆ. ಅದರಲ್ಲಿ ಲೇಖಕನು ತನ್ನ ಜ್ಞಾನ ಮತ್ತು ಅರಿವನ್ನು ವಿವರಿಸುತ್ತಾನೆ ಲೇಖಕರು ಮೂಲಭೂತವಾಗಿ ಒಂದು ತಾತ್ವಿಕತೆಯ ಮುಖಂಡತ್ವವನ್ನು ವಹಿಸಬೇಕಾಗುತ್ತದೆ. ಅದರಲ್ಲಿ ಅದರ ಅಗತ್ಯವೂ ಇರುತ್ತದೆ. ಹಾಗೆಯೇ ಲೇಖಕ ಮತ್ತು ಅವನ ಜವಾಬ್ದಾರಿಯೂ ಬಹಳ ಮುಖ್ಯವಾಗುತ್ತದೆ. ಆದರೆ ಲೇಖಕನಿಗೆ ಸರಿಯಾದ ಒಂದು ದರ್ಶನವು ಇಲ್ಲದೆ ಹೋದಲ್ಲಿ ಅವನೂ ಜನರನ್ನು ತಪ್ಪುದಾರಿಗೆ ಕರೆದೊಯ್ಯುತ್ತಾನೆ. ಲೇಖಕನಿಗೆ ಚರಿತ್ರೆ ಮತ್ತು ಸಮಾಜದ ಸರಿಯಾದ ಅರಿವು ಇಲ್ಲದೆ ಹೋದಲ್ಲಿ ಈ ಸಮಸ್ಯೆಯು ಉಂಟಾಗುತ್ತದೆ. ಚಳುವಳಿ ಮತ್ತು ಅದರ ಅಗತ್ಯವನ್ನು ಲೇಖಕನು ಗ್ರಹಿಸದೇ ಇದ್ದರೆ ಅದರ ಸ್ವರೂಪವು ಬದಲಾಗುತ್ತದೆ. ಅದರಲ್ಲಿ ಒಂದು ಗಂಭೀರವಾದ ನಿಲುವು ಇರಬೇಕಾಗುತ್ತದೆ. ಮತ್ತು ಅದನ್ನು ರೂಪಿಸುವ ಅಗತ್ಯವೂ ಇದೆ ಈ ಕಾರಣದಿಂದ ಲೇಖಕರು ಕೆಲವು ಜವಾಬ್ದಾರಿಯನ್ನು ವಹಿಸಬೇಕಾಗುತ್ತದೆ. ಅದು ಬಹಳ ದೊಡ್ಡದೂ ಹೌದು. ಲೇಖಕನು ಇಂದು ಅತ್ಯಂತ ಮಹತ್ವದ ಪಾತ್ರವನ್ನು ವಹಿಸುವ ಅಗತ್ಯವು ಇದೆ. ನಾವು ಈ ವಿಷಯದಲ್ಲಿ ಸಿನಿಕರಾಗಬೇಕಾದ ಅಗತ್ಯವೂ ಇಲ್ಲ. ಅದು ಒಂದು ವಿಶಿಷ್ಟವಾದ ಪ್ರಕ್ರಿಯೆಯೂ ಹೌದು. ಅದು ಗಂಭೀರವಾದ ಭಾವನೆಯು ಆಗುತ್ತದೆ. ವ್ಯಕ್ತಿಗಳು ತಮಗೆ ಬೇಕಾದ್ದನ್ನು ಮಾತ್ರವೇ ಹೇಳುವುದು ಅಲ್ಲ, ಅದರಲ್ಲಿ ಅವನು ಯಾರ ಪರವಾಗಿ ಮಾತಾಡುತ್ತಾನೆ ಎನ್ನುವುದೂ ಅಷ್ಟೇ ಮುಖ್ಯವಾಗುತ್ತದೆ. ಪ್ರಜೆಗಳಿಗೆ ಭೂತಕಾಲವಿದೆ ಮತ್ತು ಅವರಿಗೆ ಭವಿಷ್ಯವೂ ಇದೆ. ಸಾಮಾಜಿಕ ಚಳುವಳಿ ಮತ್ತು ಒಂದು ಆದರ್ಶವು ಜೊತೆಯಲ್ಲಿ ಹೋಗಬೇಕಾಗುತ್ತದೆ. ನಿತ್ಯದ

ಸಮಸ್ಯೆ ಮತ್ತು ಅದರ ಪರಿಣಾಮಗಳು ಬೇರೆ ಬೇರೆ ವಿನ್ಯಾಸಗಳನ್ನು ಹೊಂದಿರುತ್ತವೆ. ವ್ಯಕ್ತಿ ಮತ್ತು ಸಮುದಾಯದ ಪ್ರಶ್ನೆಯು ಬಹಳ ಮುಖ್ಯವಾದ್ದು ಆಗಿದೆ. ಸಮುದಾಯಕ್ಕೆ ಒಂದು ಚರಿತ್ರೆಯು ಇದೆ. ಸ್ಥಳ ಮತ್ತು ಕಾಲವು ನಮಗೆ ಕೆಲವನ್ನು ಹೇಳುತ್ತದೆ. ವ್ಯಕ್ತಿಯನ್ನು ಒಂದು ಸಮುದಾಯವು ನಿರ್ದಿಷ್ಟವಾಗಿ ಸಂಯೋಜನೆ ಮಾಡುತ್ತದೆ. ನಮ್ಮ ವಾಸ್ತವ ಎಂದರೆ ಅದು ಅದು ನಮ್ಮ ಸಮುದಾಯದ ಪ್ರಶ್ನೆಯೂ ಆಗುತ್ತದೆ. ವ್ಯಕ್ತಿ ಮತ್ತು ಅವನ ಸಮಗ್ರತೆಯು ಒಂದು ಬಗೆಯಲ್ಲಿ ಇರುತ್ತದೆ. ಅದೇ ರೀತಿಯಲ್ಲಿ ನಮಗೆ ವ್ಯಕ್ತಿ ಮತ್ತು ಅವನ ಆಲೋಚನೆಯನ್ನು ಕೆಲವೊಮ್ಮೆ ಒಂದು ಗುಂಪು ನಿರ್ದೇಶಿಸುತ್ತದೆ. ಆದರೆ ನಮಗೆ ದೊರೆಯುವ ಜ್ಞಾನಗಳು ಒಂದೇ ರೂಪದಲ್ಲಿ ಇರುವುದೂ ಇಲ್ಲ. ಬುದ್ಧಿವಂತನಾದ ಮನುಷ್ಯನು ತನ್ನತನವನ್ನು ತಾನೇ ಸಾಧಿಸಿಕೊಳ್ಳುತ್ತಾನೆ. ವ್ಯಕ್ತಿ ಮತ್ತು ಅವನ ಜ್ಞಾನವು ಒಂದು ಬಗೆಯದು. ಅಷ್ಟಕ್ಕೂ ಅದರ ಜೊತೆಗೆ ವ್ಯಕ್ತಿ ಮತ್ತು ಅವನ ವ್ಯಕ್ತಿತ್ವ ಅಂದರೆ ಅದು ಒಂದು ಅಭಿಪ್ರಾಯವು ಮಾತ್ರವೇ ಅಲ್ಲ.

* * * * *



ಒಂದು ಖಾಲಿಯಾದ ಹಾಳೆಯ ಮೇಲೆ ಯಾವುದನ್ನು ಬರೆಯುತ್ತಿದ್ದೇವೆಯೋ ಅದನ್ನು ನಾವು ಬರಹ ಎಂದು ಹೇಳುತ್ತೇವೆ. ಬರಹ ಎನ್ನುವುದು ಒಂದು ಗುರುತು. ಬರಹ ಎಂದರೆ ಅದು ಕೇವಲ ಒಂದು ಸಾಮಾನ್ಯವಾದ ನಮ್ಮ ಸಂವೇದನೆಯನ್ನು ಹೇಳುವುದಿಲ್ಲ. ಅದರಲ್ಲಿ ಬೇರೆ ಆಯಾಮವೂ ಇದೆ. ಬರಹವನ್ನು ನಾವು ಅನೇಕ ಬಾರಿ ಒಂದು ಸ್ವಾಯತ್ತವಾದ ಪ್ರಕ್ರಿಯೆ ಎಂದು ಭಾವಿಸುತ್ತೇವೆ. ಆದರೆ ಅದು ಅಷ್ಟು ಸಾಯತ್ತವಲ್ಲ. ನಮಗೆ ನಮ್ಮ ಬಾಲ್ಯದಲ್ಲಿ ಮೊದಲು ಬರೆಯುವುದಕ್ಕೆ ಹೇಳಿಕೊಡುತ್ತಾರೆ. ಬರೆಯುವುದು ಅಂದರೆ ಅದನ್ನು ಒಂದು ಕೌಶಲ ಎಂದು ರೂಪಿಸಲು ಬೇಕಾದ ಶಿಸ್ತನ್ನು ರೂಪಿಸುತ್ತಾರೆ. ಅದರಲ್ಲಿ ಬರೆಯುವುದು ಅಂದರೆ ಅ, ಆ ಮುಂತಾದವುಗಳನ್ನು ಮತ್ತೆ ಮತ್ತೆ ಬರೆಯುವುದು. ಹೀಗೆ ಬರೆಯುತ್ತಾ ಅದನ್ನು ನೆನಪಿನಲ್ಲಿ ಇಟ್ಟುಕೊಳ್ಳುವುದು. ಅದು ನಮಗೆ ಹೆಚ್ಚು ಅಗತ್ಯವಾಗಿರುತ್ತದೆ. ಒಂದು ವೇಳೆ ನಮಗೆ ಬರೆಯಲು ಸಾಧ್ಯವಾಗುವುದಿಲ್ಲ ಎಂದರೆ ಆಗ ಅದರ ಚಹರೆಗಳು ಗೊತ್ತಾಗುವುದಿಲ್ಲ. ಬರಹಕ್ಕೆ ಒಂದು ರೇಖೆಯು ಇರುತ್ತದೆ. ಆ ರೇಖೆಯೇ ಅತ್ಯಂತ ಮುಖ್ಯ. ಬರಹವನ್ನು ನಾವು ಕಲಿಯುವುದು ಅಂದರೆ ನಿರ್ದಿಷ್ಟವಾದ ಜ್ಞಾನ ಮತ್ತು ಅದರ ಮಾದರಿಯ ಒಳಗೆ ನಾವು ಪ್ರವೇಶಮಾಡುವುದು ಕೂಡಾ ಸತ್ಯ. ನಾವು ಯಾವುದನ್ನು ಬರೆಯಬೇಕು ಎನ್ನುವುದು ನಮಗೆ ಬಿಟ್ಟದ್ದು. ಆದರೆ ಅದು ಪ್ರಜ್ಞಾಪೂರ್ವಕವಾದ ಪ್ರಕ್ರಿಯೆ. ಬರಹಕ್ಕೆ ಒಂದು ತಲ್ಲೀನತೆ ಎನ್ನುವುದು ಇರಬೇಕು. ನಾವು ತಲ್ಲೀನವಾಗದೆ ಬರೆಯಲು ಆಗುವುದಿಲ್ಲ. ಆದರೆ ಇಲ್ಲಿ ಬರಹವನ್ನು ನಾವು ಬೇರೆ ಬೇರೆ ಥರ ರೂಢಿಸಿಕೊಳ್ಳುತ್ತೇವೆ. ಬರಹವು ಅತ್ಯಂತ ಮುಖ್ಯವಾದ ಪ್ರಕ್ರಿಯೆ. ಅದರಲ್ಲಿ ನಾವು ನಮ್ಮ ಕಲ್ಪನೆಯನ್ನು ಹೇಳಬಹುದು. ಅದರಲ್ಲಿ ನಾವು ಪತ್ರವನ್ನು ಬರೆಯಬಹುದು. ಹೀಗಾಗಿ ನಮ್ಮ ಮನಸ್ಸು ಮತ್ತು ಅದರ ಸ್ಥಿತಿಗೆ ಹಾಗೂ ಬರಹಕ್ಕೆ ಒಂದು ಸಂಬಂಧವೂ ಇದೆ.

ISBN 978-81-951931-6-5




ಯುಕ್ತ ಪ್ರಕಾಶನ
ಮೈಸೂರು